# ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ನಾಗರಾಜು ಎನ್.

ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ

ಪ್ರಾಧ್ಯಾಪಕರು






ಭಾಷಾನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೨೦

# ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ನಾಗರಾಜು ಎಸ್.**

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**

ಪ್ರಾಧ್ಯಾಪಕರು





**ಭಾಷಾ ನಿಕಾಯ**

**ಹಸ್ತಪ್ರತಿಶಾಸ್ತ್ರ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ನಾಗರಾಜು ಎನ್.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 06-11-2020

ಸ್ಥಳ : ವಿದ್ಯಾರಣ್ಯ

ಮಾರ್ಗದರ್ಶಕರು

6/11/2020

ಡಾ. ವೀರೇಶ ಬಡಿಗೇರ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಸಂಶೋಧಕರ ದೃಢೀಕರಣ ಪ್ರಮಾಣ ಪತ್ರ

**"ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ವೀರೇಶ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೦೬-೧೧-೨೦೨೦

ಸ್ಥಳ : ವಿದ್ಯಾರಣ್ಯ

ಸಂಶೋಧಕರು

Nagaraju.N.

**ನಾಗರಾಜು ಎನ್.**

ಸಂಶೋಧನಾ ವಿದ್ಯಾರ್ಥಿ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಅಧ್ಯಾಯ: ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಮಹತ್ವ

೧.೪. ಅಧ್ಯಯನದ ವಿಧಾನ

೧.೫. ಅಧ್ಯಯನದ ಸ್ವರೂಪ

೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ: ಒಂದು

# ಪ್ರಸ್ತಾವನೆ

ತಂತ್ರಜ್ಞಾನ ಪ್ರಧಾನ ಸಮಾಜದ ಪ್ರಮುಖ ಲಕ್ಷಣವೆಂದರೆ ವ್ಯಕ್ತಿ ಸಮುದಾಯದ ಅನುಭವದ ನಡುವೆ ಬಿರುಕನ್ನು ಸೃಷ್ಟಿಸುವುದು. ಒಬ್ಬ ಕವಿ, ಸಾಹಿತಿ, ಕಲಾವಿದರಿಗೆ ದತ್ತವಾದ ಎಲ್ಲ ಸಮೂಹ ಸಂಪರ್ಕ ಸಾಧನಗಳಿದ್ದರೂ ಸಮುದಾಯದೊಂದಿಗೆ ಅವನು ಜೀವಂತ ಸಂವಾದ ಮಾಡಲು ಸಾಧ್ಯವಾಗುತ್ತಿಲ್ಲ. ಕಾರಣ ತಾಂತ್ರಿಕ ಆವಿಷ್ಕಾರಗಳಿಗೂ ಸಾಧಕನ ನಡೆಗಳಿಗೂ ಸಮಾನ ಅವಕಾಶಗಳಿಲ್ಲ. ಆಧುನಿಕ ಮನುಷ್ಯನ ಸ್ವಯಂಚಾಲಿತ ನಡುಗಡ್ಡೆ ಜೀವನ ಸಮಾಜದೊಂದಿಗಿನ ಅವನ ಸಂವಹನ ಸಾಧ್ಯತೆಯನ್ನೇ ಕಸಿದುಕೊಂಡಿವೆ. ಹೀಗೆ ಕಳೆದುಕೊಳ್ಳುವುದನ್ನು ಒಂದು ಸಾಂಸ್ಕೃತಿಕ ಸಮಸ್ಯೆ ಎಂದು ಈತ ಭಾವಿಸುವುದೂ ಇಲ್ಲ. ಇದೊಂದು ನಾಗರೀಕ ಸಹಜ ಲಕ್ಷಣವೆಂದು ಒಪ್ಪಿಕೊಂಡುಬಿಡುತ್ತಾರೆ. ಇಂತಹ ಸ್ಥಿತಿಯನ್ನು ಪ್ರಸಿದ್ಧ ವಿಮರ್ಶಕರಾದ ಪ್ರೊ.ಎಚ್.ಎಸ್. ರಾಘವೇಂದ್ರರಾವ್ ಅವರು "ಸ್ವಯಂ ಅಜ್ಞಾತವಾಸ" ಎಂದು ಕರೆಯುತ್ತಾರೆ. ಆಧುನಿಕ ಸಂದರ್ಭದಲ್ಲಿ ಮುಖವಿಲ್ಲದ ಸ್ವಯಂ ಅಜ್ಞಾತವಾಸಿಗಳ ಸಂಖ್ಯೆ ಹೆಚ್ಚಾಗುತ್ತಿದೆ. ಇದಕ್ಕೆ ಇಂದಿನ ಆರ್ಥಿಕ ಮತ್ತು ರಾಜಕೀಯ ಲಾಭಕೋರುತನದ ಒತ್ತಾಸೆಗಳಿವೆ.

ಈ ಅರ್ಥದಲ್ಲಿ ಇಂದು ಬರಹಗಾರ ಮತ್ತು ಓದುಗ ಇಬ್ಬರೂ ಕ್ರಿಯಾಹೀನವಾಗುತ್ತಿದ್ದಾರೆ. ಒಂದು ಅರ್ಥದಲ್ಲಿ ಸೃಜನಶೀಲತೆಯನ್ನು ಕಳೆದುಕೊಂಡು ಅಂಗವಿಕಲವಾದ ಭಾಷೆಯಲ್ಲಿ ಸಂಪರ್ಕ ಪಡೆಯುವಂತಾಗಿದೆ. ಇಲ್ಲಿ ಮನುಷ್ಯಾನುಭವದ ಅಸಿಮೌಲೀಕರಣ ನಡೆಯುತ್ತಿದೆ. ಮನುಷ್ಯ ದಿನೇ ದಿನೇ ಕಡಿಮೆ ಸಂವಹನಶೀಲನಾಗುತ್ತಿದ್ದಾನೆ. ತಾಂತ್ರಿಕ ಸಾಮಾಗ್ರಿಗಳೇ ಅವನ ಸಂಗಾತಿಗಳಾಗುತ್ತಿವೆ. ಹಿಂದೆಂದಿಗಿಂತ ಮನುಷ್ಯ ಇಂದು ತನಗೆ ತಾನೇ ಅಪರಿಚಿತನಾಗುತ್ತಿದ್ದಾನೆ. ನಮ್ಮ ಸುತ್ತಲು ಮೌನ ಹಾಗೂ ಏಕಾಂತದ ಹಲವು ವಿಚಿತ್ರ ಮಾದರಿಗಳು ಹರಡಿಕೊಳ್ಳುತ್ತವೆ. ಇದು ಆಧುನಿಕ ತಂತ್ರಜ್ಞಾನ ಮತ್ತು ಅದನ್ನು ವಿಪರೀತಿ ಅವಲಂಬಿಸಿದವರ ಸ್ಥಿತಿ.

ಆದರೆ ಭಾರತದಂತಹ ದೇಶಗಳಲ್ಲಿ ಪಾರಂಪರಿಕ ಜೀವನ ಕ್ರಮಗಳಿನ್ನೂ ಜೀವಂತವಾಗಿರುವ ಕಾರಣ ಬರಹಗಾರ, ಓದುಗ ಹಾಗೂ ಕೇಳುಗರ ಮಧ್ಯದ ಸಂವೇದನಶೀಲ ಸಂಬಂಧಗಳಿನ್ನೂ ನಾಶವಾಗಿಲ್ಲ. ಇಂಥಲ್ಲಿ ಮಾತ್ರ ಭಾಷೆ ಅಥವಾ ಸಾಹಿತ್ಯ ಎನ್ನುವುದು ಕೇವಲ ಅರ್ಥವನ್ನೋ ಸಂಕೇತವನ್ನೋ ಮತ್ತೊಬ್ಬನಿಗೆ ಸಾಗಿಸಲು ಬಳಸುವ ವಾಹಕವಲ್ಲ. ಅಲ್ಲಿ ಮಾತು ಅರ್ಥದೊಂದಿಗೆ ಅವ್ಯಕ್ತ ಸಂಬಂಧವನ್ನು ಪಡೆದುಕೊಂಡಿರುತ್ತದೆ. ಬರಹಗಾರ, ಓದುಗ ಇಬ್ಬರು ಸಾಂಸ್ಕೃತಿಕ ಅನುಭವವನ್ನು ಸಂವಹನಶೀಲವಾಗಿಸುತ್ತದೆ. ಇಲ್ಲಿ ಸಂವಹನವು ಒಂದು ಸಮಸ್ಯೆಯಲ್ಲ ಲೇಖಕ ಮತ್ತು ಓದುಗರಿಬ್ಬರೂ ಭಾಷೆಯ ಅನುಪಮ ಶಕ್ತಿಯನ್ನು ಸಂಭ್ರಮಿಸುತ್ತಾರೆ.

ಆಧುನಿಕ ತಂತ್ರಜ್ಞಾನದ ಸಮಾಜದಲ್ಲಿ ಮತ್ತು ಸಾಹಿತ್ಯಕ್ಕಿದ್ದ ಸಾಮರ್ಥ್ಯವನ್ನು ಕಿತ್ತುಕೊಳ್ಳಲಾಗುತ್ತಿದೆ. ಸಾಹಿತ್ಯವು ತನ್ನೊಳಗೆ ನೆನಪುಗಳನ್ನು ತುಂಬಿಕೊಂಡಿರುವ ಪಾತ್ರೆಯಾಗುವ ಬದಲು ಮಾಹಿತಿಗಳನ್ನು ಹಂಚುವ ವಾಹಕವಾಗುತ್ತಿದೆ. ಭಾಷೆ ಮತ್ತು ಸಾಹಿತ್ಯವನ್ನಾಗಲಿ, ತಂತ್ರಜ್ಞಾನವನ್ನಾಗಲೀ ಕೇವಲ ಸಂವಹನದ ಉಪಕರಣವನ್ನಾಗಿ ಬಳಸಿದಾಗ ಅದು ತನ್ನ ಸೃಷ್ಟಿ ಸಾಧ್ಯತೆಯನ್ನು ಸಂವಹನದ ಪರಿಣಾಮವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದ ಕನ್ನಡದ ಬಹುಮುಖ್ಯ ಲೇಖಕರು, ಕವಿಗಳು ಗತಕಾಲದ ಮಿಥ್‌ಗಳನ್ನು, ಪ್ರತೀಕಗಳನ್ನು, ನೆನಪುಗಳನ್ನು ಶೋಧಿಸುವ ಮೂಲಕ ದಣಿದು ಹೋಗಿರುವ ಭಾಷಿಕ ಆಕರಗಳಿಗೆ ಹೊಸ ಶಕ್ತಿಯನ್ನು ತುಂಬಲು ಬಳಸಿದ್ದಾರೆ. ಲಿಪಿ ಅಥವಾ ಬರವಣಿಗೆ ಅಥವಾ ತಂತ್ರಜ್ಞಾನ ಶಾಶ್ವತ ಎನ್ನುವ ಭ್ರಮೆಯಿಂದ ಹೊರತಂದಿದ್ದಾರೆ. ಮಾತಿನ ಅಲ್ಪಾಯುಷ್ಯವನ್ನೇ ವೃದ್ಧಿಗೊಳಿಸಲು ಬರವಣಿಗೆ ಶಾಶ್ವತ ಸಾಧನ ಎನ್ನುವ ನಂಬಿಕೆಗಳು ಇಂದು ಸಡಿಲವಾಗುತ್ತಿವೆ. ಆದರೆ ಬರವಣಿಗೆಗೆ ಬಳಸುವ ಸಾಧನಗಳು ಬದಲಾದಂತೆ ಬರವಣಿಗೆಯ ಆಯುಷ್ಯವೂ ಕಡಿಮೆಯಾಗುತ್ತ ಬಂದಿದೆ. ಕಲ್ಲಿನಿಂದ ತಾಳೆಗರಿಗೆ-ಕಾಗದದಿಂದ ಇಂದಿನ ಕಂಪ್ಯೂಟರಿಗೆ ಬರುವಹೊತ್ತಿಗೆ ಬರಹದ ಸ್ಥಿರತೆಯೂ ಕಡಿಮೆಯಾಗುತ್ತಿದೆ. ಈ ಆಯುಷ್ಯದ ಕೊರತೆಯನ್ನು ಮುದ್ರಿತ ಪ್ರತಿಗಳ ಸಂಖ್ಯೆಯನ್ನು ಹೆಚ್ಚಿಸುವುದರಿಂದ ತುಂಬಿಕೊಳ್ಳಲಾಗುತ್ತಿದೆ. ಈ ಅರ್ಥದಲ್ಲಿ ಸಾಹಿತ್ಯದ ಕುರಿತು ತಂತ್ರಜ್ಞಾನ ಕುರಿತು ನಾವು ಯೋಚಿಸುವ ಕ್ರಮವೂ ಕೂಡ ಬದಲಾಗಬೇಕಾಗಿದೆ. ಕಾರಣ ಓದು ಬರಹಗಳು ಪೆನ್ನು ಹಾಳೆಗಳ ಬದಲಾಗಿ ಡಿಜಿಟಲ್ ರೂಪ ಪಡೆಯುತ್ತಿವೆ. ತಂತ್ರಜ್ಞಾನ ಪ್ರಣೀತ ಓದು ಬರಹಗಳು ಮತ್ತೊಮ್ಮೆ ಅಕ್ಷರಸ್ಥ ಮತ್ತು ಅನಕ್ಷರಸ್ಥ ಎಂಬ ಭಾವನೆಯನ್ನು ಬಿತ್ತುತ್ತಿವೆ. ಒಂದು ರೀತಿ ಬರೆಯದೆ ಬರಹ ರೂಪಗೊಳ್ಳುವ ಓದದೆ ಓದು ರೂಪಗೊಳ್ಳುವ ಕಾಲದಲ್ಲಿದ್ದೇವೆ. ಸಾಹಿತ್ಯ ಮತ್ತು ತಂತ್ರಜ್ಞಾನಗಳು ಕೂಡಿ ಹುಟ್ಟಿಸಿರುವ ಈ ಕಾಲದ ಇಂತಹ ಸತ್ಯಗಳನ್ನು ಶೋಧಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

"ತಂತ್ರಜ್ಞಾನ" ಎಂಬ ಪದದ ಪದಶಃ ಅರ್ಥ ನೋಡುವುದಾದರೆ ಅಥವಾ ಅದನ್ನು ಬಿಡಿಸಿ ಬರೆಯುವುದಾದರೆ ತಂತ್ರ+ಜ್ಞಾನ ಎಂದಾಗುತ್ತದೆ. "ತಂತ್ರ-ಎಂದರೆ ಉಪಾಯ, ಯುಕ್ತಿ, ರಹಸ್ಯವಿದ್ಯೆ ಎಂಬ ವಿವಿಧ ಅರ್ಥಗಳು ಪ್ರಾಚೀನ ಕಾಲದಿಂದಲೂ ಇವೆ." ಇದಕ್ಕೆ ವಿವಿಧ

ನಿಘಂಟುಗಳು ಸಮರ್ಥನೆ ನೀಡುತ್ತದೆ. ಇಲ್ಲಿ ಉಪಾಯ ಎಂಬುದಕ್ಕೆ ಸಂವಾದಿಯಾಗಿ 'ಕೌಶಲ್ಯ' ಎಂಬ ಅರ್ಥವನ್ನು ನೀಡಬಹುದು. "ಜ್ಞಾನ" ಎಂಬುದಕ್ಕೆ ಅರಿವು ತಿಳುವಳಿಕೆ ಎಂಬ ಅರ್ಥ ಇದೆ. ಒಟ್ಟಾರೆಯಾಗಿ ಈ ತಂತ್ರ ಮತ್ತು ಜ್ಞಾನ ಎಂಬ ಎರಡೂ ಪದಗಳನ್ನು ಬೆಸೆದಾಗ 'ಕೌಶಲ್ಯ ಮತ್ತು ಅರಿವಿನ ಸಂಯೋಜನೆ' ಎಂಬ ಅರ್ಥ ಬರುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ತಂತ್ರಜ್ಞಾನ, ತಂತ್ರಗಾರಿಕೆ ಎಂಬ ಪದಗಳು ಬಹಳಷ್ಟು ಪ್ರಸಿದ್ಧಿಯನ್ನು ಪಡೆದಿವೆ. ತಾಂತ್ರಿಕತೆ ಎಂಬ ಮೋಡಿ ಇಡೀ ಜಗತ್ತನ್ನೇ ಆವರಿಸಿದೆ. ಜಗತ್ತಿನ ಜನರ ಜೀವನವೆಂಬುದು ತಂತ್ರ-ಯಂತ್ರಮಯವಾಗಿ ಹೋಗಿದೆ. ಜೀವನದ ಬಹುಮುಖ್ಯವಾದ ಸಂಗತಿಗಳಾದ ವ್ಯಾಪಾರ, ಶಿಕ್ಷಣ, ಸಾಹಿತ್ಯ ಇವು ತಂತ್ರಗಾರಿಕೆಯಲ್ಲಿ ಸಿಲುಕಿವೆ.

ಭಾಷೆ ಮತ್ತು ಸಾಹಿತ್ಯ ಎರಡೂ ಉದ್ದೇಶಿತ ಸೃಷ್ಟಿಗಳು. ಈ ಪರಿಧಿಯೊಳಗಡೆ ತಂತ್ರಜ್ಞಾನ ಎಂಬುದರ ಅರ್ಥವನ್ನು ಗ್ರಹಿಸಿದಾಗ ತಂತ್ರ ಎಂದರೆ ಉಪಾಯ, ಕೌಶಲ್ಯ ಎಂದೂ ಜ್ಞಾನ ಎಂದರೆ ಅರಿವು, ತಿಳುವಳಿಕೆ ಎಂದು ಅರ್ಥವಾಗುತ್ತದೆ. ಈ ಎರಡು ಪದಗಳನ್ನು ಕೂಡಿಸಿ ನೋಡಿದಾಗ ಒಂದು ವಿಚಾರವನ್ನು ಒಬ್ಬರಿಂದ ಮತ್ತೊಬ್ಬರಿಗೆ ಕೌಶಲ್ಯಯುಕ್ತವಾಗಿ ತಿಳಿಸುವ ಮಾರ್ಗವನ್ನು ತಂತ್ರಜ್ಞಾನ ಎಂದು ಕರೆಯಬಹುದು.

ಮೇಲಿನ ಅರ್ಥ ಮತ್ತು ವ್ಯಾಖ್ಯಾನವನ್ನು ಗಮನಿಸಿದಾಗ ತಂತ್ರ ಎಂಬುದು ಕೌಶಲ್ಯ, ಚಮತ್ಕಾರ ವಿಶೇಷವಾದಂತಹ ಕ್ರಿಯಾಶೀಲ ಅಂಶವಾಗಿಯೂ ಜ್ಞಾನ ಎಂಬುದು ಯಾವುದೇ ಒಂದು ಕ್ರಿಯೆ ಅಥವಾ ಕ್ರಿಯಾತ್ಮಕ ವಿಚಾರವನ್ನು ಒಬ್ಬರಿಂದ ಮತ್ತೊಬ್ಬರಿಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಸರಿಸುವ ಸಾಧನವೆಂದು ತಿಳಿಯಬಹುದು. ಸಾಹಿತ್ಯ ಮತ್ತು ತಂತ್ರಜ್ಞಾನವೆನ್ನುವುದು ಆಯಾ ಕಾಲದ ಬದುಕಿನ ಶೋಧರೂಪ. ಭಾಷೆ ಮತ್ತು ತಂತ್ರಜ್ಞಾನ ಒಂದಕ್ಕೊಂದು ಸಂಬಂಧ ಹೊಂದಿವೆ. ನನ್ನ ಪ್ರಕಾರ ಭಾಷೆ ಎನ್ನುವುದು ಮನಸ್ಸು. ತಂತ್ರಜ್ಞಾನವೆನ್ನುವುದು ಮಿದುಳು. ಭಾಷೆ ರೂಪುಗೊಂಡಿದ್ದೇ ತಾಂತ್ರಿಕ ವಿಧಾನದಿಂದ. ಚಾರ್ಲ್ಸ್ ಡಾರ್ವಿನ್ ಅಭಿಪ್ರಾಯಪಡುವಂತೆ ಮಾನವ ಪ್ರಪಂಚದ ಆವಿಷ್ಕಾರಗಳಲ್ಲೆಲ್ಲಾ ಭಾಷೆಯ ಉಪಯೋಗ ಮತ್ತು ಮಹತ್ವವಾದ ಆವಿಷ್ಕಾರದಷ್ಟು ಯಾವುದು ಇಲ್ಲ ಎಂದಿದ್ದಾನೆ.

ಕನ್ನಡ ಭಾಷೆಯು ಪ್ರಾಚೀನ ಕಾಲದಿಂದಲೂ ಹಂತಹಂತವಾಗಿ ವಿವಿಧ ರೀತಿಯ ತಾಂತ್ರಿಕ ಬದಲಾವಣೆ ಹೊಂದಿ ಬೆಳೆದುಬಂದಿದ್ದನ್ನು ಸಾಹಿತ್ಯ ಚರಿತ್ರೆಯಲ್ಲಿ ಕಾಣುತ್ತೇವೆ. ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಯ ತಾಂತ್ರಿಕ ಕಾರ್ಯದ ಪ್ರಾರಂಭ ಲಿಪಿ ಇಂದಲೇ ಆಯಿತು. ಲಿಪಿಯ ಉಗಮ, ನಂತರ ಭಾಷೆ, ಭಾಷೆಯ ನಂತರ ಸಾಹಿತ್ಯ ಸೃಷ್ಟಿಯಾಯಿತು. ಹಾಗಾಗಿ ಲಿಪಿ ಲಿಪಿಕಾರರಿಂದಲೇ ಭಾಷೆಯ ತಾಂತ್ರಿಕ ಜನನ ಕಾರ್ಯ ಪ್ರಾರಂಭವಾಯಿತು ಎನ್ನಬಹುದು. ಕನ್ನಡ ಭಾಷೆ ಮತ್ತು ಸಾಹಿತ್ಯದ ಅಧ್ಯಯನದಲ್ಲಿ 'ತಾಂತ್ರಿಕತೆ' ಎನ್ನುವುದು ಲಿಪಿ ಸಂಸ್ಕೃತಿಯಿಂದ ಬರುವಂತಹದ್ದು. ಇದರಲ್ಲಿ ಲಿಪಿಕಾರರ ಪಾತ್ರ ಮಹತ್ತರವಾದುದು.

ರಾಜನಾಗಲಿ ಅಂದಿನ ಕಾಲದಲ್ಲಿ ವಿದ್ವಾಂಸರೆನಿಸಿಕೊಂಡ ಬ್ರಾಹ್ಮಣವರ್ಗ ಅಥವಾ ಪುರೋಹಿತ ವರ್ಗದವರಾಗಲೀ ಲಿಪಿ ಕಾರ್ಯವನ್ನು ಮಾಡುತ್ತಿರಲಿಲ್ಲ. ಇವರು ಯಜ್ಞ-ಯಾಗಾದಿಗಳನ್ನು ಮಾಡುತ್ತಾ ಕೇವಲ ವಿಚಾರ ವಿನಿಮಯ ಮಾಡುತ್ತಿದ್ದರು. ಇಂತಹ ಸಂದರ್ಭದಲ್ಲಿ ತಾಂತ್ರಿಕ ನಿಪುಣರಾದ ಲಿಪಿಕಾರರು ಭಾಷೆ ಮತ್ತು ಸಾಹಿತ್ಯವನ್ನು ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕೆ ತಲುಪಿಸುವಂತಹ ತಾಂತ್ರಿಕ ಕಾರ್ಯ ಮಾಡಿದರು. ಇಂತಹ ಲಿಪಿಲಿಪಿಕಾರರ ತಾಂತ್ರಿಕ ಕೌಶಲ ಕುರಿತ ಅಧ್ಯಯನ ಸಾಕಷ್ಟು ನಡೆದಿಲ್ಲ.

ಭಾಷೆಯ ಬೆಳವಣಿಗೆಯ ಕಾರ್ಯ ಲಿಪಿಯಿಂದ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಲಿಪಿಯನ್ನು ಬರೆಯಲು ಕಲ್ಲು, ಮರಳು, ಸುಟ್ಟ ಇಟ್ಟಿಗೆ, ತಾಳೆಗರಿ, ಲೋಹ, ಚರ್ಮ, ಬಟ್ಟೆ ಮುಂತಾದ ಪರಿಕರಗಳನ್ನು ಬಳಸಿ ಬರೆಯಲಾಗುತ್ತಿತ್ತು. ಆದರೆ ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಮತ್ತೊಂದು ಆಯಾಮ ದಕ್ಕಿತು. ಮುದ್ರಣಯಂತ್ರ, ರೇಡಿಯೋ, ಟಿ.ವಿ., ಕಂಪ್ಯೂಟರ್, ಮೊಬೈಲ್, ಲ್ಯಾಪ್‌ಟಾಪ್, ಯೂಟೂಬ್ ಮುಂತಾದ ತಾಂತ್ರಿಕ ಪರಿಕರಗಳಿಂದ ಭಾಷೆ ಮತ್ತು ಸಾಹಿತ್ಯದ ರಚನೆ ಮತ್ತು ಬೆಳವಣಿಗೆ ಗುಣಾತ್ಮಕವಾಗತೊಡಗಿತು. ಮೊದಲು ಹಸ್ತಪ್ರತಿಗಳನ್ನು ಸಂರಕ್ಷಿಸುವ ವಿಧಾನ ಇದ್ದರೂ ಕಾಲಗತಿಯಲ್ಲಿ ಒಂದಲ್ಲ ಒಂದು ತೊಂದರೆಯಿಂದಾಗಿ ಹಾಳಾಗುತ್ತಿದ್ದವು. ಆದರೆ ಇಂದು ಬಹುಕಾಲದ ಪ್ರಯೋಜನಕ್ಕಾಗಿ 'ಡಿಜಿಟಲ್' ರೂಪದಲ್ಲಿ ಶೇಖರಣೆಗೊಳಿಸಬಹುದಾಗಿದೆ. ಹೋಂ ಪೇಜ್, ವೆಬ್ಸೈಟ್, ಸರ್ವರ್‌ಗಳು ಸಂಗ್ರಹಯೋಗ್ಯ ಸಾಧನಗಳಾಗಿವೆ. ಮಾರ್ಕೋನಿ ಕಂಡುಹಿಡಿದ ರೇಡಿಯೋದಿಂದ ಅದರ ಪ್ರಯೋಜನ ಕನ್ನಡದ ಮೇಲೂ ಆಯಿತು. ಸಾಹಿತ್ಯದ ವಿಚಾರಗಳನ್ನು ರೇಡಿಯೋ ಮುಖಾಂತರ ಪ್ರಸರಣ ಮಾಡಿದಾಗ ಜನರಿಗೆ ಸಾಹಿತ್ಯದ ವಿಚಾರಗಳು ತಿಳಿಯಲ್ಪಟ್ಟವು. ಟಿ.ವಿ. ಮಾಧ್ಯಮದಲ್ಲಿ ಸಾಹಿತ್ಯ ಮತ್ತಷ್ಟು ಶಕ್ತಿಯುತವಾಗಿ ಬೆಳೆಯಿತು. ರೇಡಿಯೋ ಮುಖಾಂತರ ಕೇಳುತ್ತಿದ್ದಂತಹ ಸಾಹಿತ್ಯದ ವಿಚಾರಕ್ಕೆ ಸಂಬಂಧಿಸಿದ ವಿಚಾರಗಳು ಟಿ.ವಿ. ಮಾಧ್ಯಮದಲ್ಲಿ ತೆರೆಯ ಮೇಲೆ ಕಾಣಿಸಲಾರಂಭಿಸಿದವು. ಅಂದರೆ ಶ್ರವಣ ಮಾಧ್ಯಮದಲ್ಲಿದ್ದ ತಾಂತ್ರಿಕ ಕ್ರಿಯೆ ಶ್ರವ್ಯ ಮತ್ತು ದೃಶ್ಯ ಎರಡು ರೂಪದಲ್ಲಿ ಬದಲಾಯಿತು. ಇದಾದ ನಂತರ ಕಂಪ್ಯೂಟರ್ ಬಳಕೆಗೆ ಬಂದಿತು. ಕೀಲಿಮಣೆಗಳ ಸಹಾಯದಿಂದ ಅಕ್ಷರ ಮತ್ತು ವಿಷಯವನ್ನು ತೆರೆಯಮೇಲೆ ಕಾಣುವಂತಾಯಿತು. ನಂತರ ವಿವಿಧ ಕನ್ನಡ ತಂತ್ರಾಂಶದ ಬಳಕೆಯಾಯಿತು. ಕುವೆಂಪು ಕನ್ನಡ ತಂತ್ರಾಂಶ, ಕನ್ನಡ ಸೌರಭ ತಂತ್ರಾಂಶ ಮೊದಲಾದ ತಂತ್ರಾಂಶಗಳಿಂದ ಕಚೇರಿಗಳಲ್ಲಿ ಕನ್ನಡದ ಬಳಕೆಯಾಗತೊಡಗಿತ್ತು. ನಂತರ ಕಚೇರಿಯ ಬಳಕೆಯಲ್ಲಿದ್ದ ಕಂಪ್ಯೂಟರ್ ಕಾವ್ಯಾಭ್ಯಾಸಕ್ಕೂ ಬಳಕೆಯಾಗತೊಡಗಿತ್ತು. ಮುದ್ದಣನ ವಿಶಿಷ್ಟ ಪದಗಳನ್ನು ಬೇಂದ್ರೆಯವರ ಕೆಲವು ಕವನಗಳನ್ನು ಗಣಕಯಂತ್ರಕ್ಕೆ ಅಳವಡಿಸಲಾಯಿತು. ಕುವೆಂಪು ಅವರ ರಾಮಾಯಣ ದರ್ಶನಂ ಕೃತಿಯ ಕೈಬರಹ ಕೃತಿಯನ್ನು ಯಥಾವತ್ ಮುದ್ರಣ ಮಾಡಲಾಯಿತು. ಕಂಪ್ಯೂಟರ್

ಲ್ಯಾಪ್‌ಟಾಪ್‌ಗಳಿಗಿಂತ ಮುಂದುವರೆದು ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ ಇ-ಮಾಧ್ಯಮ ಪ್ರಾರಂಭವಾಯಿತು. ಇ-ಮಾಧ್ಯಮದ ಮೂಲಕ ವ್ಯಾಪಾರ, ಶಿಕ್ಷಣ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ಭಾಷೆ ಇಂದು ಬೆಳೆಯತೊಡಗಿದೆ. ಇಂಟರ್‌ನೆಟ್ ಮುಖಾಂತರ ಕನ್ನಡದ ಪ್ರಸರಣ ಆಗುತ್ತಿದೆ. ಕನ್ನಡ ಭಾಷೆ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಹಲವಾರು ತಾಂತ್ರಿಕ ಕ್ರಿಯಾಯೋಜನೆಗಳು ಈಗಾಗಲೇ ರೂಪುಗೊಂಡಿದ್ದು ಇನ್ನೂ ಕನ್ನಡ ಭಾಷೆ ಮತ್ತು ಸಾಹಿತ್ಯವು ಜಾಗತಿ ಮಟ್ಟದಲ್ಲಿ ಗುರುತಿಸಿಕೊಳ್ಳಬಹುದಾದಂತಹ ಹೊಸ ತಾಂತ್ರಿಕ ಆವಿಷ್ಕಾರಗಳು ನಡೆಯಬೇಕಾಗಿದೆ.

## ೧.೧. ಅಧ್ಯಯನದ ಉದ್ದೇಶ

೧. ಅಕ್ಷರವು ಶಾಶ್ವತವಾದದ್ದು (ಅ+ಕ್ಷರ) ಅದು ಶಾಸನ. ಅದು ಸರಸ್ವತಿ ರೂಪ. ಸೂರ್ಯಚಂದ್ರಾದಿಗಳು ಇರುವವರೆಗೆ ಅದು ಅಳಿಸದು ಎಂದು ಲಿಪಿ ಮತ್ತು ಬರವಣಿಗೆಯನ್ನು ಶಾಶ್ವತ ಮತ್ತು ಅಧಿಕೃತ ಎಂದು ನಂಜಿಕೊಂಡು ಬಂದ ಪರಂಪರೆಯಲ್ಲಿ ಅಕ್ಷರ ಅಮೂಲ್ಯವಾದದ್ದಾಗಿತ್ತು. ಅದಕ್ಕೊಂದು ಸೊಗಸೂ ಇತ್ತು. ಇಂತಹ ಸೊಗಸುಗಾರ ಲಿಪಿ ಮತ್ತು ಲಿಪಿಕಾರರ ಪರಂಪರೆಯೇ ಕನ್ನಡದಲ್ಲಿತ್ತು. ಲಿಪಿ ಮಾಡುವುದೂ ಒಂದು ಸೃಜನಶೀಲ ಕಾಯಕವಾಗಿತ್ತು. ಇಂತಹ ಪರಂಪರೆಯೊಂದರಲ್ಲಿ ಲಿಪಿಕಾರರ ಚಾಣ, ಉಳಿ, ಸುತ್ತಿಗೆಗಳು ತಂತ್ರಜ್ಞಾನಿಯ ಗಣಕಯಂತ್ರಗಳು ಹುಟ್ಟಿಸಿದ ವಿಸ್ಮಯಗಳನ್ನು ಮತ್ತು ತಲ್ಲಣಗಳನ್ನು ಶೋಧಿಸುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

೨. ತಂತ್ರಜ್ಞಾನ ಎಂದರೆ ನನ್ನ ಗ್ರಹಿಕೆಯಲ್ಲಿ ಇಂದಿನ ಆಧುನಿಕ ತಂತ್ರಜ್ಞಾನ ಮಾತ್ರವಲ್ಲ. ಹಾಗೆ ಭಾವಿಸುವುದು ಸಾಧ್ಯವೂ ಅಲ್ಲ. ಹಾಗೆ ಗ್ರಹಿಸಿದರೆ ತಾಂತ್ರಿಕ ಪರಿಣಿತಿ ಎನ್ನುವುದು ಕೇವಲ ಆಧುನಿಕತೆಯ ಕೊಡುಗೆಯಾಗಿ ಆಧುನಿಕ ಪೂರ್ವ ಸಮಾಜವು ತಂತ್ರಜ್ಞಾನ ರಹಿತವಾಗಿತ್ತು. ಅದಕ್ಕೆ ಯಾವ ತಾಂತ್ರಿಕ ತಿಳುವಳಿಕೆ ಇರಲಿಲ್ಲ ಎನ್ನುವ ಸಪಾಟಾದ ತೀರ್ಮಾನಕ್ಕೆ ಬಂದುಬಿಡುವ ಅಪಾಯವಿದೆ. ಭಾಷೆ, ಸಾಹಿತ್ಯ, ಲಿಪಿಗಳನ್ನು ನಾನು ತಾಂತ್ರಿಕ ಆವಿಷ್ಕಾರಗಳೆಂದೆ ಭಾವಿಸುತ್ತೇನೆ. ಕಾರಣ ಕಲ್ಲು, ಮಣ್ಣು, ಮರಳು, ಬಟ್ಟೆ, ಚರ್ಮ, ತಾಳೆಗರಿ, ಭೂರ್ಜ್ವಪತ್ರ, ಉಳಿಚಾಣದಲ್ಲಿ ಅರಳಿದ ಭಾರತೀಯ ಭಾಷೆ ಸಾಹಿತ್ಯದ ಸೃಜನಶೀಲ ಮೂಲಗಳು ಬೆವರು ಬರದವರ ಮನೆಯಲ್ಲಿರದೆ ಬೆವರು ಬಸಿಯುವವರ ಮನೆಯಲ್ಲಿದ್ದದ್ದನ್ನು ಹುಡುಕುವುದು ನನ್ನ ಮತ್ತೊಂದು ಉದ್ದೇಶವಾಗಿದೆ.

೩. ಸಾಹಿತ್ಯ ಮತ್ತು ತಂತ್ರಜ್ಞಾನಗಳು ಎರಡೂ ಮನುಷ್ಯನ ಸೃಜನಶೀಲ ರೂಪಗಳು. ಸಾಹಿತ್ಯ ಸಂವೇದನಶೀಲವಾದದ್ದು ಯಂತ್ರ ಕೌಶಲ್ಯ ಮತ್ತು ವೇಗದ ಸ್ವರೂಪವುಳ್ಳದ್ದು. ಆದರೆ ಕವಿಕೇಂದ್ರಿತ ಸಾಹಿತ್ಯಿಕ ಗ್ರಹಿಕೆಗಳು ಯಂತ್ರ ಅಥವಾ ತಂತ್ರಾಂಶ ಕೇಂದ್ರಿತ ಏಕಮೂಲ ಚಿಂತನೆಗಳು ಸಾಹಿತ್ಯ ಮತ್ತು ತಂತ್ರಜ್ಞಾನವನ್ನು ಎರಡು ವಿರುದ್ಧ

ದಿಕ್ಕುಗಳನ್ನಾಗಿಯೂ ಎರಡು ಪ್ರತ್ಯೇಕ ತಜ್ಞತೆಗಳು ಎನ್ನುವ ವಿಚ್ಛೇದನಾ ವಾದವನ್ನು ಹುಟ್ಟಿಸಿದವು. ವಿಚಿತ್ರವೆಂದರೆ ಭಾರತೀಯ ಪಾಂಚಾಳರು(ಬಡಿಗ, ಕಮ್ಮಾರ, ಕಂಚುಗಾರ, ಶಿಲ್ಪಿ, ಪತ್ತಾರ) ಕಾಯಸ್ಥರು, ಸೂತರು ಅಕ್ಷರಶಿಲ್ಪಿಗಳಾಗಿದ್ದರು. ಓದು, ಬರಹ ಸಾಮಗ್ರಿ ತಯಾರಿಕೆಯಲ್ಲಿ ಹತ್ತಕ್ಕೂ ಹೆಚ್ಚು ಕುಶಲಕರ್ಮದ ಸಮುದಾಯಗಳು ಜನ ಬದುಕಿನ ಅಪೇಕ್ಷೆಯೊಂದಿಗೆ ಬೆಸೆಯಲ್ಪಟ್ಟಿದ್ದವು. ಕುಶಲಕರ್ಮಿಗಳ ನೆಲೆಯಲ್ಲಿ ತಾಂತ್ರಿಕತೆ ಎನ್ನುವುದು ಆಧುನಿಕ ತಂತ್ರಜ್ಞಾನದಂತೆ ಕೇವಲ ತಜ್ಞತೆಯಾಗಿರದೆ ಅದೊಂದು 'ಪ್ರಕ್ರಿಯಾತ್ಮಕ ಕೌಶಲ್ಯ'ವಾಗಿತ್ತು ಅರಿವು ಮತ್ತು ಕೌಶಲ್ಯ ಭಿನ್ನವಾಗಿರಲಿಲ್ಲ. ಹೀಗಾಗಿ ಬರಹದ ತಾಂತ್ರಿಕತೆಯನ್ನು ಶ್ರಮ ಸಮುದಾಯದ ಜ್ಞಾನವನ್ನಾಗಿ ಅಧ್ಯಯನಿಸುವುದು ನನ್ನ ಮತ್ತೊಂದು ಪ್ರಧಾನ ಉದ್ದೇಶವಾಗಿದೆ.

೪. ಕಲ್ಲಿನಿಂದ ತಾಳೆಗರಿಗೆ, ತಾಳೆಗರಿಯಿಂದ ಕಾಗದಕ್ಕೆ, ನಂತರ ಮುದ್ರಣ, ದೃಶ್ಯ ಹಾಗೂ ಶ್ರವ್ಯ ಮತ್ತು ಇಂದಿನ ಡಿಜಿಟಲ್ ರೂಪದವರೆಗೆ ನಡೆದ ಮತ್ತು ನಡೆಯುತ್ತಿರುವ ಸಾಹಿತ್ಯ ಮತ್ತು ತಂತ್ರಜ್ಞಾನದ ಕೂಡಿಕೆಯನ್ನು, ಅಕ್ಷರದ ಅಹಂಕಾರ ಮತ್ತು ಅಧಿಕಾರಸ್ಥ ನೆಲೆಗಳು ಸಮುದಾಯ ಪ್ರಜ್ಞೆಯ ಸಾಹಿತ್ಯದಲ್ಲಿ ಹುಟ್ಟಿಸಿದ ಶ್ರೇಷ್ಠ-ಕನಿಷ್ಠ ಪಂಡಿತ-ಪಾಮರ ಸಾಹಿತಿ ಮತ್ತು ಸಾಫ್ಟ್‌ವೇರ್ ತಂತ್ರಜ್ಞ ಎನ್ನುವ ಬಿರುಕುಗಳು ಹುಟ್ಟಿಸಿದ ಸಾಂಸ್ಕೃತಿಕ ಪರಕೀಯತೆಯನ್ನು ವಿವರಿಸಿಕೊಳ್ಳುವುದು. ಅದೇ ಹೊತ್ತಿಗೆ ಸಾಹಿತ್ಯ ಮತ್ತು ತಂತ್ರಜ್ಞಾನದ ಮೂಲಕ ಭಾಷೆ ಮತ್ತು ಭಾವನೆಗಳನ್ನು ಇಡಿಗಾಳಿನಂತೆ ಹಿಡಿದಿಟ್ಟಿದ್ದ ಸಮುದಾಯ ಪ್ರಜ್ಞೆಯ ಪ್ರಕ್ರಿಯಾತ್ಮಕ ನೆಲೆಗಳನ್ನು ವಿಶ್ಲೇಷಿಸುವುದು ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

೫. ಕನ್ನಡ ಸಾಹಿತ್ಯ ಜೊತೆಗೆ ಸಾಹಿತ್ಯೇತರ ರಂಗಗಳನ್ನು ಅಧ್ಯಯನ ಮಾಡಲು ಅವಶ್ಯಕತೆ ಇರುವಂತಹ ತಂತ್ರಾಂಶಗಳ ಬಗ್ಗೆ ಚರ್ಚಿಸುವುದು. ಕನ್ನಡ ಸಾಹಿತ್ಯ ಸಂಸ್ಕೃತಿ ವಿದ್ಯುನ್ಮಾನ ಯಂತ್ರಗಳ ಮೂಲಕ ಕರ್ನಾಟಕವೆಂಬ ಭೌಗೋಳಿಕ ಪರಿಮಿತಿಯನ್ನು ದಾಟಿ ವಿಶ್ವವ್ಯಾಪಿಯಾದ ನಡೆಗಳನ್ನು ಗ್ರಹಿಸುವುದು.

## ೧.೨. ಅಧ್ಯಯನದ ವ್ಯಾಪ್ತಿ

ಸಾಹಿತ್ಯ ರಚನೆ, ಮುದ್ರಣ ಮತ್ತು ಪ್ರಸರಣ ಈ ಪ್ರಕ್ರಿಯೆ ನನ್ನ ಅಧ್ಯಯನದ ಪ್ರಮುಖ ಪರಿಪ್ರೇಕ್ಷೆಯಾಗಿದೆ. ಲೇಖನ ಸಾಮಗ್ರಿಗಳು, ಲಿಪಿಕಾರರು ಮತ್ತು ಲಿಪಿಕ ಸಮುದಾಯಗಳು ಮುದ್ರಣ ಅಥವಾ ಆಧುನಿಕಪೂರ್ವದ ಸಾಹಿತ್ಯದ ತಾಂತ್ರಿಕ ಸ್ವರೂಪವನ್ನು ಹೇಳಿದರೆ ಮುದ್ರಣ ಶ್ರವ್ಯ ಮತ್ತು ದೃಶ್ಯ ತಂತ್ರಜ್ಞಾನ ಆಧುನಿಕ ಪರಿಕಲ್ಪನೆಯಾಗಿದೆ. ಗಣಕಯಂತ್ರ ಮತ್ತು ಸಾಮಾಜಿಕ ಜಾಲತಾಣಗಳು ಆಧುನಿಕೋತ್ತರ ಆಯಾಮಗಳಾಗಿವೆ. ಲಿಪಿಯ ಆರಂಭದಿಂದ ಹಿಡಿದು ಇಂದಿನ ಡಿಜಿಟಲ್ ತಂತ್ರಜ್ಞಾನದ ಬಳಕೆಯವರೆಗೂ ನನ್ನ ಅಧ್ಯಯನದ ವ್ಯಾಪ್ತಿ ಇದೆ. ಈ

ಹರವು ವಾಸ್ತವವಾಗಿ ಹಿರಿದೆನಿಸಿದರೂ ಸಾಹಿತ್ಯ ಮತ್ತು ತಾಂತ್ರಿಕ ಎನ್ನುವ ಪರಿಮಿತಿಯೊಳಗೆ ಇವುಗಳಲ್ಲಾದ ಪ್ರಯೋಗಶೀಲತೆಯನ್ನು ಗುರುತಿಸುವುದು ಅನಿವಾರ್ಯವೂ ಮತ್ತು ಅಗತ್ಯವೂ ಎಂಬುದು ನನ್ನ ನಂಬಿಕೆ. ಅಕ್ಷರ ಮೂರ್ತ ಸ್ವರೂಪ ಪಡೆದ ಅದು ಡಿಜಿಟಲ್ ರೂಪದಲ್ಲಿ ಅಮೂರ್ತಗೊಳ್ಳುವ ಈ ವಿಸ್ಮಯವೇ ನನ್ನ ಅಧ್ಯಯನದ ಪರಿಧಿಯಾಗಿದೆ.

### ೧.೩. ಅಧ್ಯಯನದ ಮಹತ್ವ

ಆಧುನಿಕ ಜಗತ್ತಿನಲ್ಲಿ ತಂತ್ರಜ್ಞಾನದ ಬಳಕೆ ಹೆಚ್ಚುತ್ತಿದ್ದು ತಂತ್ರಜ್ಞಾನದ ಕಾರ್ಯ ನಿರ್ವಹಣೆಗೆ ಭಾಷೆ ಮುಖ್ಯವಾದ ಸಾಧನವಾಗಿರುತ್ತದೆ. ಪ್ರಾರಂಭದ ತಂತ್ರಜ್ಞಾನದಲ್ಲಿ ಇಂಗ್ಲಿಷ್ ಭಾಷೆಯು ಸಂಯೋಜನೆಗೊಂಡು ಎಲ್ಲಾ ಕ್ಷೇತ್ರಗಳಲ್ಲೂ ವ್ಯಾಪಕವಾಗಿ ಬೆಳೆಯಿತು. ಬಳಕೆಯಲ್ಲಿ ಹಲವಾರು ಭಾಷೆಗಳು ಇದ್ದರೂ ತಾಂತ್ರಿಕವಾಗಿ ಬಳಕೆಯಾಗಲಿಲ್ಲ. ಇಂಗ್ಲಿಷ್ ಭಾಷೆಯು ತಾಂತ್ರಿಕವಾಗಿ ಬೆಳೆಯಲು ಕಾರಣ ಕೈಗಾರಿಕಾ ಕ್ರಾಂತಿಯಿಂದಾದ ಆವಿಷ್ಕಾರಗಳು. ಕನ್ನಡ ಭಾಷೆಯು ಒಂದು ನಿರ್ದಿಷ್ಟ ಭೌಗೋಳಿಕತೆಯಲ್ಲಿ ಹೊಂದಿದೆ. ಇಂಗ್ಲಿಷಿನ ಪ್ರಭಾವ ಕನ್ನಡ ಭಾಷೆಯ ಮೇಲೂ ಆಗಿದೆ. ಆದ್ದರಿಂದ ಕನ್ನಡ ಭಾಷೆ ಸ್ಪರ್ಧಾತ್ಮಕ ಯುಗದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೊಸ ಹೊಸ ತಾಂತ್ರಿಕ ಆವಿಷ್ಕಾರಗಳಿಂದ ಭಾಷಾ ಬಳಕೆಯಲ್ಲಿ ತನ್ನ ಪಾರಮ್ಯತೆಯನ್ನು ಉಳಿಸಿಕೊಳ್ಳುತ್ತಿದೆ. ಹಾಗಾಗಿ ಇಂಗ್ಲಿಷ್ ಭಾಷೆಗೆ ಇದ್ದ ಪಾರಮ್ಯತೆ ಕಡಿಮೆಯಾಗುತ್ತಿದ್ದು, ಪ್ರಾದೇಶಿಕ ಭಾಷೆಗಳ ತಾರತಮ್ಯ ಹೆಚ್ಚುತ್ತಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಆದುದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ ಮುಖ್ಯವಾಗಿದೆ. ಹೊಸ ಹೊಸ ಆವಿಷ್ಕಾರಗಳು ಕನ್ನಡ ಭಾಷೆಗೆ ಸಂಬಂಧಪಟ್ಟಂತೆ ಆಗುತ್ತಿವೆ. ಸಾಹಿತ್ಯವನ್ನು ಓದುಗ ಸಮುದಾಯವು ತಂತ್ರಜ್ಞಾನದ ಮೂಲಕ ಓದುವಂತಹ ಅವಕಾಶ ಬಂದಿದೆ. ಕರ್ನಾಟಕ ಅಲ್ಲದೇ ವಿದೇಶದಲ್ಲೂ ಕನ್ನಡ ಸಾಹಿತ್ಯವನ್ನು ವಿವಿಧ ಆ್ಯಪ್‌ಗಳ ಮೂಲಕ ಓದುವಂತಹ ಅವಕಾಶವಿದೆ. ಆದುದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದ ಸಾಂಪ್ರದಾಯಿಕ ಓದಿನ ಪಲ್ಲಟಗಳನ್ನು ಅರಿಯುವುದು ನನ್ನ ಅಧ್ಯಯನದ ಮಹತ್ವವಾಗಿದೆ.

### ೧.೪. ಅಧ್ಯಯನದ ವಿಧಾನ

ನನ್ನ ಪ್ರಕಾರ ಅಧ್ಯಯನ ವಿಧಾನ ಎನ್ನುವುದು ಒಂದು ಅಳಿಸಲಾಗದ ವಿಧಿ ಬರಹವಲ್ಲ. ಅವು ಮೊದಲೇ ರಚಿತವಾಗಿದ್ದು ಅವನ್ನು ಶ್ರದ್ಧೆಯಿಂದ ಪರಿಪಾಲಿಸುವುದು ಅಥವಾ ಅನ್ವಯ ಮಾಡಿಕೊಳ್ಳುವುದು ಮಾತ್ರ ಸಂಶೋಧಕನ ಕೆಲಸ ಎನ್ನುವುದು ರೂಢಿಯಾಗಿದೆ. ಆದರೆ ಇದಲ್ಲ ನಮ್ಮ ಕಣ್ಣೆದುರಿನ ಲೋಕವು ಪ್ರತಿಕ್ಷಣವು ಬದಲಿಯಾಗುತ್ತಿರುತ್ತದೆ. ನಮ್ಮ ಬದುಕಿಗೂ ಅದರ ವಿಧಾನಗಳಿಗೂ ನಮ್ಮ ಅಧ್ಯಯನಗಳಿಗೂ ನೇರ ಸಂಬಂಧವಿದೆ. ಹೀಗಿದ್ದಾಗ ನಮ್ಮ ದೃಷ್ಟಿಕೋನಗಳು ಹೀಗೆಯೇ ಇರಬೇಕು ಎನ್ನುವ ಮಾತು ಸರಿಯಾಗದು. ನಮ್ಮ ಅಧ್ಯಯನಗಳು ಸಮಕಾಲೀನ ಬದುಕಿನ ಜೊತೆ ಅರ್ಥಪೂಣ ಸಂಬಂಧವನ್ನು ಹೊಂದಬೇಕಾದರೆ ನನ್ನ ಅಧ್ಯಯನದ ನಿಯಮಗಳೂ ಬದಲಾಗಬೇಕು.

ನನ್ನ ಪ್ರಕಾರ ಅಧ್ಯಯನ ವಿಧಾನವೆಂದರೆ ನನ್ನ ಸಂವೇದನೆಗೆ ದಕ್ಕುವ ನನ್ನ ಕಣ್ಣ ಮುಂದಿನ ಲೋಕವನ್ನು ನೋಡುವ ಚಲನಶೀಲವೂ, ಸೂಕ್ಷ್ಮವೂ, ಸಂವೇದನಶೀಲವೂ ಆದ ದೃಷ್ಟಿಕೋನ. ಈ ದೃಷ್ಟಿಕೋನವು ನಿರಂತರವಾಗಿ ಜೀವಂತವೂ ಸಮಕಾಲೀನವೂ ಆಗಿರಬೇಕಾಗುತ್ತದೆ. ಹಾಗೆ ಅಧ್ಯಯನ ವಿಧಾನಗಳ ಹುಡುಕಾಟವೂ ಕೂಡ ನಿರಂತರವಾಗಿರಬೇಕಾಗಿರುತ್ತದೆ. ನಾನು ಯಾವುದೇ ನಿರ್ದಿಷ್ಟ ವಿಶ್ಲೇಷಣಾ ಅಥವಾ ಸಿದ್ಧಾಂತದ ಮಾದರಿ ವಿಧಾನಗಳನ್ನು ಇಲ್ಲಿ ಅನುಸರಿಸಿಲ್ಲ. ಬದಲಾಗಿ ಸಾಹಿತ್ಯ-ಸಂವೇದನೆಯೊಂದು ತಾಂತ್ರಿಕ ಆವಿಷ್ಕಾರಗಳೊಂದಿಗೆ ಮಾಡಿಕೊಂಡ ರಾಜಿ, ಸಂಧಾನಗಳ ಕಷ್ಟಗಳನ್ನು ಹುಡುಕಿಕೊಳ್ಳುವ ಪ್ರಕ್ರಿಯಾತ್ಮಕ ಸ್ವರೂಪಕ್ಕೆ ಮೊರೆ ಹೋಗಿದ್ದೇನೆ. ಕಟ್ಟಿದ ಮಾದರಿಗಳಿಂದ ಬಿಡಿಸಿಕೊಂಡು ಕಟ್ಟಿಕೊಳ್ಳುವ ಮಾದರಿಗಳತ್ತ ದೃಷ್ಟಿಸಿದ್ದೇನೆ.

**೧.೫. ಅಧ್ಯಯನದ ಸ್ವರೂಪ**

ನನ್ನ ಅಧ್ಯಯನದ ಅನುಕೂಲತೆಗಾಗಿ ಏಳು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

**ಮೊದಲನೆಯ ಅಧ್ಯಾಯದಲ್ಲಿ:** ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ವಿಧಾನ, ಸ್ವರೂಪ, ಹಾಗೂ ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಗಳ ಬಗ್ಗೆ ಚರ್ಚಿಸಿದ್ದೇನೆ.

**ಎರಡನೆಯ ಅಧ್ಯಾಯ, ಅಧ್ಯಯನದ ಮುಖ್ಯ ಪರಿಕಲ್ಪನೆ:** ಇಲ್ಲಿ ಸಾಹಿತ್ಯ ಮತ್ತು ತಂತ್ರಜ್ಞಾನಗಳೆಂದರೇನು? ಅದರ ಸಾಂಪ್ರದಾಯಿಕ ಮತ್ತು ಆಧುನಿಕ ವ್ಯಾಖ್ಯಾನಗಳೇನು? ಎನ್ನುವ ಚರ್ಚೆಯೊಂದಿಗೆ ಸಾಹಿತ್ಯ ಹೃದಯದ ಭಾಷೆಯಾದರೆ ತಂತ್ರಜ್ಞಾನ ಮೆದುಳಿನ ಭಾಷೆಯಾಗಿ ಜ್ಞಾನ ಸಂಸ್ಕೃತಿಯಾಗಿ ಬೆಳೆದುಬಂದ ನಡೆಯನ್ನು ಮರು ನಿರ್ವಚಿಸಿಕೊಂಡ ಬಗೆಯನ್ನು ಪರಿಕಲ್ಪನಾತ್ಮಕವಾಗಿ ಚರ್ಚಿಸಿದ್ದೇನೆ. ಆ ಮೂಲಕ ನನ್ನ ಅಧ್ಯಯನಕ್ಕೆ ಬೇಕಾದ ಸ್ಪಷ್ಟ ಆಲೋಚನ ಕ್ರಮ ಒಂದನ್ನು ಹುಡುಕೊಂಡಿದ್ದೇನೆ.

**ಮೂರನೆಯ ಅಧ್ಯಾಯ, ಕನ್ನಡ ಸಾಹಿತ್ಯದ ಬೆಳವಣಿಗೆ ಆಧುನಿಕ ಪೂರ್ವ ತಾಂತ್ರಿಕ ಸ್ವರೂಪಗಳು:** ಲಿಪಿಯ ಮತ್ತು ಬರಹದ ಸಾಂಪ್ರದಾಯಿಕ ಹಾಗೂ ಪ್ರಗತಿಪರ ನಿಲುವುಗಳನ್ನು ಒಟ್ಟು ಭಾರತೀಯ ಮನಸ್ಥಿತಿಯ ಹಿನ್ನೆಲೆಯಲ್ಲಿ ವಿವರಿಸಿಕೊಳ್ಳಲಾಗಿದೆ. ಬರಹ ತಂತ್ರಜ್ಞಾನ, ಅದಕ್ಕೆ ಬಳಕೆಯಾದ ಲೇಖನ ಸಾಮಗ್ರಿಗಳು, ಭಾಷೆಯು ಸಾಹಿತ್ಯದ ವಾಹಕವಾಗಿ ಬೆಳೆದ ಬಗೆ, ಸಾಹಿತ್ಯ ಕೃತಿಗಳ ರಚನೆ ಮತ್ತು ಸಂರಕ್ಷಣಾ ತಾಂತ್ರಿಕತೆಯಲ್ಲಿ ಸಾಮುದಾಯಿಕ ನೆಲೆಗಳ ಕೊಡುಗೆ, ಲಿಪಿಕಾರರು, ಓಲೆಕಾರರು, ಬಡಿಗೇರರು, ಚಿತ್ರಗಾರರು, ವಸ್ತ್ರದವರು ಮುಂತಾದವರು ನೀಡಿದ ತಾಂತ್ರಿಕ ಕೊಡುಗೆಗಳನ್ನು ಅಧ್ಯಯನ ಮಾಡಿದ್ದೇನೆ.

**ನಾಲ್ಕನೆಯ ಅಧ್ಯಾಯದಲ್ಲಿ, ಕನ್ನಡ ಸಾಹಿತ್ಯದ ಬೆಳವಣಿಗೆ: ಮುದ್ರಣ ತಂತ್ರಜ್ಞಾನ:** ಬಹುಮುಖ್ಯವಾಗಿ ಇಲ್ಲಿ ವಿದೇಶಿ ಪ್ರೇರಣೆಯಿಂದ ಹುಟ್ಟಿದ ಮುದ್ರಣಾಲಯಗಳು ಮತ್ತು ಅವು

ಮಾಡಿದ ಕನ್ನಡ ಸಾಹಿತ್ಯ ಕೃತಿಗಳ ಮುದ್ರಣ, ಅದಕ್ಕಾಗಿ ಕಂಡುಕೊಂಡ ಮುದ್ರಣ ಎಳೆಗಳು ಅವುಗಳ ದೇಶಿ ಮತ್ತು ವಿದೇಶಿ ವಿನ್ಯಾಸಗಳು ಮತ್ತು ಅದರ ಸಮಸ್ಯೆಗಳ ಕುರಿತಾಗಿ ಚರ್ಚಿಸಿದ್ದೇನೆ. ಜೊತೆಗೆ ಸಾಹಿತ್ಯ ಮುದ್ರಣದ ಜೊತೆಗೆ ಅದರ ಸಂರಕ್ಷಣೆ ಮತ್ತು ಪ್ರಸರಣವೂ ಮುಖ್ಯವಾಗಿರುತ್ತದೆ. ಅದಕ್ಕಾಗಿ ರೂಪಗೊಂಡ ದೃಶ್ಯ ಮತ್ತು ಧ್ವನಿ ಮುದ್ರಣ ತಂತ್ರಜ್ಞಾನದ ಸ್ವರೂಪ ಕುರಿತು ಚರ್ಚಿಸಿದ್ದೇನೆ.

**ಐದನೆಯ ಅಧ್ಯಾಯ, ಕನ್ನಡ ಸಾಹಿತ್ಯದ ಬೆಳವಣಿಗೆ: ಗಣಕಯಂತ್ರ ಮತ್ತು ತಂತ್ರಾಂಶದ ಪರಿಕಲ್ಪನೆ:** ಇದರಲ್ಲಿ ಗಣಕ ಯಂತ್ರದ ಆವಿಷ್ಕಾರ ತಂತ್ರಾಂಶದ ಅನುಷ್ಠಾನ ಪ್ರಕಾರಗಳು ಹಾಗೂ ಅವುಗಳ ಬಳಕೆಯಲ್ಲಿನ ವಿಶಿಷ್ಟತೆ, ತಂತ್ರಜ್ಞಾನದ ಮೂಲಕ ಸಾಹಿತ್ಯ ಅಧ್ಯಯನದಲ್ಲಿ ನಡೆದ ಹೊಸ ಪ್ರಯೋಗ, ಕಾವ್ಯಾಭ್ಯಾಸ ಭಾಷಾಂತರ ಇವುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಹಸ್ತಪ್ರತಿಗಳನ್ನು ಪುನಾರಚಿಸಿದ ಬಗ್ಗೆಯೂ ಚರ್ಚಿಸಿದ್ದೇನೆ. ಹಾಗೆಯೇ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಕುರಿತಂತೆ ಅನಿವಾರ್ಯವಾಗಿ ಬೇಕಾದ ತಂತ್ರಾಂಶಗಳ ಬಗ್ಗೆ ಚರ್ಚಿಸಿದ್ದೇನೆ.

**ಆರನೆಯ ಅಧ್ಯಾಯ, ಕನ್ನಡ ಸಾಹಿತ್ಯದ ಬೆಳವಣಿಗೆ: ಸಾಮಾಜಿಕ ಜಾಲತಾಣಗಳು: ಫೇಸ್‌ಬುಕ್,** ವಾಟ್ಸಪ್‌ಗಳು, ಬ್ಲಾಗ್‌ಗಳು, ವೆಬಿನಾರ್ ಕಲ್ಪನೆಗಳಲ್ಲಿ ಕನ್ನಡ ಜಗತ್ತು ತನ್ನನ್ನು ವಿಸ್ತರಿಸಿಕೊಂಡ ಬಗೆಗಳನ್ನು ವಿವರಿಸಲಾಗಿದೆ. ಹಾಗೂ ಅದರ ಮಿತಿಗಳನ್ನು ಗುರುತಿಸಲಾಗಿದೆ.

**ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು** ಇದರಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ನಂತರದ ಅಗತ್ಯ ಅನುಬಂಧಗಳನ್ನು, ಪರಾಮರ್ಶನ ಗ್ರಂಥಗಳನ್ನು ನೀಡಲಾಗಿದೆ.

### ೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಸಾಹಿತ್ಯವು ಸಾಮಾಜಿಕ ಸ್ಥಿತ್ಯಂತರದ ಕನ್ನಡಿ ಎಂಬಂತೆ ಆಯಾ ಕಾಲಘಟ್ಟಕ್ಕೆ ತಕ್ಕಂತೆ ವಿವಿಧ ಪ್ರಕಾರಗಳಲ್ಲಿ ರೂಪುಗೊಳ್ಳುತ್ತಿರುತ್ತದೆ. ಈ ಸಾಹಿತ್ಯದ ಉಗಮಕ್ಕೆ ಸಾಹಿತ್ಯ ಪ್ರಿಯರು ಪ್ರೋತ್ಸಾಹ ನೀಡುವಂತೆ ಅಧಿಕಾರ ವರ್ಗವೂ ಮುಖ್ಯವಾಗಿರುತ್ತದೆ. ಹಾಗೆಯೇ ಸೃಷ್ಟಿಯಾದ ಸಾಹಿತ್ಯವನ್ನು ಸಮಾಜದಲ್ಲಿ ಒಂದು ವರ್ಗದಿಂದ ಮತ್ತೊಂದು ವರ್ಗಕ್ಕೆ, ಒಬ್ಬರಿಂದ ಹಲವಾರು ಮಂದಿಗೆ, ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ತಲುಪಲು ಅಥವಾ ಪ್ರಸಾರಗೊಳ್ಳಲು ಅದರದೇ ಆದ ತಂತ್ರಜ್ಞಾನ ಅಥವಾ ತಾಂತ್ರಿಕ ಪ್ರವೃತ್ತಿ ಕಾರಣವಾಗುತ್ತದೆ.

ನಮ್ಮ ಭಾರತ ದೇಶದ ಸಾಮಾಜಿಕ ಸಂರಚನೆಯಲ್ಲಿ ಮೇಲು-ಕೀಳು, ಶ್ರೇಷ್ಠ-ಕನಿಷ್ಠ ಎಂಬ ಅನಿಷ್ಟ ಪದ್ಧತಿಯಿಂದ ಅಕ್ಷರ ಕಲಿಕೆ, ಸಾಹಿತ್ಯ ಕಲಿಕೆ ಹಾಗೂ ಮುಂತಾದ ಅವಕಾಶಗಳು ಒಂದು ವರ್ಗದಲ್ಲಿಯೇ ನೆಲೆಯಾಗಿದ್ದವು. ಆದರೆ ಇನ್ನುಳಿದ ಅಸಂಖ್ಯಾತರಿಗೆ ಅಕ್ಷರ ಜ್ಞಾನ, ಸಾಹಿತ್ಯಜ್ಞಾನ ಪಡೆಯುವಂತಹ ಅವಕಾಶ ಶತ ಶತಮಾನಗಳೂ ಕಳೆದರೂ ಕೂಡ ಲಭ್ಯವಿಲ್ಲದೆ ಹೋದುದು ದುರಂತವೇ ಸರಿ.

ಪ್ರತಿಯೊಬ್ಬ ಮನುಷ್ಯನಿಗೂ ಸಾಹಿತ್ಯಾಭಿರುಚಿಯನ್ನು ಪಡೆಯುವ ಹಂಬಲ ಇರುವಂತಹದ್ದು ಸರ್ವೇ ಸಾಮಾನ್ಯವಾಗಿರುತ್ತದೆ. ಹೀಗಿರುವಾಗ ಅಲ್ಪ ಪ್ರಮಾಣದಲ್ಲಿ ಪ್ರಾರಂಭದಲ್ಲಿ ಸಾಹಿತ್ಯ ಕೃತಿಗಳು ರಚನೆಗೊಂಡು ತದನಂತರ ಸಾಹಿತ್ಯ ಸೃಷ್ಟಿಯ ಕಾರ್ಯ ನಿಧಾನವಾಗಿ ವಿಸ್ತರಿಸತೊಡಗಿತು. ಈ ಸಾಹಿತ್ಯ ಸೃಷ್ಟಿ ಅಥವಾ ರಚನೆಯಾದರೆ ಮುಗಿಯುವುದಿಲ್ಲ. ಅದು ಬಹಳ ಕಾಲ ಉಳಿಯುವುದು ಮುಖ್ಯವಾಗಿರುತ್ತದೆ. ಬಹುಕಾಲ ಉಳಿಯದೇ ಹೋದಲ್ಲಿ ಅದು ನಾಶಹೊಂದುತ್ತದೆ. ಸಾಹಿತ್ಯದಲ್ಲಿನ ಭಾಷೆ ವಸ್ತು ವಿಷಯ, ಛಂದಸ್ಸು, ಅದರ ಭಾವ, ಮೌಲ್ಯ ಮುಂತಾದ ವಿಷಯಗಳು ಯಾರಿಗೂ ತಿಳಿಯದೇ ಹೋಗುತ್ತದೆ. ಹಾಗಾಗಿ ಸಾಹಿತ್ಯ ಸೃಷ್ಟಿಗೆ ಜ್ಞಾನ ಎಷ್ಟು ಮುಖ್ಯವೋ ಸಾಹಿತ್ಯ ಬೆಳವಣಿಗೆ ಮತ್ತು ಉಳಿಯುವಿಕೆಗೂ ಅಷ್ಟೇ ಮುಖ್ಯವಾಗಿರುತ್ತದೆ. ಆದ್ದರಿಂದ ಸಾಹಿತ್ಯ ಸೃಷ್ಟಿಗೆ ಬೌದ್ಧಿಕ ಅಂಶವು ಕಾರಣವಾದಂತೆ ಈ ಸಾಹಿತ್ಯವನ್ನು ಬರಹದ ಮೂಲಕ ಜಗತ್ತಿಗೆ ತೋರಿಸಿದ ತಂತ್ರಜ್ಞಾನವು ಅಷ್ಟೇ ಮುಖ್ಯ ತಂತ್ರಜ್ಞಾನ ಆಯಾ ಕಾಲಘಟ್ಟದಲ್ಲಿ ಸಮರ್ಪಕವಾಗಿ ಇಲ್ಲದೆ ಹೋದಲ್ಲಿ ಸಾಹಿತ್ಯ ಒಬ್ಬರಿಂದ ಮತ್ತೊಬ್ಬರಿಗೆ ತಲುಪದೆ ಬಹುಕಾಲ ಉಳಿಯದೆ ಹೋಗುತ್ತದೆ.

'ಕವಿರಾಜ ಮಾರ್ಗಕಾರ ಹೇಳುವಂತೆ' "ಕುರಿತೋದದೆಯುಂ ಕಾವ್ಯ ಪರಿಣಿತ ಮತಿಗಳ್ ಅಂದರೆ ಕನ್ನಡ ನಾಡಿನ ಜನ ಕುರಿತು ಓದದೆಯೂ ಕಾವ್ಯವನ್ನು ರಚಿಸಬಲ್ಲರು" ಎಂಬುದನ್ನು ಕ್ರಿ.ಶ. ಎಂಟನೆಯ ಶತಮಾನದಲ್ಲಿಯೇ ಹೇಳಿದ್ದಾಗಿದೆ. ಔಪಚಾರಿಕವಾಗಿ ಶಿಕ್ಷಣ ಪಡೆಯದೆ ಇದ್ದರೂ ಕಾವ್ಯವನ್ನು ರಚಿಸುವಂತಹ ಜ್ಞಾನ ಕನ್ನಡ ನಾಡಿನ ಜನತೆಗೆ ಇತ್ತು ಎಂಬುದು ಕವಿರಾಜ ಮಾರ್ಗಕಾರನ ಅಭಿಪ್ರಾಯ.

ಈ ಸಾಹಿತ್ಯ ಲಿಪಿರೂಪದಿಂದ ಜಗತ್ತಿಗೆ ಗೋಚರವಾಗಲು ಉತ್ತಮ ಲೇಖನ ಸಾಮಗ್ರಿಗಳ ಅವಶ್ಯಕತೆ ಮುಖ್ಯವಾಗಿತ್ತು. ಅಂತಹ ಲೇಖನ ಸಾಮಗ್ರಿಗಳ ಉತ್ಪಾದನೆಯಲ್ಲಿ, ಸಾಹಿತ್ಯ ಕೃತಿಗಳ ಸಂರಕ್ಷಣೆಯಲ್ಲಿ ಜನಸಾಮಾನ್ಯರ ಪಾತ್ರ ಬಹಳ ಮುಖ್ಯವಾಗಿತ್ತು. ಈ ಜನಸಾಮಾನ್ಯರ ತಾಂತ್ರಿಕ ಕೌಶಲ್ಯ ಅಥವಾ ತಂತ್ರಜ್ಞಾನ ವಿಕಾಸ ಹೊಂದಿದಂತೆಲ್ಲಾ ಸಾಹಿತ್ಯದ ಉಳಿವು ಮತ್ತು ಬೆಳವಣಿಗೆ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿತು.

ಜಗತ್ತಿನ ಒಂದೊಂದು ಭಾಷೆಯ ಸಾಹಿತ್ಯದ ಬೆಳವಣಿಗೆಯ ಹಿಂದೆ ಒಂದೊಂದು ರೀತಿಯ ತಂತ್ರಜ್ಞಾನ ಇದ್ದೇ ಇರುತ್ತದೆ. ಸತ್ವಯುತ ಹಾಗೂ ಪ್ರಸಿದ್ಧಿಯನ್ನೊಂದಿರುವ ಭಾರತದ ಭಾಷೆಗಳಲ್ಲಿ ಕನ್ನಡ ಭಾಷೆಯ ಸಾಹಿತ್ಯದ ಬೆಳವಣಿಗೆಗೆ ತಂತ್ರಜ್ಞಾನವು ಬಹಳ ಪ್ರಮುಖವಾಗಿದೆ. ಈ ಹಿನ್ನೆಲೆಯಲ್ಲಿ 'ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ' ಎಂಬ ವಿಷಯ ನನ್ನ ಸಂಶೋಧನೆಯ ವಿಷಯವಾಗಿದ್ದು ಈ ಸಂಶೋಧನೆಯ ಮಾಹಿತಿಗೆ ಸಂಬಂಧಪಟ್ಟಂತೆ ಹಾಗೂ ಈ ಮಹಾಪ್ರಬಂಧವೂ ಗಟ್ಟಿಯಾಗಿ ರೂಪುಗೊಳ್ಳಲು ಅಧ್ಯಯನಗಳ ಸಮೀಕ್ಷೆ ಅತ್ಯವಶ್ಯಕವಾಗಿದೆ.

ಕನ್ನಡ ಸಾಹಿತ್ಯದ ಬೆಳವಣಿಗೆಗೆ ಪ್ರಮುಖ ಪಾತ್ರವಾಗಿರುವ ತಂತ್ರಜ್ಞಾನ ವಿಷಯವನ್ನು ಸಾದರಪಡಿಸಲು ನಾಲ್ಕು ರೀತಿಯ ಪೂರಕ ವಿಷಯ ಸಾಮಗ್ರಿಗಳನ್ನು ವಿವರಿಸಿಕೊಂಡಿದ್ದೇನೆ.

ಇವುಗಳಲ್ಲಿ ಕನ್ನಡ ಸಾಹಿತ್ಯ ಮತ್ತು ತಂತ್ರಜ್ಞಾನ ಕುರಿತು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಚರ್ಚಿಸಿದ ೧. ಕೃತಿಗಳು, ೨. ಪಿಹೆಚ್.ಡಿ. ಮಹಾಪ್ರಬಂಧದಂತಹ ಸಂಶೋಧನ ಕೃತಿಗಳು, ೩. ಲೇಖನಗಳು, ೪. ಪತ್ರಿಕಾ ವರದಿಗಳು ಎಂದು ವಿಭಾಗಿಸಿಕೊಂಡು ವಿವರಿಸಿದ್ದೇನೆ.

**೧. ಕೃತಿಗಳು**

**೧.೧ ಕನ್ನಡ ಹಸ್ತಪ್ರತಿಗಳು ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನ:** ಡಾ. ವೀರೇಶ ಬಡಿಗೇರ ಅವರ ಈ ಕೃತಿ ೨೦೦೦ರಲ್ಲಿ ಪ್ರಕಟವಾದಂತಹ ಕೃತಿಯಾಗಿದೆ. ಜ್ಞಾನದ ಮೂಲಗಳಾದ ಹಸ್ತಪ್ರತಿಗಳು ಕಾಲಗರ್ಭದಲ್ಲಿ ಮಳೆ, ಗಾಳಿ, ನೀರು, ಬೆಂಕಿ, ಕೀಟ ಮುಂತಾದವುಗಳಿಂದ ನಾಶಹೊಂದುತ್ತಿದ್ದವು. ಇದರಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರವಾದ ನಷ್ಟ ಉಂಟಾಗುತ್ತಿತ್ತು. ಹೀಗಾಗಿಯೇ ಕವಿರಾಜ ಮಾರ್ಗಕ್ಕಿಂತ ಪೂರ್ವದ ಕವಿಗಳ ಕೃತಿಗಳು, ಈ ಕೃತಿಯ ನಂತರ ಬಂದಂತಹ ಎಷ್ಟೋ ಕವಿಗಳ ಕೃತಿಗಳು ಲಭ್ಯವಾಗಿಲ್ಲ. ಕಾರಣ ಅವುಗಳ ಸಂರಕ್ಷಣೆಯ ಕೊರತೆ. ಅದಕ್ಕಾಗಿ ಇಂದು ಸಂರಕ್ಷಣೆಯ ದೃಷ್ಟಿಯಿಂದ ಸಾಫ್ಟ್‌ವೇರ್ ತಂತ್ರಜ್ಞಾನ ಬಳಕೆಗೆ ಬಂದಿದೆ. ತಂತ್ರಜ್ಞಾನವನ್ನು ಹಸ್ತಪ್ರತಿಗಳ ಸಂರಕ್ಷಣೆಗೆ ಬಳಕೆ ಮಾಡಿದ ಮೊದಲ ಪ್ರಯತ್ನ ಡಾ. ವೀರೇಶ ಬಡಿಗೇರವರದ್ದಾಗಿದೆ. ಕರ್ನಾಟಕದಲ್ಲಿ ಸಾಫ್ಟ್‌ವೇರ್ ಉದ್ಯಮ, ಸಾಫ್ಟ್‌ವೇರ್ ಅಭಿವೃದ್ಧಿಯ ಹಿಂದಿನ ಉದ್ದೇಶಗಳು, ಕನ್ನಡದಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನದ ಬೆಳವಣಿಗೆ ಕುರಿತಂತೆ ಮಾಹಿತಿಯಿದೆ. ಕನ್ನಡ ಹಸ್ತಪ್ರತಿಗಳು ಮತ್ತು ಮಾಹಿತಿ ತಂತ್ರಜ್ಞಾನ, ದಾಖಲಾತಿ ಮತ್ತು ವಿನಿಮಯ, ಇಂಟರ್‌ನೆಟ್ ಸಂಪರ್ಕ, ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳ ಮೇಲೆ ಸಾಫ್ಟ್‌ವೇರ್ ತಂತ್ರಜ್ಞಾನದ ಪ್ರಭಾವ ಮತ್ತು ಅದರ ಇತಿಮಿತಿಗಳು ಕುರಿತಾದ ವಿದ್ವತ್ಪೂರ್ಣದ ವಿಶ್ಲೇಷಣೆಯಿದೆ.

**೧.೨ ಕಂಪ್ಯೂಟರ್ ಮತ್ತು ಕನ್ನಡ ಅಭಿವೃದ್ಧಿ ಹಸ್ತಪ್ರತಿ ವ್ಯಾಸಂಗ ಮೂರರಲ್ಲಿ ಪ್ರಕಟವಾಗಿದೆ:** ಡಾ. ವೀರೇಶ ಬಡಿಗೇರ ಮತ್ತು ಡಾ.ಎಸ್.ಆರ್. ಚೆನ್ನವೀರಪ್ಪ ಇವರ ಸಂಪಾದನೆಯಲ್ಲಿ ೨೦೦೨ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಣೆಗೊಂಡ ಕೃತಿಯಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಾಯೋಜಕತ್ವದಲ್ಲಿ ನಡೆದ ವಿಚಾರ ಸಂಕಿರಣದ ಪ್ರಬಂಧಗಳು ಕನ್ನಡ ಮತ್ತು ಗಣಕಯಂತ್ರಕ್ಕೆ ಸಂಬಂಧಪಟ್ಟಂತೆ ಹದಿಮೂರು ಲೇಖಕರ ಹದಿಮೂರು ಲೇಖನಗಳಿವೆ. ಆಧುನಿಕ ತಂತ್ರಜ್ಞಾನವೆಂದೆ ಹೆಸರು ಪಡೆದ ಕಂಪ್ಯೂಟರ್ ತಂತ್ರಜ್ಞಾನಕ್ಕೆ ಕನ್ನಡ ಭಾಷೆಯನ್ನು ಸಂಯೋಜಿಸಲು ನಡೆಯುತ್ತಿರುವ ಪ್ರಾಯೋಗಿಕ ರೀತಿಯನ್ನು ಸವಿಸ್ತಾರವಾಗಿ ಚರ್ಚಿಸಲಾಗಿದೆ. ಗಣಕಯಂತ್ರದೊಳಗೆ ಕನ್ನಡ ಭಾಷೆ ಮತ್ತು ಸಾಹಿತ್ಯದ ಕಾರ್ಯಚಟುವಟಿಕೆಗಳು ಕಾರ್ಯನಿರ್ವಹಿಸುವ ಪರಿಯನ್ನು ಚರ್ಚಿಸಲಾಗಿದೆ. ಕಾವ್ಯಾಭ್ಯಾಸಕ್ಕೆ ಕಂಪ್ಯೂಟರ್ ಸಹಾಯ

ಮಾಡುವ ಹಿನ್ನೆಲೆಯಲ್ಲಿ ಯಾವುದೇ ಒಂದು ಕಾವ್ಯದಲ್ಲಿ ವ್ಯಕ್ತಿಗಳ ಅಥವಾ ಪ್ರಾಣಿಗಳ ಹೆಸರು, ಅಲಂಕಾರಿಕ ವರ್ಣನ ಪದಗಳು, ಎಷ್ಟು ಸಾರಿ ಯಾವ ಯಾವ ಸಂದರ್ಭದಲ್ಲಿ ಬಂದಿದೆ ಎಂಬುದನ್ನು ಪಟ್ಟಿ ಮಾಡಲು ಗಣಕಯಂತ್ರ ನೆರವಾಗುತ್ತದೆ. ಕನ್ನಡ ಜಾನಪದ ಅಧ್ಯಯನದಲ್ಲಿ ಕಂಪ್ಯೂಟರ್ ಬಳಕೆ, ಕನ್ನಡದಲ್ಲಿ ಇ-ಮೇಲ್ ಕಳಿಸುವ ಬಗೆ ಇತ್ಯಾದಿ ಮಾಹಿತಿಯನ್ನು ಅಲ್ಲದೆ ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ತಂತ್ರಜ್ಞಾನಕ್ಕೆ ಅಳವಡಿಸಿದಾಗ ಆಗುವ ಪ್ರಯೋಜನ ಮತ್ತು ಕನ್ನಡದ ಸಂದರ್ಭಕ್ಕೆ ಇನ್ನೂ ಬೇಕಾದ ತಾಂತ್ರಿಕ ವ್ಯವಸ್ಥೆಯ ಬಗೆಗಿನ ಸಲಹೆಗಳು ಪ್ರಸ್ತುತ ಕೃತಿಯಲ್ಲಿ ಜಾಗಪಡೆದಿವೆ.

**೧.೩ ಹಲಗೆ ಬಳಪ:** ಡಾ. ವೀರೇಶ ಬಡಿಗೇರ ಅವರ ಮತ್ತೊಂದು ಕೃತಿ. ೨೦೦೫ರಲ್ಲಿ ಮಯ ಪ್ರಕಾಶನ ಕಮಲಾಪುರ ಇವರಿಂದ ಪ್ರಕಟವಾಗಿದೆ. ವಿಜ್ಞಾನ, ತಂತ್ರಜ್ಞಾನ, ಹಸ್ತಪ್ರತಿ, ಗ್ರಂಥಸಂಪಾದನೆ ಕುರಿತ ೧೬ ಸ್ವತಂತ ಲೇಖನಗಳಿವೆ. ಹಸ್ತಪ್ರತಿ ಮತ್ತು ಹಳೆಗನ್ನಡ ಸಾಹಿತ್ಯವನ್ನು ಸಬಾಲ್ಟರ್ನ್ ಶಿಸ್ತಿನ ಹಿನ್ನೆಲೆಯಲ್ಲಿ ವ್ಯಾಖ್ಯಾನಕ್ಕೆ ಒಳಪಡಿಸಿದ್ದಾರೆ. ಈ ಪುಸ್ತಕದ ಮೊದಲ ಮೂರು ಲೇಖನಗಳಾದ 'ಕಂಪ್ಯೂಟರ್ ಮೂಲಕ ಕನ್ನಡ ಹಸ್ತಪ್ರತಿಗಳ ಪುನಾರಚನೆ ಮತ್ತು ಪ್ರಸರಣ', 'ಪೆನ್ನು ಪೇಪರು ರಹಿತ ಸಮಾಜಕ್ಕೆ ಬುನಾದಿ', 'ಕನ್ನಡ ಹಸ್ತಪ್ರತಿಗಳು ಮತ್ತು ಆಧುನಿಕ ತಂತ್ರಜ್ಞಾನ' ಈ ಲೇಖನಗಳು ಹಸ್ತಪ್ರತಿ ಮತ್ತು ಹಳಗನ್ನಡ ಸಾಹಿತ್ಯವನ್ನು ತಾಂತ್ರಿಕತೆಗೆ ಒಳಪಡಿಸಬಹುದಾದ ಪ್ರಾದೇಶಿಕ ವಿಧಾನಗಳ ಕುರಿತು ಚರ್ಚಿಸುತ್ತವೆ. ಹಲವು ಹೊಸ ತಂತ್ರಾಂಶಗಳ ಮೂಲಕ ಕನ್ನಡ ಸಾಹಿತ್ಯವನ್ನು ಅಧ್ಯಯನಿಸಬಹುದಾದ, ಸಂರಕ್ಷಿಸಬಹುದಾದ ಪ್ರಸರಣ ಮಾಡಬಹುದಾದ ಅನೇಕ ಹೊಸ ವಿಚಾರಗಳ ಕಡೆ ಡಾ. ವೀರೇಶ ಬಡಿಗೇರ ಅವರು ಗಮನ ಸೆಳೆಯುತ್ತಾರೆ. ಸ್ವತಃ ತಾವೇ ಅವನ್ನು ಗಣಕಕ್ಕೆ ಅಳವಡಿಸಿದ ಕೀರ್ತಿ ಅವರದು.

**೧.೪ ಕನ್ನಡ ಪ್ರಜ್ಞೆ:** ಪ್ರೊ. ಬರಗೂರು ರಾಮಚಂದ್ರಪ್ಪ ಅವರ ಕೃತಿ ೨೦೦೭ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಣೆಯಾಗಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಂಬಂಧಿಸಿದಂತೆ ಹಲವಾರು ವಿಚಾರಗಳನ್ನು ಚರ್ಚಿಸಲಾಗಿದೆ. ಸಾಹಿತ್ಯ-ಸಾಂಸ್ಕೃತಿಕ ಸ್ವರೂಪ, ಭಾಷೆ ಮತ್ತು ತಂತ್ರಜ್ಞಾನ, ಕನ್ನಡ ಸಂಸ್ಕೃತಿ ಮತ್ತು ಸ್ವಾಯತ್ತತೆ, ಕನ್ನಡಕ್ಕೆ ಆದ್ಯತೆಯ ಕೊರತೆ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ. ತಂತ್ರಜ್ಞಾನವೆನ್ನುವುದರ ಬಗ್ಗೆ ಹಲವು ರೀತಿಯಲ್ಲಿ ಚರ್ಚಿಸಲಾಗಿದೆ. ತಂತ್ರಜ್ಞಾನವೆನ್ನುವುದು ಆಯಾ ಕಾಲದ ಬದುಕಿನ ಶೋಧರೂಪ ಎಂದು ವ್ಯಾಖ್ಯಾನಿಸಲಾಗಿದೆ. ಆಧುನಿಕತೆಯೆನ್ನುವುದು ಆಯಾ ಕಾಲದ ಸಮಕಾಲೀನ ಸ್ವರೂಪವಾಗಿದೆ. ರೂಪಕವಾಗಿ ಹೇಳುವುದಾದರೆ ಭಾಷೆ ಎನ್ನುವುದು ಮನಸ್ಸು, ತಂತ್ರಜ್ಞಾನವೆನ್ನುವುದು ಮೆದುಳು ಎಂದು ತಿಳಿಸಲಾಗಿದೆ. ಭಾಷೆ ಮೂಲತಃ ಮನಸ್ಸಿನ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು. ತಂತ್ರಜ್ಞಾನವು ಪುಸ್ತಕ-ಪತ್ರಿಕೆ ಮುಂತಾದ ಭಾಷಾ ಮಾಧ್ಯಮಗಳನ್ನು ಪ್ರವೇಶಿಸಿ ಉದ್ಯಮದ ಸ್ವರೂಪಕ್ಕೆ ಕಾರಣವಾದಂತೆ ತಂತ್ರಜ್ಞಾನವೇ ಮಾಧ್ಯಮವಾದಂತಹ ತಂತ್ರಜ್ಞಾನ ಸಂಬಂಧಿ ವಿಷಯವನ್ನು ವಿಶ್ಲೇಷಿಸಲಾಗಿದೆ. ತಂತ್ರಜ್ಞಾನದ ಪರಿಣಾಮ ಭಾಷೆಯ ಮೇಲೆ ಬೀರಿರುವ ನೇರ ಪರಿಣಾಮಗಳು

ಅಭ್ಯಾಸನೀಯವಾಗಿದ್ದು ಹಾಗೂ ತಂತ್ರಜ್ಞಾನದ ಸಂಬಂಧದಿಂದ 'ಭಾಷೆ'ಯು ಶಿಷ್ಟ ವ್ಯಾಕರಣವನ್ನು ಉಲ್ಲಂಘಿಸಿದ್ದ ನೂತನ ವಿಚಾರಗಳನ್ನು ಚರ್ಚಿಸಿದ್ದಾರೆ. ನೋಮ್ ಚಾಮಸ್ಕಿ ಹೇಳುವಂತೆ "ಹೊಸ ತಂತ್ರಜ್ಞಾನವು ಬೃಹತ್ ಬಂಡವಾಳದ ಕೈಗಾರೀಕರೋದ್ಯಮುವನ್ನು ಅನಿವಾರ್ಯಗೊಳಿಸುತ್ತದೆ" ಎಂದು ಅಭಿಪ್ರಾಯಪಡುತ್ತಾನೆ. ಹೀಗೆ ತಂತ್ರಜ್ಞಾನ ಹಾಗೂ ಭಾಷೆಗೆ ಸಂಬಂಧಪಟ್ಟಂತೆ ಹಲವಾರು ವಿಚಾರಗಳು ಪ್ರಸ್ತುತ ಕೃತಿಯಲ್ಲಿ ಅಡಕವಾಗಿವೆ.

೧.೫ **ಭಾಷಾ ತಂತ್ರಜ್ಞಾನ:** ಡಾ. ಸಾಂಬಮೂರ್ತಿ, ೨೦೦೯, ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿದೆ. ೨೦೦೫ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ ವಿಭಾಗವು ಭಾಷೆ ಮತ್ತು ತಂತ್ರಜ್ಞಾನ ಎನ್ನುವ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿದ್ದು ಈ ವಿಚಾರ ಸಂಕಿರಣದಲ್ಲಿ ಅನೇಕ ವಿದ್ವಾಂಸರು ಭಾಷೆ ಮತ್ತು ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ಮಂಡಿಸಿದ ಪ್ರಬಂಧಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ವಿದ್ವಾಂಸರು ಮಂಡಿಸಿದ ಪ್ರಬಂಧಗಳಲ್ಲಿ ಭಾಷಾ ತಂತ್ರಜ್ಞಾನದ ಇತಿಹಾಸ ಬೆಳವಣಿಗೆ, ಅಕ್ಷರ ವಿನ್ಯಾಸ, ತಂತ್ರಜ್ಞಾನ ಮತ್ತು ಸಮಾಜ, ತಂತ್ರಜ್ಞಾನದಿಂದ ಆಗುತ್ತಿರುವ ಭಾಷಿಕ ಬದಲಾವಣೆಯ ಬಗ್ಗೆ ವಿವರಿಸಿದ್ದಾರೆ. ಭಾಷಾ ತಂತ್ರಜ್ಞಾನದ ವಿಕಾಸವು ಹಂತಹಂತವಾಗಿ ನಡೆದುಬಂದುದರ ಚರ್ಚೆ ಇದೆ. ಪ್ರಾಚೀನ ಲೇಖನ ಸಾಮಾಗ್ರಿಗಳಾದ ತಾಳೆಗರಿ ಪ್ರಾಣಿಗಳ ಚರ್ಮ, ಶಿಲೆ, ಅರಿವೆ ನಂತರ ಕಾಲ ಕಳೆದಂತೆ ಯಂತ್ರಗಳ ಆವಿಷ್ಕಾರವಾಗಿ ಭಾಷಾ ಅಧ್ಯಯನಕ್ಕಾಗಿ ಮಾಹಿತಿ ಸಂಗ್ರಹ ಹಾಗೂ ದಾಖಲೀಕರಣ ಕ್ರಿಯೆ ಉಂಟಾಯಿತು. ಈ ದಾಖಲೀಕರಣ ಕ್ರಿಯೆಯಲ್ಲಿ ಅನುಕೂಲವಾಗುವಂತೆ ಟೇಪ್‌ರೆಕಾರ್ಡ್‌ರ್, ಮೈಕ್ರೋಫಿಲ್ಮ್, ಮೈಕ್ರೋಪಿಶ್‌ಗಳು, ಮುದ್ರಣ ಬರಹಗಳು, ಧ್ವನಿ ಕುರಿತಂತೆ ಆಸಿಲೋಸ್ಕೋಪ್, ಸ್ಪೆಕ್ಟ್ರೋಗ್ರಾಮ್, ಭಾಷಾ ಪ್ರಯೋಗಾಲಯ ಹೀಗೆ ತಂತ್ರಜ್ಞಾನಕ್ಕೆ ಸಂಬಂಧಪಟ್ಟ ವಿಶ್ಲೇಷಣೆಗಳಿವೆ. ಡಾ. ಕೆ.ವಿ. ನಾರಾಯಣರವರ ವಿಚಾರಗಳು ಹಾಗೂ ಕನ್ನಡ ತಂತ್ರಾಂಶಗಳಾದ ಕ-ಬರಹ, ಕುವೆಂಪು, ಶ್ರೀಲಿಪಿ ಹಾಗೂ ಕನ್ನಡದ ಬೆಳವಣಿಗೆಗೆ ಸಹಾಯವಾಗಲು ತಂತ್ರಜ್ಞಾನ ಕ್ಷೇತ್ರದಲ್ಲಿ ವಿಶ್ವವಿದ್ಯಾಲಯವು ಓಪನ್ ಸೋರ್ಸ್‌ಕೋಡ್ ನೀಡಿರುವಂತಹ ಮಾಹಿತಿಯಿದೆ.

೧.೬ **'ಹೊಸಗನ್ನಡ ಅರುಣೋದಯ':** ಡಾ. ಶ್ರೀನಿವಾಸ ಹಾವನೂರ ಅವರ ಕೃತಿಯಿದು. ೨೦೧೧ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪ್ರಕಟವಾಗಿದೆ. ಅರುಣೋದಯದ ಹಿನ್ನೆಲೆ, ಮುದ್ರಣ ಮತ್ತು ಗ್ರಂಥೋದ್ಯಮ ಶಿಕ್ಷಣ ರಂಗ ಮತ್ತು ಸಾಹಿತ್ಯ ವಿಕಾಸದ ಕುರಿತ ಪ್ರಮುಖ ಚರ್ಚೆಯಿದೆ. ಮಿಶನರಿ ಜನರು ಸಾಹಿತ್ಯ ಬೆಳವಣಿಗೆಯ ಕಾರ್ಯದಲ್ಲಿ ಮಾಡಿದ ಪ್ರಯತ್ನ, ಬ್ರಿಟಿಷ್ ಅಧಿಕಾರಿಗಳು ಕನ್ನಡಕ್ಕಾಗಿ ಸಲ್ಲಿಸಿದ ಸೇವೆ ಇತ್ಯಾದಿ ವಿಷಯಗಳು ದೀರ್ಘವಾಗಿ ಚರ್ಚಿತವಾಗಿವೆ. ಪಾಶ್ಚಾತ್ಯ ಸಂಪರ್ಕದಿಂದ ದೇಶದಲ್ಲಿ ರಾಜಕೀಯ ಮತ್ತು ಸಾಮಾಜಿಕ ಸ್ಥಿತ್ಯಂತರಗಳು ಉಂಟಾದಂತೆ ಸಾಹಿತ್ಯಿಕ ಕ್ಷೇತ್ರದಲ್ಲಿಯೂ ಸಹ ನಡೆದ ಮಹತ್ತರವಾದ ಬದಲಾವಣೆಗಳ ಕುರಿತು ಚರ್ಚಿಸಿದ್ದಾರೆ. ಧರ್ಮ ಪ್ರಚಾರಕ್ಕೆಂದು ಮಿಶನರಿಗಳ ಮೂಲಕ ಬಂದ ಪಾದ್ರಿಗಳು ದೇಶದೆಲ್ಲೆಡೆ ಸಂಚರಿಸಿದಂತೆ ಕರ್ನಾಟಕಕ್ಕೂ ಕೂಡ ಆಗಮಿಸಿ ಹೊಸ

ಮುದ್ರಣ ತಂತ್ರಜ್ಞಾನದ ಮೂಲಕ ಕನ್ನಡ ಕೃತಿಗಳನ್ನು ಮುದ್ರಿಸುವ ಕಾರ್ಯ ಮಾಡಿದರು. ಈ ಕಾರ್ಯವೇ ಕನ್ನಡ ಸಾಹಿತ್ಯ ಬೆಳವಣಿಗೆಗೆ ಪ್ರಾಥಮಿಕ ಅಡಿಗಲ್ಲಾಯಿತು. ವಿಲಿಯಂ ಕೇರಿಯು ಬಂಗಾಳದ ಶ್ರೀರಾಮಪುರದ ಪ್ರೆಸ್ಸಿನಲ್ಲಿ ಕ್ರಿ.ಶ. ೧೮೧೭ರಲ್ಲಿ A Gramar of the Karnata Language ಎಂಬ ಕೃತಿ ಹೊರತಂದನು. ಇದೇ ರೀತಿಯ ಕಾರ್ಯ ಎರಡು ಮೂರು ವರ್ಷಗಳಲ್ಲಿ ಕನ್ನಡ ವ್ಯಾಕರಣ ಶಬ್ದಕೋಶ ಮತ್ತು ಬೈಬಲ್ಲಿನ ಅನುವಾದ ಇವು ಮೂರರ ಹಸ್ತಪ್ರತಿಗಳನ್ನು ಸಿದ್ಧಗೊಳಿಸಿ ನಮ್ಮ ಕನ್ನಡ ಜನಕ್ಕೆ ಮುದ್ರಿತ ಗ್ರಂಥ ಸ್ವರೂಪವು ಲಭಿಸಿ ಅವುಗಳನ್ನು ಓದುವುದರ ಕಡೆ ಆಸಕ್ತಿ ಉಂಟು ಮಾಡಿದುದರ ಬಗ್ಗೆ ಚರ್ಚಿಸಿದ್ದಾರೆ. ೧೮೨೭ರ ಸಂದರ್ಭದಲ್ಲಿ ಕರ್ನಾಟಕದಲ್ಲಿಯೇ ಕನ್ನಡ ಗ್ರಂಥಗಳ ನಿಯಮಿತವಾದ ಮುದ್ರಣವು ಪ್ರಾರಂಭವಾದುದರ ಬಗ್ಗೆ ಮಾಹಿತಿಯಿದೆ. ಕ್ರಿ.ಶ. ೧೮೫೦-೧೮೭೦ರ ಅವಧಿಯಲ್ಲಿ ವೆಸ್ಲಿಯನ್ ಮಿಶನ್ ಪ್ರೆಸ್ ಉಚ್ಛ್ರಾಯ ಸ್ಥಿತಿಯಲ್ಲಿದ್ದು ೧೮೯೦ರ ಸುಮಾರಿಗೆ ಹೆನ್ರಿಹೇಗ್ ಇವರ ನೇತೃತ್ವದಲ್ಲಿ ವೆಸ್ಲಿಯನ್ ಮುದ್ರಣವು ಮೈಸೂರು ನಗರದಲ್ಲಿ ಸ್ವಮತೀಯ ಪುಸ್ತಕಗಳಲ್ಲದೆ ಹಳಗನ್ನಡ ಕಾವ್ಯಗಳು ಹಾಗೂ ಹೊಸಗನ್ನಡ ಕಾವ್ಯಗಳು ಈ ಅಚ್ಚುಕೂಟದಿಂದ ಹೊರಬಂದವು. ಮಂಗಳೂರಿನ ಬಾಸೆಲ್ ಮಿಶನ್ ಕೂಡ ಕನ್ನಡ ಸಾಹಿತ್ಯ ಕೃತಿಗಳ ಮುದ್ರಣಕ್ಕೆ ಹೆಚ್ಚು ಮಹತ್ವ ನೀಡಿತು. ಕುಮಾರವ್ಯಾಸ ಭಾರತ, ಬಸವಪುರಾಣ, ಚೆನ್ನಬಸವಪುರಾಣ, ಜೈಮಿನಿ ಭಾರತಗಳಂತಹ ದೊಡ್ಡ ಗಾತ್ರದ ಬಹುಪುಟ ಸಂಖ್ಯೆಯ ಪುಸ್ತಕಗಳು ಒಂದೇ ಆಕಾರದಲ್ಲಿ ಅತ್ಯಂತ ದುಂಡಾಗಿ ಕಲ್ಲಚ್ಚಿನಲ್ಲಿಯೇ ಮುದ್ರಿತಗೊಂಡಂತಹ ವಿಚಾರಗಳನ್ನು ವಿವರವಾಗಿ ಚರ್ಚಿಸಿದ್ದಾರೆ.

**೧.೭ 'ಹಸ್ತಪ್ರತಿಗಳು ಕನ್ನಡಿಗರ ಬದುಕು':** ಡಾ. ಕೆ. ರವೀಂದ್ರನಾಥ ಅವರ ಈ ಕೃತಿ ೨೦೧೪ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿದೆ. ಪ್ರಸ್ತುತ ಕೃತಿಯು ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಮತ್ತು ಉಳಿವಿಗೆ ಕಾರಣಾಣವಾದ ಹಸ್ತಪ್ರತಿಗಳು ಹಾಗೂ ಹಸ್ತಪ್ರತಿಗಳ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ ಕನ್ನಡಿಗರ ಸ್ಥಳೀಯ ಜ್ಞಾನದ ಬಗೆಗೆ ವಿಶ್ಲೇಷಣಾತ್ಮಕ ವಿವರಣೆಯಿದೆ. ಹಸ್ತಪ್ರತಿಗಳ ಅರ್ಥ ಪ್ರಕಾರ ರಚನೆಯ ಸಾಮಗ್ರಿಗಳ ಬಗ್ಗೆ ಚರ್ಚಿಸಿದ್ದಾರೆ. ಹಸ್ತಪ್ರತಿಗಳ ಸಂರಚನೆಯಲ್ಲಿ ಕುಶಲಕರ್ಮಿಗಳ ತಾಂತ್ರಿಕ ಕೌಶಲ್ಯದ ಬಗ್ಗೆ ದೀರ್ಘವಾದ ಮಾಹಿತಿಯಿದೆ. ಕನ್ನಡಿಗರು ತಮ್ಮ ಸಾಹಿತ್ಯ ಕೃಷಿಯಲ್ಲಿ ಬದುಕಿನ ಹಲವು ಆಯಾಮಗಳಾದ ಧಾರ್ಮಿಕ ಬದುಕು, ಸಾಮಾಜಿಕ ಬದುಕು, ಆರ್ಥಿಕ ಬದುಕು, ಕೌಟುಂಬಿಕ ಬದುಕಿನ ಎಲ್ಲಾ ಅಂಶಗಳ ಬರವಣಿಗೆಯಿಂದಲೇ ಅಭಿವ್ಯಕ್ತಿಸಿರುವುದನ್ನು ಕಾಣಬಹುದಾಗಿದೆ.

**೧.೮ ಹಸ್ತಪ್ರತಿ ಸಂಕಥನ:** ಡಾ. ವೀರೇಶ ಬಡಿಗೇರ ಅವರ ಚಿಂತನಶೀಲ ಕೃತಿ ತನ್ನ ವಿನೂತನ ವಿಚಾರಗಳ ಕಾರಣದಿಂದಾಗಿ ೨೦೧೪ನೇ ಸಾಲಿನ ಅತ್ಯುತ್ತಮ ಸಂಶೋಧನ ಕೃತಿಯೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿ ಪಡೆದಿದೆ. ೨೦೧೪ರಲ್ಲಿ ಮಯ ಪ್ರಕಾಶನ ಕಮಲಾಪುರ ಇವರಿಂದ ಪ್ರಕಟವಾಗಿದೆ. ಮೂರು ಭಾಗದಲ್ಲಿ ೧೯ ಲೇಖನಗಳು ಪ್ರಕಟವಾಗಿವೆ. ಹಸ್ತಪ್ರತಿಗಳನ್ನು ವೈಜ್ಞಾನಿಕವಾಗಿ, ವೈಚಾರಿಕವಾಗಿ ಹಾಗೂ ಆಧುನಿಕ ತಾಂತ್ರಿಕ

ಆವಿಷ್ಕಾರಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. 'ಉದ್ಯಮ ಮತ್ತು ಮಾಧ್ಯಮಗಳಲ್ಲಿ ಹಸ್ತಪ್ರತಿಗಳ ಬಳಕೆ' 'ಲಿಪಿಕಾರಿಕೆ ಮತ್ತು ಜೆಸ್ಟ್ ರೈಟಿಂಗ್' ಎನ್ನುವ ಲೇಖನಗಳು ತಂತ್ರಜ್ಞಾನಿಕ ವಿಚಾರಗಳಿಂದ ಅನನ್ಯವಾಗಿವೆ. ಹಸ್ತಪ್ರತಿಗಳ ಶೈಕ್ಷಣಿಕ ಆಯಾಮವನ್ನು ದಾಟಿ ಔದ್ಯಮಿಕ ವಲಯದಲ್ಲಿ ಬಳಕೆಯಾಗುತ್ತಿರುವ ಬಗೆಗಳನ್ನು ವಿಭಿನ್ನವಾಗಿ ಹಾಗೂ ಮೊದಲಬಾರಿಗೆ ಗುರುತಿಸಿದ್ದಾರೆ. ಹಸ್ತಪ್ರತಿ ಗ್ರಂಥಸಂಪಾದನೆ ಮತ್ತು ತಂತ್ರಜ್ಞಾನದ ಹಿನ್ನೆಲೆಯಲ್ಲಿ ಇಲ್ಲಿನ ಲೇಖನಗಳು ವಿದ್ವತ್ಪೂರ್ಣವಾಗಿ ಮೂಡಿಬಂದಿವೆ.

೧.೯ **ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ:** ಡಾ. ವೀರೇಶ ಬಡಿಗೇರ ಅವರು ರಚಿಸಿರುವಂತಹ ಕೃತಿಯಾಗಿದ್ದು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ೨೦೧೭ರಲ್ಲಿ ಪ್ರಕಟವಾಗಿದೆ. ಬಹುಮುಖ್ಯವಾದ ಮತ್ತು ಹೊಸ ರೀತಿ ಚರ್ಚೆಯನ್ನು ಇಲ್ಲಿ ನೋಡಬಹುದು. ಹಸ್ತಪ್ರತಿಗಳು ಲಿಖಿತ ಮತ್ತು ಮೌಖಿಕ ಪಾತಳಿಯಲ್ಲಿ ಅಭೇದ್ಧವಾಗಿ ಬೆಳೆದುಬಂದ ಕನ್ನಡ ಸಂಸ್ಕೃತಿಯ ಮುಖ್ಯ ಗ್ರಹಿಕೆಯ ಬಗೆಯನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಪ್ರಸ್ತುತ ಕೃತಿಯು ಕನ್ನಡ ಸಾಹಿತ್ಯ ಬೆಳವಣಿಗೆಗೆ ಕರ್ನಾಟಕದ ಕಸುಬುದಾರ ವರ್ಗಗಳು, ಕುಶಲಕರ್ಮಿ ವರ್ಗಗಳು ನೀಡಿದ ತಾಂತ್ರಿಕ ಕೊಡುಗೆಯನ್ನು ತುಂಬಾ ಆಳವಾಗಿ ಹಾಗೂ ಗಂಭೀರವಾದ ರೀತಿಯಲ್ಲಿ ಚರ್ಚಿಸಿದ್ದಾರೆ. ಬರಹದ ಮೌಖಿಕ ಹಾಗೂ ಲಿಖಿತದ ವಿಷಯಕ್ಕೆ ಸಂಬಂಧಿಸಿದಂತೆ ಬಹಳ ಸೂಕ್ಷ್ಮವಾದ ಒಳನೋಟಗಳನ್ನೇ ಹಿಡಿದಿಟ್ಟಿದ್ದಾರೆ. ಬರಹವು ಅಧಿಕಾರಸ್ಥ ನೆಲೆಯಲ್ಲಿ ಸಂರಚನೆಗೊಂಡ ರೀತಿ, ಲಿಪಿ ಸ್ವರೂಪದ ಜ್ಞಾನ ಹಾಗೂ ಸಮುದಾಯದ ನೆಲೆಗಳು ಕನ್ನಡದ ಓದು ಮತ್ತು ಬರಹ ಹಾಗೂ ಅವಲೋಕನ ರೀತಿಯನ್ನು ಪರಿಣಿಸಿದ ರೀತಿ ಅನನ್ಯವಾಗಿದೆ. ಲಿಪಿ ಮತ್ತು ಬರಹ ತಂತ್ರಜ್ಞಾನವನ್ನು ಸಮುದಾಯ ಪ್ರಜ್ಞೆಯಲ್ಲಿ ಗ್ರಹಿಸಿದ್ದು ಈ ಪುಸ್ತಕದ ವೈಶಿಷ್ಟ್ಯವಾಗಿದೆ.

೧.೧೦ **'ಕನ್ನಡ ಜಗತ್ತು ಅರ್ಧ ಶತಮಾನ'** ಡಾ. ಕೆ.ವಿ. ನಾರಾಯಣ ಅವರ ಪುಸ್ತಕ. ಇದು ೨೦೧೮ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿದೆ. ಪ್ರಸ್ತುತ ಕೃತಿಯು ಭಾಷೆ, ಸಾಹಿತ್ಯ ಹಾಗೂ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತಹ ಅಪರೂಪದ ವಿಷಯವನ್ನೊಳಗೊಂಡಿದೆ. ಕರ್ನಾಟಕದ ಏಕೀಕರಣದ ಸಂದರ್ಭದ ಕನ್ನಡದ ಸ್ವರೂಪ, ಭಾಷಾ ನೀತಿ, ಭಾಷಾಯೋಜನೆ, ಸಮೂಹ ಮಾಧ್ಯಮಗಳಲ್ಲಿ ಕನ್ನಡ, ಕನ್ನಡ ಮತ್ತು ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ದೀರ್ಘವಾಗಿ ವಿವರಿಸಿದ್ದಾರೆ. ಪ್ರಾಚೀನ ಕಾಲದಿಂದ ಇಲ್ಲಿಯವರೆಗೂ ಆಡುವ ಮಾತನ್ನು ರೆಕಾರ್ಡ್ ಮಾಡಿ ಸಂರಕ್ಷಿಸುವಂತಹ ಅವಕಾಶವಿರಲಿಲ್ಲ. ಆದರೆ ಆಧುನಿಕ ತಂತ್ರಜ್ಞಾನದಿಂದ ಆಡುಮಾತು ಅಥವಾ ಆಡುಭಾಷೆಯನ್ನು ಮುಂದಿನ ಪೀಳಿಗೆಯವರಿಗೆ ತಲುಪಿಸುವಂತಹ ಸೌಲಭ್ಯ ಇಂದು ಇದೆ ಎನ್ನುವ ವಿಚಾರವನ್ನು ಪ್ರಸ್ತುತ ಪಡಿಸಿದ್ದಾರೆ. ಭಾಷೆ ಮತ್ತು ತಂತ್ರಜ್ಞಾನ ಇವೆರಡರ ಸಂಬಂಧಗಳು ಚಾರಿತ್ರಿಕವಾಗಿ ನಡೆದುಬಂದಿರುವಂತಹ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಈ ಸಂಬಂಧ ಸೀಮಿತ ನೆಲೆಯಾಗಿ

ಕಲ್ಲು ಮತ್ತು ಲೋಹದ ಮೇಲೆ ಅಕ್ಷರಗಳನ್ನು ಮೂಡಿಸಲು ಬಳಸುವ ಉಪಕರಣಗಳ ಬಳಕೆ ಪ್ರಾಥಮಿಕ ತಾಂತ್ರಿಕ ಕಾರ್ಯವಾಗಿತ್ತು. ನಂತರ ತಾಳೆಗರಿ, ತದನಂತರ ಕಾಗದ ಬಳಕೆ ಬಂದು ಮುಂದೆ ಹೊಸ ತಂತ್ರಜ್ಞಾನದಿಂದ ಸಾಹಿತ್ಯದ ಬೆಳವಣಿಗೆ ಆದ ಚಾರಿತ್ರಿಕ ಬಗೆಯನ್ನು ವಿದ್ವತ್ಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ. ಭಾಷೆ ಮತ್ತು ತಾಂತ್ರಿಕ ಸಖ್ಯ ಇಲ್ಲಿನ ವಿಶ್ಲೇಷಣೆಯ ಮುಖ್ಯ ಧಾತುವಾಗಿದೆ.

**೨. ಪಿಎಚ್.ಡಿ. ಮಹಾಪ್ರಬಂಧಗಳು**

**೨.೧. ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡದ ಅಭಿವೃದ್ಧಿ:** ಡಾ.ಟಿ.ಸಿ. ಪೂರ್ಣಿಮ, ೨೦೦೧ರಲ್ಲಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಗಿದೆ. ಕನ್ನಡ ಅಭಿವೃದ್ಧಿಗೆ ಮಾಧ್ಯಮಗಳು ಹೇಗೆ ಸಹಕಾರಿಯಾಗಿವೆ ಎಂಬುದನ್ನು ಈ ಮಹಾಪ್ರಬಂಧದಲ್ಲಿ ತಿಳಿಸಲಾಗಿದೆ. ಸಂವಹನ ಮಾಧ್ಯಮಗಳು ಮನುಷ್ಯನ ಜ್ಞಾನದ ವಿಜ್ಞಾನದ ಫಲವಾಗಿದ್ದು, ಅವನು ಅಭಿವ್ಯಕ್ತಿಸುವ ಮೊದಲ ಮಾಧ್ಯಮ ಭಾಷೆಯಾದರೆ ಅದನ್ನು ಗುರಿಗೇರಿಸುವ ಎರಡನೇ ಮಾಧ್ಯಮ ಆಧುನಿಕ ಸಂವಹನ ಸಾಧನ. ಆಧುನಿಕ ಸಂವಹನ ಮಾಧ್ಯಮಗಳನ್ನು ವರ್ಗೀಕರಿಸಲಾಗಿದೆ.

೧. ಸಮೂಹ ಸಂವಹನ ಮಾಧ್ಯಮಗಳು

೨. ಅಂತರ್ ಸಂವಹನ ಮಾಧ್ಯಮಗಳು

ಸಮೂಹ ಸಂವಹನ ಮಾಧ್ಯಮಗಳಲ್ಲಿ ವಿದ್ಯುನ್ಮಾನ ಮಾಧ್ಯಮಗಳು ವಿದ್ಯುನ್ಮಾನೇತರ ಮಾಧ್ಯಮಗಳು. ವಿದ್ಯುನ್ಮಾನ ಮಾಧ್ಯಮಗಳಲ್ಲಿ ದೂರದರ್ಶನ, ಆಕಾಶವಾಣಿ, ಕಂಪ್ಯೂಟರ್ ಅಂತರ್‌ಜಾಲ, ಆಡಿಯೋ ವೀಡಿಯೋ, ಕ್ಯಾಸೆಟ್ ಡಿಸ್ಕ್. ವಿದ್ಯುನ್ಮಾನೇತರ ಮಾಧ್ಯಮಗಳಲ್ಲಿ ರಂಗಭೂಮಿ ಚಲನಚಿತ್ರ, ಮುದ್ರಿತ ಸುದ್ದಿ ಮಾಧ್ಯಮ, ಅವಾಚಿಕ ಮಾಧ್ಯಮ ಛಾಯಾಚಿತ್ರ, ಗ್ರಾಮ ಫೋನ್. ಅಂತರ್‌ಸಂವಹನ ಮಾಧ್ಯಮದಲ್ಲಿ ವಿದ್ಯುನ್ಮಾನ ಮಾಧ್ಯಮಗಳು. ಕಂಪ್ಯೂಟರ್, ಟೆಲಿಫೋನ್, ಸಂಚಾರಿ ಟೆಲಿಫೋನ್, ಫ್ಯಾಕ್ಸ್, ಟೆಲಿಪ್ರಿಂಟರ್, ಅಂತರ್ ಸಂವಹನ ಮಾಧ್ಯಮದ ವಿದ್ಯುನ್ಮಾನೇತರ ಮಾಧ್ಯಮಗಳಲ್ಲಿ ಅಂಚೆ ಮತ್ತು ತಂತಿ, ಸಾರಿಗೆ, ಶಿಕ್ಷಣ ಕಲಿಕಾ ಸಾಧನಗಳು, ಜಾಹೀರಾತು ಫಲಕಗಳು, ಬ್ಯಾನರ್, ಭಿತ್ತಿಪತ್ರಗಳು, ಕರಪತ್ರ, ಸಾರ್ವಜನಿಕ ಸಂಪರ್ಕ ಇತ್ಯಾದಿ. ಈ ಮೇಲಿನ ವಿಷಯಗಳ ಕುರಿತು ದೀರ್ಘವಾದ ವಿಶ್ಲೇಷಣೆಯಿದೆ. ಕನ್ನಡ ಸಾಹಿತ್ಯತ ಅಭಿವೃದ್ಧಿಯಲ್ಲಿ ಮುದ್ರಣ ತಂತ್ರಜ್ಞಾನದ ಪಾತ್ರ ಕುರಿತು ವಿಶ್ಲೇಷಿಸಿದ್ದಾರೆ. ಮುದ್ರಣ ತಂತ್ರಜ್ಞಾನದ ಆವಿಷ್ಕಾರ, ಗುಟನ್‌ಬರ್ಗ್ ಮುದ್ರಣಯಂತ್ರ ಕಾರ್ಯನಿರ್ವಹಿಸುವಂತೆ ಮಾಡಿದ ಪ್ರಯತ್ನ. ಅವನಿಂದ ಪ್ರಾರಂಭವಾದ ಮುದ್ರಣ ಕಾರ್ಯ ಸುಮಾರು ಒಂದು ದಶಕದ ನಂತರ ಭಾರತದಲ್ಲಿ ಚಿಗುರಿತು. ಧರ್ಮಪ್ರಚಾರದ ದೃಷ್ಟಿಯಿಂದ ಕ್ರೈಸ್ತ ಪಾದ್ರಿಗಳು ಮುದ್ರಣ ಕಲೆಯ ಜ್ಞಾನವನ್ನು ಭಾರತಕ್ಕೆ ತಂದರು. ಹದಿನೆಂಟನೆಯ ಶತಮಾನದ ಕೈಗಾರಿಕಾ ಕ್ರಾಂತಿ ಮುದ್ರಣ

ಕಲೆಗೆ ಕ್ರಾಂತಿಯೋಪಾದಿಯಲ್ಲಿ ನೆರವು ನೀಡಿತು. ಯಂತ್ರ ಕುಶಲತೆ ಹೆಚ್ಚಿದಂತೆ ಮುದ್ರಣ ಕಾಗದದ ತಯಾರಿಕೆ ಹೆಚ್ಚಿ ಅದೂ ಅಗ್ಗವಾಗಿ ಸಿಗುವಂತಾಯಿತು. ಮತ್ತೊಂದೆಡೆ ಕೈಗಾರಿಕಾ ಕ್ರಾಂತಿಯಿಂದ ಸಮಾಜದಲ್ಲಾದ ಬದಲಾವಣೆಗಳು ಪತ್ರಿಕೆಗಳಿಗೆ ಬೇಡಿಕೆ ತಂದವು. ಸರಿ ಸುಮಾರು ಅದೇ ಸಂದರ್ಭದಲ್ಲಿ (೧೮-೧೯ನೇ ಶತಮಾನದಲ್ಲಿ) ಯುರೋಪಿನಲ್ಲಿ ಪ್ರಾರಂಭವಾದ ಸಮೂಹ ಶಿಕ್ಷಣ ಚಳುವಳಿಯೂ ಪತ್ರಿಕೆಗಳ ಉಪಯೋಗ ಮತ್ತು ಬೇಡಿಕೆ ಹೆಚ್ಚಿಸಿತು. ವಿಲಿಯಂ ಕ್ಯಾರಿಯು ೧೮೧೭ರಲ್ಲಿ ಎ. ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್ವೇಜ್ ಎಂಬ ಕನ್ನಡ ಭಾಷೆಯ ವ್ಯಾಕರಣ ಎಂಬ ಪುಸ್ತಕವನ್ನು ಮುದ್ರಿಸಿದನು. ೧೮೨೭ರಲ್ಲಿ ಕನ್ನಡ ನಾಡಿನಲ್ಲಿ ಮೊದಲ ಮುದ್ರಣಯಂತ್ರ ಬಳ್ಳಾರಿಯಲ್ಲಿ ಸ್ಥಾಪನೆಯಾಯಿತು. ಈ ಸಂದರ್ಭದಲ್ಲಿ ವಿದೇಶಿ ವಿದ್ವಾಂಸರು ಕನ್ನಡವನ್ನು ಕಲಿತು ಕನ್ನಡ ಸಾಹಿತ್ಯ ಕೃತಿಗಳನ್ನು ಮುದ್ರಿಸಿದರು. ೧೮೪೮ರಲ್ಲಿ ಜೈಮಿನಿ ಭಾರತ ಮತ್ತು ಚೆನ್ನಬಸವ ಪುರಾಣ ಅಚ್ಚುಕಂಡವು. ಇವನ್ನೆಲ್ಲಾ ಲಿಥೋ ಮುದ್ರಣ ವಿಧಾನದಲ್ಲಿ ಮುದ್ರಿಸಲಾಯಿತು. ಇದಾದ ನಂತರ ಜನಪ್ರಿಯ ಸಾಹಿತ್ಯ ಮುದ್ರಣಕ್ಕೆ ಕೈಹಾಕಿದ ಪಾದ್ರಿಗಳು ೩೫೦೦ಕ್ಕೂ ಹೆಚ್ಚು ಗಾದೆಗಳಿದ್ದ ಕನ್ನಡ ಗಾದೆಗಳು ೧೭೧ ಕನ್ನಡ ಪದಗಳಿದ್ದ ದಾಸರ ಪದಗಳು ಹರಿಭಕ್ತಿಸಾರ, ರಾವಣ ದಿಗ್ವಿಜಯ ಎನ್ನುವ ಜನಪದ ಕೃತಿಗಳನ್ನು ಅಚ್ಚಿಗಿಳಿಸಿದರು. ಇವು ಓದುವುದಕ್ಕೆ ಸರಾಗವೂ ಸ್ಪಷ್ಟವೂ ಆಗುವಂತೆ ಮುದ್ರಿತವಾಗುತ್ತಿದ್ದವು. ಇಂತಹ ಸಾಹಿತ್ಯ ಕೃತಿಗಳ ಮುದ್ರಣಕ್ಕೆ ಪಾಶ್ಚಿಮಾತ್ಯ ವಿದ್ವಾಂಸರ ಕೊಡುಗೆ ಮುಂತಾದ ವಿಷಯಗಳ ಕುರಿತು ದೀರ್ಘವಾದ ವಿಶ್ಲೇಷಣೆ ಈ ಮಹಾಪ್ರಬಂಧದಲ್ಲಿ ಇದೆ. ಒಟ್ಟಾರೆಯಾಗಿ ಸಂವಹನ ಮಾಧ್ಯಮ ಹಾಗೂ ಹಲವಾರು ವಿಷಯಗಳ ಚರ್ಚೆಯನ್ನು ಮಾಡಲಾಗಿದೆ.

**೨.೨. ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ:** ಡಾ. ವಾಸುದೇವ ಶೆಟ್ಟಿ, ೨೦೦೨ರಲ್ಲಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿದೆ. ಪತ್ರಿಕೆಗಳು ಆಧುನಿಕ ಸಾಹಿತ್ಯದ ಬೆಳವಣಿಗೆಗೆ ಹೇಗೆ ಸಹಕಾರಿಯಾಗಿವೆ ಎಂಬುದನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ. ಪತ್ರಿಕೆಗಳ ಉಗಮ, ಸ್ವರೂಪ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ. ಸಾಹಿತ್ಯ ಪತ್ರಿಕೆಗಳು ಉಳಿದ ಪತ್ರಿಕೆಗಳಿಗಿಂತ ಹೇಗೆ ಭಿನ್ನ ಎಂಬುದನ್ನು ತಿಳಿಸಿದ್ದಾರೆ. ಸಾಹಿತ್ಯ ಪತ್ರಿಕೆಗಳು ಒಂದು ನಿರ್ದಿಷ್ಟ ವಲಯವನ್ನು ಉದ್ದೇಶಿಸಿರುತ್ತವೆ. ಸಮೂಹ ಮಾಧ್ಯಮ ಬೆಳೆದಂತೆ ಮನರಂಜನೆ ಇಂದು ಒಂದು ಉದ್ಯಮವಾಗಿದೆ. ದಿನಪತ್ರಿಕೆಗಳ ಸಾಪ್ತಾಹಿಕ ಪುರವಣಿಗೆಗಳು, ಮಾಸಪತ್ರಿಕೆಗಳು, ವಾರಪತ್ರಿಕೆಗಳ ಗುರಿಯೂ ಮನರಂಜನೆಯೂ ಆಗಿರುತ್ತದೆ.

ಭಾರತೀಯ ಪರಿಸರದಲ್ಲಿ ಪತ್ರಿಕೆಗಳು ಒಂದು ನಿರ್ದಿಷ್ಟ ಉದ್ದೇಶಕ್ಕಾಗಿಯೇ ಜನ್ಮ ತಳೆದಿದ್ದವು. ಕೆಲವೊಮ್ಮೆ ಧರ್ಮ ಪ್ರಚಾರ ಇನ್ನೂ ಕೆಲವೊಮ್ಮೆ ರಾಜಕೀಯ ಬೇಡಿಕೆಯ ಮಂಡನೆಗಾಗಿ ಜನಾಭಿಪ್ರಾಯ ರೂಪಿಸಲು ಒಂದು ವೇದಿಕೆಯಾಗಿ ಹುಟ್ಟಿಕೊಂಡ ಪತ್ರಿಕೆಗಳು ಹಲವು. ಇನ್ನೂ ಕೆಲವು ಪತ್ರಿಕೆಗಳು ಸಾಹಿತ್ಯ ಪತ್ರಿಕೆಗಳಾಗಿ ಹುಟ್ಟಿ ಬೆಳೆದವು. ಸಾಹಿತ್ಯವು

ಹೇಗಿರಬೇಕು ಹೇಗಿದ್ದರೆ ಚನ್ನ ಹೇಗಿರಬಾರದು ಎಂಬುದರ ಜೊತೆಯಲ್ಲಿ ಹಿಂದಿನ ಸಾಹಿತ್ಯವನ್ನು ವಿಮರ್ಶೆಗೆ ಒಳಪಡಿಸಿ ಅವುಗಳಲ್ಲಿ ಟೊಳ್ಳೆಷ್ಟು ಗಟ್ಟಿ ಎಷ್ಟು ಎಂಬುದನ್ನು ವಿಮರ್ಶಿಸಿದನು. ಕೆಲವು ಪತ್ರಿಕೆಗಳು ಸಾಹಿತ್ಯ ಪ್ರಕಟಣೆಗಾಗಿಯೇ ಉಳಿದವು. ರಾಜರ ಆಸ್ಥಾನದಲ್ಲಿದ್ದ ಪಂಡಿತರನ್ನು ಗಮನದಲ್ಲಿಟ್ಟುಕೊಂಡು ಕ್ಲಿಷ್ಟಕಾವ್ಯ ರಚಿಸುತ್ತಿದ್ದ ಸಾಹಿತಿಗಳು ಈಗ ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡು ಗದ್ಯದಲ್ಲಿ ಸರಳವಾಗಿ ಸಾಹಿತ್ಯ ರಚಿಸಬೇಕಾಯಿತು. ಹೀಗೆ ಸಾಹಿತ್ಯವು ರಾಜಾಶ್ರಯದಿಂದ ಜನಾಶ್ರಯದ ಕಡೆಗೆ ಹೊರಳುವಾಗ ಸಾಹಿತ್ಯ ಮತ್ತು ಸಹೃದಯನ ನಡುವಿನ ವಾಹಕವಾಗಿ ಪತ್ರಿಕೆಗಳು ಕೆಲಸ ಮಾಡಿದವು. ಕಾಗದದ ವ್ಯಾಪಕ ಬಳಕೆ, ಮುದ್ರಣ ಯಂತ್ರದ ಉಪಯೋಗ ಇವೆಲ್ಲಾ ಪೂರಕವಾದವು ಇದು ಗದ್ಯದ ವಿಕಾಸಕ್ಕೆ ಕಾರಣವಾಯಿತು. ಸಾಹಿತ್ಯದ ವಿಚಾರಗಳನ್ನು ಪ್ರಕಟ ಮಾಡಲೆಂದೆ ಹಲವಾರು ಪತ್ರಿಕೆಗಳು ಕನ್ನಡ ನಾಡಿನಲ್ಲಿ ಹುಟ್ಟಿಕೊಂಡವು. ಕರ್ನಾಟಕ ಜ್ಞಾನ ಮಂಜರಿ, ಹಿತಬೋಧಿನಿ, ಕರ್ನಾಟಕ ಕಾವ್ಯ ಮಂಜರಿ, ಸುವಾಸಿನಿ, ಸಂಕ್ರಮಣ, ರುಜುವಾತು ಮುಂತಾದ ಸಾಹಿತ್ಯ ಪತ್ರಿಕೆಗಳು ಆಧುನಿಕ ಕನ್ನಡ ಕವಿಗಳು ರಚಿಸಿದ ಕಥೆ, ಕವನ, ಕಾದಂಬರಿ, ನಾಟಕ, ವಿಮರ್ಶೆ ಮುಂತಾದ ಸಾಹಿತ್ಯ ಪ್ರಕಾರಗಳನ್ನು ಜನರಿಗೆ ತಲುಪಿಸಿದವು. ಇದರಿಂದ ಸಾಹಿತ್ಯ ವಿಪುಲವಾಗಿ ಬೆಳೆಯಿತು. ಪತ್ರಿಕೆಗಳು ಸಾಹಿತ್ಯದ ವಿಚಾರಗಳ ಜೊತೆ ಜೊತೆಗೆ ನಾಡು-ನುಡಿಯ ಚಿಂತನೆ ಬಗೆಗಿನ ವಿಚಾರಗಳನ್ನು ಜನಮನಕ್ಕೆ ತಲುಪಿಸಿದವು. ಕುವೆಂಪು, ದ.ರಾ. ಬೇಂದ್ರೆ, ಪು.ತಿ.ನ., ಜಿ.ಎಸ್. ಶಿವರುದ್ರಪ್ಪ, ಕೆ.ಎಸ್. ನರಸಿಂಹಸ್ವಾಮಿ, ಯು.ಆರ್. ಅನಂತಮೂರ್ತಿ, ಚಂದ್ರಶೇಖರ ಪಾಟೀಲ, ಲಂಕೇಶ್, ಯಶವಂತ ಚಿತ್ತಾಲ, ದೇವನೂರ ಮಹಾದೇವ, ಸಿದ್ದಲಿಂಗಯ್ಯ, ಸಾ.ರಾ. ಅಬೂಬಕರ್, ವೈದೇಹಿ, ಗೀತಾನಾಗಭೂಷಣ ಮುಂತಾದ ಆಧುನಿಕ ಲೇಖಕರಿಂದ ರಚಿತವಾದ ಕಥೆ, ಕಾದಂಬರಿ, ಕವನಗಳು, ಪತ್ರಿಕೆಗಳಲ್ಲಿ ಪ್ರಕಟಣೆಗೊಂಡವು. ಹಾಗೆಯೇ ರಹಮತ್ ತರೀಕೆರೆಯವರ ಬರಹಗಳು ಇತ್ಯಾದಿ. ಹೀಗೆ ಪತ್ರಿಕೆಗಳು ಸಾಕಷ್ಟು ರೀತಿಯಲ್ಲಿ ಸಾಹಿತ್ಯದ ಬೆಳವಣಿಗೆಗೆ ಪೂರಕವಾಗಿರುವಂತಹ ಬಗೆಯನ್ನು ಈ ಮಹಾಪ್ರಬಂಧದಲ್ಲಿ ವಿವರಿಸಲಾಗಿದೆ.

**೨.೩. ಇ-ಮಾಧ್ಯಮ ಮತ್ತು ಕನ್ನಡ ಸಾಹಿತ್ಯ:** ಡಾ.ಮೈ.ಸಿ. ಪಾಟೀಲ್, ೨೦೦೯ರಲ್ಲಿ ಕಾರ್ತಿಕ ಪ್ರಕಾಶನದಿಂದ ಪ್ರಕಟಣೆಯಾಗಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಗೆ ವಿದ್ಯುನ್ಮಾನ ಮಾಧ್ಯಮಗಳು ಹೇಗೆ ಸಹಕಾರಿಯಾಗಿವೆ ಹಾಗೂ ಮುಖ್ಯವಾಗಿವೆ ಎಂಬ ವಿಷಯಗಳನ್ನು ಸವಿಸ್ತಾರವಾಗಿ ಈ ಅಧ್ಯಯನದಲ್ಲಿ ತಿಳಿಸಲಾಗಿದೆ. ಮಾಧ್ಯಮಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಿದ್ದಾರೆ. ಒಂದು; ಮುದ್ರಣ ಮಾಧ್ಯಮ, ಎರಡನೆಯದಾಗಿ ಇ-ಮಾಧ್ಯಮ, ರೇಡಿಯೋ ಟಿ.ವಿ. ಪ್ರಸಾರಭಾರತಿ, ಆಕಾಶವಾಣಿ, ದೂರದರ್ಶನ, ಹೊಸ ಮಾಧ್ಯಮ. ಈ ಮಾಧ್ಯಮಗಳಲ್ಲಿ ಸಾಹಿತ್ಯದ ಇತಿಹಾಸ ಮತ್ತು ಬೆಳವಣಿಗೆಗೆ ಸಂಬಂಧಿಸಿದಂತಹ ಮಾಹಿತಿಯಿದೆ.

ಮಾರ್ಕೋನಿಯಿಂದ ಆವಿಷ್ಕಾರಗೊಂಡ ರೇಡಿಯೋ ಪ್ರಪಂಚದ ಇತರ ಭಾಗಗಳಂತೆ ಭಾರತ ದೇಶಕ್ಕೂ ಬಂದು ಕರ್ನಾಟಕ ರಾಜ್ಯದಲ್ಲಿಯೂ ಕೂಡ ಹೇಗೆ ಬಳಕೆಗೆ ಬಂದಿತು,

ರೇಡಿಯೋ ಬಳಕೆಯಿಂದ ಸುದ್ಧಿ ಸಮಾಚಾರಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ತಲುಪುವಂತಾಯಿತು. ಕೃಷಿ, ಆರೋಗ್ಯ, ಸರ್ಕಾರದ ಯೋಜನೆಗಳ ಕುರಿತಂತಹ ಸುದ್ಧಿ ಸಮಾಚಾರಗಳು ಜನರಿಗೆ ತಲುಪಿಸುವಂತಹ ಮಹತ್ತರ ಕಾರ್ಯ ರೇಡಿಯೋದಿಂದಾಯಿತು. ಇದೇ ಸಂದರ್ಭದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಕನ್ನಡ ಕವಿಗಳ ಕವಿತೆಗಳನ್ನು ಭಾವಗೀತೆಗಳನ್ನು ವಾಚನ ಮಾಡುವಂತಹ ಹಾಡುವಂತಹ ಕಾರ್ಯಕ್ರಮಗಳು ಪ್ರಸಾರಗೊಂಡವು. ಇಂತಹ ಕಾರ್ಯಕ್ರಮದ ಪ್ರಸಾರದಿಂದ ವಿವಿಧ ಪ್ರದೇಶದಲ್ಲಿ ವಾಸಿಸುವ ಹಲವಾರು ಜನರಿಗೆ ತಲುಪಿ ಸಾಹಿತ್ಯಾಭಿರುಚಿಯನ್ನು ಉಂಟು ಮಾಡಿದ ಬಗ್ಗೆ ವಿವರಣೆಯಿದೆ. ರೇಡಿಯೊ, ನಂತರ ದೂರದರ್ಶನದ ಆವಿಷ್ಕಾರ ಉಂಟಾಯಿತು. ರೇಡಿಯೋನಲ್ಲಿ ಸುದ್ದಿ ಸಮಾಚಾರ ಮತ್ತು ಕಾರ್ಯಕ್ರಮಗಳಲ್ಲಿನ ಧ್ವನಿಯನ್ನು ಮಾತ್ರ ಕೇಳುವಂತಹ ಅವಕಾಶವಿದ್ದರೆ, ದೂರದರ್ಶನದಲ್ಲಿ ವ್ಯಕ್ತಿಗಳ ಮಾತು ಕೇಳುತ್ತಿದ್ದುದಲ್ಲದೆ ಅವರ ಚಿತ್ರಗಳು ಪರದೆಯ ಮೇಲೆ ಮೂಡಿ ಬರುತ್ತಿದ್ದವು. ಜನರಿಗೆ ಇವರು ಕವಿ ಇವರು ವೈದ್ಯರು ಎಂಬ ಸ್ಪಷ್ಟ ಚಿತ್ರಣ ಕಣ್ಣಿಗೆ ಕಾಣತೊಡಗಿತು. ಕುವೆಂಪು, ಬೇಂದ್ರೆ, ಕೆ.ಎಸ್. ನರಸಿಂಹಸ್ವಾಮಿ, ನಿಸಾರ್ ಅಹಮದ್‌ರಂತಹವರು ಕವಿತೆಗಳನ್ನು ವಾಚನಮಾಡುವ, ಸಾಹಿತ್ಯ ವಿಚಾರಗಳನ್ನು ಹೇಳುತ್ತಿರುವಾಗ ಅದನ್ನು ನೋಡುವ ಅವಕಾಶ ಜನರಿಗೆ ಲಭ್ಯವಾಯಿತು. ಹೀಗೆ ಇ-ಮಾಧ್ಯಮದಿಂದ ಜನರಲ್ಲಿ ಸಾಹಿತ್ಯಾಸಕ್ತಿ ಉಂಟಾದ ಬಗೆಯನ್ನು ಕೃತಿಯು ವಿವರಿಸುತ್ತದೆ.

**೩. ಲೇಖನಗಳು**

ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸುವ ಮತ್ತು ನನ್ನ ಆಲೋಚನೆಗಳ ವಿಸ್ತಾರದ ದೃಷ್ಟಿಯಿಂದ ವಿವಿಧ ಕೃತಿಗಳಲ್ಲಿ ಪ್ರಕಟವಾದ ವಿಷಯ ಸಂಪನ್ನ ವಿದ್ವಾಂಸರ ಲೇಖನಗಳನ್ನು ಅಧ್ಯಯನ ಮಾಡಿದ್ದು ಆ ಲೇಖನಗಳನ್ನು ಕೆಳಕಂಡಂತೆ ತಿಳಿಸಲಾಗಿದೆ.

**೩.೧ ಕನ್ನಡ ಸಾಹಿತ್ಯ ಓದುಗನನ್ನು ತಲುಪುವ ಬಗೆ-ಪತ್ರಿಕೋದ್ಯಮಿಯ ಸಮಸ್ಯೆ ಮತ್ತು ಪರಿಹಾರ:** ಸಂತೋಷಕುಮಾರ ಗುಲ್ವಾಡಿ, ವಿಶ್ವಕನ್ನಡ ಪುಸ್ತಕ-೨, ೧೯೮೫, ಪ್ರಕಾಶನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೫೬೦೦೦೨. ಪ್ರಸ್ತುತ ಲೇಖನದಲ್ಲಿ ಕನ್ನಡ ಸಾಹಿತ್ಯ ಓದುಗನನ್ನು ತಲುಪುವಲ್ಲಿ ಪತ್ರಿಕೋದ್ಯಮಿಯ ಸಮಸ್ಯೆ ಮತ್ತು ಪರಿಹಾರದ ಬಗ್ಗೆ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಒಂದು ಕಾಲದಲ್ಲಿ ಜಿಜ್ಞಾಸು ಒಬ್ಬನು ಸಾಹಿತ್ಯ ಅಧ್ಯಯನ ಮಾಡಲು ಅದರೆಡೆಗೆ ಹೋಗುತ್ತಿದ್ದ. ಶ್ರಮಿಸುತ್ತಿದ್ದ. ಈಗ ಎಲ್ಲಾ ತಿರುವು ಮರುವು ಆಗಿದೆ. ಸಾಹಿತ್ಯವನ್ನೇ ಓದುಗನಲ್ಲಿ ಕೊಂಡುಹೋಗಬೇಕಾಗಿದೆ. ಪತ್ರಿಕೋದ್ಯಮ ಇದು ತುಂಬ ಅಭಿವೃದ್ಧಿ ಹೊಂದಿರುವ ಒಂದು ಸಂವಹನ. ಕಲೆ, ಕೌಶಲ, ಶಾಸ್ತ್ರ, ವಿಷಯ, ವಿಚಾರಗಳನ್ನು ಸಾದರಪಡಿಸಲು ಅದಕ್ಕೆ ಅದರದ್ದೇ ಆದ ತಂತ್ರಗಳಿವೆ, ಮಾರ್ಗಗಳಿವೆ, ರಹಸ್ಯಗಳಿವೆ. ಇವು ಸೃಜನಾತ್ಮಕ ಹಂತದಲ್ಲೇ ನಡೆಯುವಂಥವು. ಒಳ್ಳೆಯ ಕನ್ನಡ ಸಾಹಿತ್ಯವನ್ನು ಜನರಿಗೆ ತಲುಪಿಸುವಲ್ಲಿ ಇವುಗಳ ಸಹಾಯವನ್ನು ಹೇಗೆ ಮತ್ತು ಎಷ್ಟು ಪಡೆಯುತ್ತೇವೆ ಎಂಬುದು ಮುಖ್ಯ. ಸಾಹಿತ್ಯ

ಮತ್ತು ಪತ್ರಿಕೆಗಳ ಮೂಲ ಆಶಯ ಒಂದೇ ಜನರ ರುಚಿ–ಅಭಿರುಚಿಗಳನ್ನು ಸಾಧ್ಯವಿದ್ದಷ್ಟು ಶುದ್ಧವಾಗಿಟ್ಟು ರಚನಾತ್ಮಕವಾಗಿ ಪ್ರಚೋದಿಸಲು ಸಾಹಿತ್ಯ ಹೆಚ್ಚು ಮಂದಿಗೆ ತಲುಪಬೇಕಾಗಿದೆ. ಆದರೆ ಜನರಿಗೆ ತಲುಪಿಸುವುದೆಂದರೆ ಪೋಸ್ಟ್‌ಮ್ಯಾನ್ ಕೆಲಸವಲ್ಲ. ಸಾಹಿತ್ಯದ ಮೂಲ ದ್ರವ್ಯವಾದ ಭಾಷೆಯ ಬೆಳವಣಿಗೆ, ಬದಲಾವಣೆ, ಪ್ರಯೋಗ, ಅಭಿವೃದ್ಧಿ, ಹೊಸತನ ಸರಳೀಕರಣ, ಸ್ಪಷ್ಟತೆ, ನಿರಂತರ ಪ್ರವಾಹಗಳನ್ನು ಗುರುತಿಸುವ ಹೊಣೆಗಾರಿಕೆಯೂ ಇದರಲ್ಲಿ ಸೇರಿದೆ. ಸಾಹಿತ್ಯ ಅವರವರ ಅನುಭವ, ಸಂಸ್ಕಾರ, ಅಭಿಪ್ರಾಯ, ಅಧ್ಯಯನ ಹೊಂದಿ ಸಾಹಿತ್ಯ ಆಯಾ ಹಂತದಲ್ಲಿ ತಲುಪುತ್ತದೆ. ಓದುಗನನ್ನು ನಾವು ಮುಖ್ಯವಾಗಿ ಆರು ಹಂತಗಳಲ್ಲಿ ಗುರುತಿಸಬಹುದು. ೧. ಜ್ಞಾನಿಗಳು ೨. ಪಂಡಿತರು ೩. ವೈಚಾರಕರು ೪. ಶ್ರೀಸಾಮಾನ್ಯರು ೫. ಪಾಮರರು ೬. ಅಲ್ಪರು. ಅವರವರ ನೆಲೆಬೆಲೆಗಳನ್ನು ಅರಿತು ಸಾಹಿತ್ಯ ತಲುಪುತ್ತದೆ. ಆದರೆ ಮೊದಲ ಮೂರು ಹಂತಗಳಲ್ಲಿ ಒಟ್ಟು ಓದುಗರ ಶೇಕಡ ಐದರಷ್ಟು ಕೂಡ ಆಗಲಾರದು. ಶ್ರೀಸಾಮಾನ್ಯ, ಪಾಮರ, ಅಲ್ಪ ಇವರೆಲ್ಲರಿಗೂ ಸಾಹಿತ್ಯ ತಲುಪಿಸುವ ಸಾಧ್ಯತೆಗಳಿವೆ. ಮತ್ತು ಇವರನ್ನು ಮುಟ್ಟಿ ತಟ್ಟಿ ಎಚ್ಚರಿಸಿದ್ದೇ ಶಾಶ್ವತ ಸಾಹಿತ್ಯ. ಸಾಹಿತ್ಯವನ್ನು ಕೇವಲ ಪತ್ರಿಕಾ ಮಾಧ್ಯಮದ ಮೂಲಕ ಮಾತ್ರವಲ್ಲ. ಸಮೂಹ ಮಾಧ್ಯಮಗಳಾದ ಜಾಹೀರಾತು ಪ್ರದರ್ಶನ, ರೇಡಿಯೋ, ಸಿನಿಮಾ ಟಿ.ವಿ.ಗಳ ಮೂಲಕ ಅತ್ಯಂತ ಶಕ್ತಿಶಾಲಿಯಾಗಿ ತಲುಪಿಸಬಹುದು. ಆದರೆ ಅಂಥ ಮನೋಭಾವ ನಮ್ಮಲ್ಲಿ ಸ್ಪಷ್ಟವಾಗಿ ಬಂದಿಲ್ಲ. ಸಾಹಿತ್ಯ ಬದುಕಿಗೆ ಅನಿವಾರ್ಯ ಎಂಬ ಭಾವನೆಯನ್ನು ಓದುಗರಲ್ಲಿ ಉಂಟಾಗುವಂತೆ ಪತ್ರಿಕೆಗಳು ಮಾಡಬಹುದು. ಹೀಗೆ ಸಾಹಿತ್ಯ ಓದುಗನಿಗೆ ತಲುಪಿಸುವ ವಿಚಾರ ಕುರಿತು ಚರ್ಚಿಸಿದ್ದಾರೆ.

**೩.೨ ಕನ್ನಡ ಮತ್ತು ತಂತ್ರಜ್ಞಾನ:** ಡಾ.ಕೆ.ವಿ. ನಾರಾಯಣ, ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿರುವ ಡಾ. ಸಾಂಬಮೂರ್ತಿ ಸಂಪಾದಿಸಿರುವ 'ಭಾಷಾ ತಂತ್ರಜ್ಞಾನ' ಪುಸ್ತಕ, ೨೦೦೯. ಪ್ರಸ್ತುತ ಲೇಖನದಲ್ಲಿ ಭಾಷೆ ಮತ್ತು ತಂತ್ರಜ್ಞಾನಗಳ ಸಂಬಂಧ ಹಿಂದೆಂದಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಕಾಣತೊಡಗಿದ್ದು ಹಾಗೆಯೇ ಇವೆರಡರ ಸಂಬಂಧಗಳ ಬೆಳವಣಿಗೆ ಚಾರಿತ್ರಿಕವಾಗಿ ಹೇಗೆ ನಡೆದಿದೆ ಎಂಬುದನ್ನು ಹಾಗೂ ಇಂದು ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಸಂಬಂಧಿಸಿದಂತೆ ಸಹಾಯಕವಾಗುತ್ತಿರುವ ತಂತ್ರಜ್ಞಾನ ಕುರಿತು ಚರ್ಚಿಸಿದ್ದಾರೆ. ಕಲ್ಲಿನ ಮೇಲೆ ಅಕ್ಷರಗಳನ್ನು ಮೂಡಿಸಿದ ನಂತರ ಲೋಹಗಳ ಬಳಕೆ ಬರವಣಿಗೆಗೆ ಬಂತು. ತದನಂತರ ತಾಳೆ ಎಲೆಗಳ ಮೇಲೆ ಬರೆಯುವ ಸಂದರ್ಭಕ್ಕೆ ಬರೆಯುವ ಉಪಕರಣ ಬರೆದ ಮೇಲೆ ಅಕ್ಷರಗಳು ಮೂಡಿಬರಲು ಅಗತ್ಯವಾದ ಮಸಿ ಮತ್ತು ಬರೆಯಬೇಕಾದ ತಾಳೆ ಎಲೆಗಳನ್ನು ಸಂಸ್ಕರಿಸಿ ಸಿದ್ಧಪಡಿಸಿದ ಕೃತಿಗಳನ್ನು ಬಹುಕಾಲ ಹಾಳಾಗದಂತೆ ಕಾಯ್ದಿರಿಸುವ ಉಪಾಯಗಳು ಇವೆಲ್ಲವೂ ಹೊಸ ತಂತ್ರಜ್ಞಾನವನ್ನು ಬಯಸುತ್ತಿದ್ದವು. ಕಡತಗಳ ಆಗಮನದ ಅನಂತರ ಕಾಗದದ ಬಳಕೆ ಬರಹದ ತಾಂತ್ರಿಕತೆಯಲ್ಲಿ ಅಷ್ಟೇನು ಬದಲಾವಣೆಯನ್ನು ತಂದವು. ೧೯ನೇ ಶತಮಾನದ ಆದಿಯಲ್ಲಿ ಕನ್ನಡಕ್ಕೆ ಪರಿಚಿತವಾದ ಮುದ್ರಣಯಂತ್ರ ಮತ್ತೊಂದು

ತಾಂತ್ರಿಕ ನೆಲೆಯ ಜಿಗಿತಕ್ಕೆ ಕಾರಣವಾಯಿತು. ಮುದ್ರಣದ ನಂತರ ಬಂದ ಕಲ್ಲಚ್ಚಿನ ಬಳಕೆ ಕನ್ನಡದ ಬರವಣಿಗೆಗೆ ಸಹಾಯಕವಾದ ತಾಂತ್ರಿಕ ಆವಿಷ್ಕಾರ. ಕೃತಿಗಳ ಮುದ್ರಣ ಕಾರ್ಯದಲ್ಲಿ ತಂತ್ರಜ್ಞಾನ ಒಂದು ಕಡೆ ಬಳಕೆಯಾದರೆ ಹಾಗೆಯೇ ಆಡುಮಾತನ್ನು ಸಂರಕ್ಷಿಸಿಡುವಂತಹ ಧ್ವನಿಮುದ್ರಣ ಅಥವಾ ರೆಕಾರ್ಡಿಂಗ್ ತಂತ್ರಜ್ಞಾನ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ತುಂಬಾ ಅನುಕೂಲವಾಗಿದೆ. ಆಡುಮಾತನ್ನು ದಾಖಲಿಸುವ ತಂತ್ರಜ್ಞಾನದ ಬಳಕೆಯ ಸಂದರ್ಭದಲ್ಲಿ ಗಣಕಯಂತ್ರದ ಬಳಕೆ ಕನ್ನಡಕ್ಕೆ ಬಂದಿತು. ಗಣಕಯಂತ್ರದಲ್ಲಿ ರಚನೆಯಾದ ಸಾವಿರಾರು ಕೃತಿಗಳನ್ನು ಇರಿಸುವಂತಹ ಪ್ರಯತ್ನಗಳು ನಡೆಯುತ್ತಿವೆ ಎಂಬುದನ್ನು ತಿಳಿಸಲಾಗಿದೆ. ತಂತ್ರಜ್ಞಾನ, ಮುದ್ರಣದಿಂದ ಶ್ರಮ ಮತ್ತು ಸಮಯಗಳು ಉಳಿತಾಯವಾಗಿವೆ. ಅದೇ ರೀತಿ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ತನ್ನ ಒಂದು ಮಹತ್ವಾಕಾಂಕ್ಷೆ ಯೋಜನೆಯಲ್ಲಿ ಕನ್ನಡವನ್ನು ಅಂತರ್‌ಜಾಲದ ಮೂಲಕ ಕಲಿಸುವ ವ್ಯವಸ್ಥೆಯನ್ನು ಮಾಡುತ್ತಿದೆ. ಹೀಗೆ ಕನ್ನಡ ಭಾಷೆಯು ತಾಂತ್ರಿಕವಾಗಿ ಒಳಗೊಂಡಿರುವ ಹಲವಾರು ವಿಷಯಗಳನ್ನು ಈ ಲೇಖನದಲ್ಲಿ ನಿರೂಪಿಸಲಾಗಿದೆ.

**೩.೩ ತಂತ್ರಜ್ಞಾನ ಮಾಧ್ಯಮ ಮತ್ತು ಸಾಹಿತ್ಯ: ಅರವಿಂದ ಮಾಲಗತ್ತಿ-೨**: ಪ್ರಸ್ತುತ ಲೇಖನದಲ್ಲಿ ಅರವಿಂದ ಮಾಲಗತ್ತಿಯವರು ತಂತ್ರಜ್ಞಾನ ಮಾಧ್ಯಮ ಮತ್ತು ಸಾಹಿತ್ಯದ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ತಂತ್ರಜ್ಞಾನ ಮಾಧ್ಯಮದಲ್ಲಿ ಹಾಗೂ ಅದರೊಂದಿಗಿನ ಸಂಬಂಧಗಳಲ್ಲಿ ಹುಡುಕುವವರಿಗೆ ಏನೆಲ್ಲಾ ಇದೆ, ಹುಡುಕದವರಿಗೆ ಏನೂ ಇಲ್ಲ ಎಂಬ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ತಂತ್ರಜ್ಞಾನದ ಸಂಪರ್ಕದಿಂದಾಗಿ ಬದುಕಿನಲ್ಲಿ ಊಹಿಸಲಾಗದ ತಲ್ಲಣಗಳು ಹೊಯ್ದಾಟಗಳು ಆಂತರಿಕ ಸಂಘರ್ಷಗಳು ಆರಂಭವಾಗಿದ್ದು ಅವು ಬದುಕಿನ ಇನ್ನೊಂದು ಮುಖವನ್ನು ತೆರೆದಿಡುತ್ತವೆ. ಇಂಟರ್‌ನೆಟ್ ಮಾದರಿಯ ಬರಹದ ಸ್ವರೂಪ ಲಕ್ಷಣವನ್ನೊಳಗೊಂಡ ಕಥಾನಕಗಳು ಒಂದರ್ಥದಲ್ಲಿ ತೇಪೆಯ ಕಥಾನಕಗಳು, ಜನಮೆಚ್ಚುಗೆಯೇ ಇಲ್ಲಿ ಪ್ರಧಾನ. ಇದು ಮಾರುಕಟ್ಟೆಯ ಧೋರಣೆ ಆಧಾರಿತವಾದುದು. ಆಧುನಿಕ ಲೋಕವನ್ನು ಕಥೆಗೆ ಒಗ್ಗಿಸಿಕೊಳ್ಳುವಾಗ ಕಂಡದಷ್ಟೇ ಪ್ರಧಾನವಾಗುತ್ತದೆ. ಅನುಭವ ಲೋಕ ಹಾಗೂ ಬೌದ್ಧಿಕ ಲೋಕ ಪರಸ್ಪರ ಬೆರೆತು ಮುಖಾಮುಖಿಯಾಗುವ ಕಾಲ ಇದಾಗಿರುವುದಿಲ್ಲ. ಹೀಗೆ ತಂತ್ರಜ್ಞಾನ ಮಾಧ್ಯಮ ಮತ್ತು ಸಾಹಿತ್ಯ ವಿಷಯದ ಕುರಿತಾಗಿ ತಮ್ಮದೇ ಆದ ಭಿನ್ನ ಆಲೋಚನೆಗಳನ್ನು ನಿರೂಪಿಸಿದ್ದಾರೆ.

**೩.೪ ಕನ್ನಡ ಸಾಹಿತ್ಯ ಮತ್ತು ಪೇಸ್‌ಬುಕ್: ಡಾ.ಎಂ. ವೇದಾಂತ ಏಳುಂಜಿ,** (೨೦೧೮ ವಿಹಂಗಮ ಪುಸ್ತಕ ಸೌಮ್ಯ ಪ್ರಕಾಶನ.) ಪ್ರಸ್ತುತ ಆಧುನಿಕ ತಾಂತ್ರಿಕ ಜಗತ್ತಿನಲ್ಲಿ ಹಲವು ವಿಧದ ತಂತ್ರಜ್ಞಾನದ ಬಳಕೆಯನ್ನು ಜನರು ದಿನನಿತ್ಯ ಮಾಡುತ್ತಿದ್ದಾರೆ. ಅದರಲ್ಲಿ ತಂತ್ರಜ್ಞಾನವು ಒಂದು. ಈ ಒಂದು ಫೇಸ್‌ಬುಕ್‌ನ್ನು ಜನರು ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ಮತ್ತೊಬ್ಬರ ಜೊತೆ ಹಂಚಿಕೊಳ್ಳಲು ಬಳಸುತ್ತಾರೆ. ಇತ್ತೀಚಿನ ದಿನದಲ್ಲಿ ವಿದ್ಯಾವಂತರ ವರ್ಗ ಹಾಗೂ

ಸಾಹಿತ್ಯಾಸಕ್ತ ವರ್ಗ ಪೇಸ್‌ಬುಕ್‌ನಲ್ಲಿ ಸಾಹಿತ್ಯದ ಕುರಿತಾಗಿ ಅಭಿಪ್ರಾಯವನ್ನು ಹಂಚಿಕೊಂಡಿದ್ದು ಈ ಸಾಹಿತ್ಯ ಆಸಕ್ತಿ ಕುರಿತಾದ ಅಭಿಪ್ರಾಯಗಳು ನಿರಂಜನರ ಕಾದಂಬರಿ ಚಿರಸ್ಮರಣೆಯಲ್ಲಿ ಬರುವ 'ಕೆಯ್ಯೂರು'ನ್ನು ನೋಡುವಷ್ಟರಮಟ್ಟಿಗೆ ಬಂದಿರುವನ್ನು ತಿಳಿಸಲಾಗಿದೆ. ಕನ್ನಡ ಸಾಹಿತ್ಯವು ಪೇಸ್‌ಬುಕ್ ವಾಲ್‌ಗಳಲ್ಲಿ ಸಾಹಿತ್ಯದ ವಾಕ್ಯಗಳೆಲ್ಲವೂ ಸ್ಟೇಟಸ್‌ಗೆ ಹಾಕಿಕೊಂಡಿರುವಂತಹ ವಿಚಾರಗಳನ್ನು ತಿಳಿಸಲಾಗಿದೆ. ರಾಮಾಯಣ, ಮಹಾಭಾರತ ವಾಕ್ಯಗಳು ಜನಪದ ಬರಹಗಳು ಪಂಪನ ವಿಕ್ರಮಾರ್ಜುನ ವಿಜಯ ಕೃತಿಯಲ್ಲಿನ ಮನುಷ್ಯ ಜಾತಿ ತಾನೊಂದೆ ವಲಂ ಎಂಬ ವಾಕ್ಯ. ಆಧುನಿಕ ಸಾಹಿತ್ಯದ ಲೇಖಕರಾದ ಕುವೆಂಪುರವರ 'ವಿಶ್ವಮಾನವ ಸಂದೇಶಗಳು' ಮುಂತಾದವರ ಕೃತಿಗೆ ಮಾರುಹೋಗಿ ಬರೆದುಕೊಂಡಂತಹ ಬರಹ ಅಥವಾ ವಾಕ್ಯಗಳನ್ನು ಕಾಣಬಹುದು. ಹಾಗೆಯೇ ಕನ್ನಡ ಜನಪದ ಹಾಡುಗಳು, ಭಾವಗೀತೆಗಳು, ನಾಡಗೀತೆಗಳು, ನಾಡಿನ ಪ್ರಸಿದ್ಧರು ಮಾಡಿದ ಭಾಷಣಗಳು ಸಹ ಇಂದು ಪೇಸ್‌ಬುಕ್‌ನಲ್ಲಿ ನೋಡಲು ಲಭ್ಯವಿರುವಂತಹ ವಿಚಾರಗಳನ್ನು ಈ ಲೇಖನದಲ್ಲಿ ತಿಳಿಸಲಾಗಿದೆ. ಹಾಗೆಯೇ ಪೇಸ್‌ಬುಕ್‌ನಲ್ಲಿ ಸಾಹಿತ್ಯ ಓದು, ಕನ್ನಡ ಸಾಹಿತ್ಯ ಮತ್ತು ಪೇಸ್‌ಬುಕ್ ಹೋರಾಟ, ಕನ್ನಡ ಸಾಹಿತ್ಯ ಮತ್ತು ಪೇಸ್‌ಬುಕ್‌ನ ಇತಿಮಿತಿಗಳು ಎಂಬಂತಹ ಹಲವಾರು ವಿಚಾರಗಳನ್ನು ಈ ಒಂದು ಲೇಖನದಲ್ಲಿ ಚರ್ಚಿಸಿದ್ದಾರೆ.

**೩.೫ ಆಕಾಶವಾಣಿ- ಭಾರತದ ತಂತ್ರಜ್ಞಾನಕ್ಕೆ ಮೈಸೂರಿನ ಕೊಡುಗೆ:** ಎಂ.ಎಸ್. ವಿಜಯ, (ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗುವ ವಿಜ್ಞಾನ ಸಂಗಾತಿ ಮಾಸಪತ್ರಿಕೆ ಸಂಪುಟ-೨೫ ಸಂಚಿಕೆ ೩- ೨೦೧೮.) ಪ್ರಸ್ತುತ ಲೇಖನದಲ್ಲಿ ಕರ್ನಾಟಕದಲ್ಲಿ ಬಳಕೆಗೊಂಡ ಆಕಾಶವಾಣಿ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತಹ ವಿಷಯವನ್ನು ಸರಳವಾದ ರೀತಿಯಲ್ಲಿ ವಿವರಿಸಿದ್ದಾರೆ. ಆಕಾಶವಾಣಿ ತಂತ್ರಜ್ಞಾನ ಕರ್ನಾಟಕದ ಮೈಸೂರಿನಲ್ಲಿ ಮೊದಲು ಕಾರ್ಯ ಆರಂಭಗೊಂಡಿತು. ಆಕಾಶವಾಣಿಯ ಮೂಲಕ ಜನರಿಗೆ ಸುದ್ಧಿ ಸಮಾಚಾರಗಳು ಸಾಹಿತ್ಯ, ಸಂಗೀತ, ಕೃಷಿ, ಮನರಂಜನೆ ಹೀಗೆ ಅನೇಕ ವಿಷಯಗಳ ಪ್ರಸಾರ ಮಾಡಿವೆ. ಇದರಿಂದ ಜನರಲ್ಲಿ ಸಾಹಿತ್ಯಾಸಕ್ತಿ, ವೈಚಾರಿಕತೆ ಜ್ಞಾನವೃದ್ಧಿಗೆ ಮುಂತಾದ ಅಂಶಗಳು ಬೆಳೆಯತೊಡಗಿತು. ಮೈಸೂರಿನಲ್ಲಿ ಪ್ರಾರಂಭವಾದ ಆಕಾಶವಾಣಿಯಲ್ಲಿ ಮೊತ್ತ ಮೊದಲ 'ಬಾನುಲಿಯ' ಪ್ರಸಾರ ಕಾರ್ಯಕ್ರಮ ರಾಷ್ಟ್ರಕವಿ ಕುವೆಂಪು ಅವರ ಕವಿವಾಣಿಯಿಂದ ಪ್ರಾರಂಭವಾಯಿತು. ಈ ಕಾರ್ಯಕ್ರಮ ಸಾಹಿತ್ಯದ ಪ್ರಸಾರಕ್ಕೆ ನಾಂದಿಯಾಯಿತು ಎಂದು ಹೇಳಬಹುದಾಗಿದೆ. ಕನ್ನಡ ಕವಿಗಳು ರಚಿಸಿದ ಕವನಗಳು, ಭಾವಗೀತೆಗಳು ಮುಂತಾದ ಸಾಹಿತ್ಯ ಪ್ರಕಾರಗಳ ಪ್ರಸಾರದ ಜೊತೆಗೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ರಚಿತವಾದಂತಹ ನಾಟಕಗಳನ್ನು ಪ್ರಸಾರ ಮಾಡುವಂತಹ ಸಂದರ್ಭ ದಿನಕಳೆದಂತೆ ಬಂದಿತು. ಚದುರಂಗರ ಶವದಮನೆ, ವಿ.ಕೆ. ಶ್ರೀನಿವಾಸ್‌ರವರ 'ನೀರಗಂಟಿಮಾರ', ಬಿ.ಸಿ. ರಾಮಚಂದ್ರಶರ್ಮ ಅವರ 'ಸೆರಗಿನ ಕೆಂಡ' ಮುಂತಾದ ಕಥೆ-ನಾಟಕಗಳು ಪ್ರಸಾರಗೊಂಡವು. ಆಕಾಶವಾಣಿ ಅಥವಾ ರೇಡಿಯೋ ಅಥವಾ ಬಾನುಲಿ

ಎನ್ನುವ ಪ್ರಪ್ರಥಮ ತಾಂತ್ರಿಕ ಬಳಕೆ ಜನರಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಆಸಕ್ತಿಯನ್ನುಂಟು ಮಾಡಿ ಕನ್ನಡಿಗರಲ್ಲಿ ಒಂದು ಭಾವನಾತ್ಮಕ ಸಂಬಂಧವನ್ನು ಸ್ಥಾಪಿಸಿತು ಎಂಬ ವಿಚಾರ ಈ ಲೇಖನದಲ್ಲಿದೆ.

**೪. ಪತ್ರಿಕಾ ಪ್ರಕಟಣೆಗಳು**

ಸಂಶೋಧನೆಗೆ ಸಹಾಯಕವಾಗುವ, ಉತ್ತಮ ಮಾಹಿತಿಯನ್ನು ನೀಡುವಂತಹ ಅಂಶಗಳಲ್ಲಿ ಪತ್ರಿಕಾ ಪ್ರಕಟಣೆಗಳು ಸಹ ಮುಖ್ಯವಾಗಿವೆ.

**೪.೧ ಕನ್ನಡದ ಉಳಿವಿಗೆ ಒಂದೇ ಹಾದಿ ಮುಕ್ತಜ್ಞಾನ ಮುಕ್ತ ತಂತ್ರಜ್ಞಾನ:** ಬೇಳೂರು ಸುದರ್ಶನ, (ಜುಲೈ ೧೬, ೨೦೧೭ ಪ್ರಜಾವಾಣಿ.) ಪ್ರಸ್ತುತ ಲೇಖನವನ್ನು ಭಾಷಾ ಸ್ಪರ್ಧಾತ್ಮಕ ಯುಗದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಉಳಿವಿಗೆ ಮಾಡಬೇಕಾಗಿರುವ ಕಾರ್ಯದ ಬಗ್ಗೆ ತುಂಬಾ ಸ್ಥೂಲವಾಗಿ ಚರ್ಚಿಸಿದೆ. ತಂತ್ರಜ್ಞಾನದ ಪ್ರಭಾವ ಎಲ್ಲಾ ಕ್ಷೇತ್ರಗಳಲ್ಲಿ ಆವರಿಸಿರುವಂತೆ ಭಾಷಾವಲಯಕ್ಕೂ ಪ್ರವೇಶಿಸಿದೆ. ಇಂದು ತಾಂತ್ರಿಕ ಕ್ಷೇತ್ರದಲ್ಲಿ ಇಂಗ್ಲೀಷ್ ಭಾಷೆಯೂ ಬಳಕೆಗೊಳ್ಳುತ್ತಿರುವುದರಿಂದ ಇಂಗ್ಲೀಷಿನ ಪಾರಮ್ಯತೆ ಬೆಳೆಯುತ್ತಿದೆ. ಇಂಗ್ಲೀಷ್ ಭಾಷೆಯ ಜನಪ್ರಿಯತೆಯಿಂದ ಭಾರತದಲ್ಲಿರುವಂತಹ ಕೆಲವೊಂದು ಪ್ರಾದೇಶಿಕ ಭಾಷೆಗಳಿಗೆ ಕುಂದು ಉಂಟಾಗುವ ಸಂಭವ ಬಂದಿದೆ. ಅಂತಹ ಕುಂದುವಿಕೆಗೆ ಒಳಗಾಗುವಲ್ಲಿ ಕನ್ನಡ ಭಾಷೆಯು ಸಹ ಒಂದೆನ್ನಬಹುದು. ಆದ್ದರಿಂದ ಇಂತಹ ಸಂದರ್ಭದಲ್ಲಿ ಕನ್ನಡ ಭಾಷೆಯ ಉಳಿವಿಗೆ ಸೂಕ್ತ ಪರಿಹಾರವೆಂದರೆ 'ಮುಕ್ತ ಜ್ಞಾನ', 'ಮುಕ್ತ ತಂತ್ರಜ್ಞಾನ' ಎಂದು ಲೇಖನದಲ್ಲಿ ತಿಳಿಸಿದೆ. ಭಾರತೀಯ ವಿಜ್ಞಾನಿಗಳು 'ಸಿಂಪ್ಯೂಟರ್' ಎಂಬ ಕೈಗಣಕವನ್ನು ರೂಪಿಸಿದ್ದರು. ಇದರ ವಿಶೇಷತೆ ಎಂದರೆ ಗೀಚಿದ ಅಕ್ಷರಗಳನ್ನು ಗುರುತಿಸುತ್ತಿತ್ತು. ಆದರೆ ಈ ತಂತ್ರಾಂಶ ಮುಕ್ತವಾದ ಹಕ್ಕು ಸ್ವಾಮ್ಯತೆ ಇಲ್ಲದ ಕಾರಣ ಅದು ಹಾಗೆಯೇ ನಿಂತಿತು. ಕರ್ನಾಟಕದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು ವಿಶ್ವವಿದ್ಯಾಲಯ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯದಂತಹ ಹಲವು ಸಂಸ್ಥೆಗಳು ಈಗಾಗಲೇ ಮುಕ್ತಜ್ಞಾನಕ್ಕೆ ಕೈಜೋಡಿಸಿ ತಮ್ಮೆಲ್ಲ ಕೃತಿಗಳನ್ನು ಸಮುದಾಯಕ್ಕೆ ಬಿಟ್ಟುಕೊಟ್ಟಿರುವುದು ಸಾಹಿತ್ಯ ಬೆಳವಣಿಗೆಗೆ ಮಾಡಿದ ಉತ್ತಮ ಕಾರ್ಯವೆನ್ನಬಹುದು. ಈ ಜ್ಞಾನವನ್ನೆಲ್ಲ ಡಿಜಿಟಲೀಕರಿಸಿದರೆ ಕಲಿಕೆ-ಸಂಶೋಧನೆಗೆ ಆಕರ ಸಿಕ್ಕಿದಂತಾಗುತ್ತದೆ. ಸ್ವತಂತ್ರ/ಮುಕ್ತ ತಂತ್ರಾಂಶಗಳು ಕನ್ನಡದಲ್ಲಿ ಮುದ್ರಿಸಿದ ಹಾಳೆಗಳ ಪಠ್ಯವನ್ನು ಓದಿ ಅಕ್ಷರಗಳಾಗಿ ಪರಿವರ್ತಿಸುವ (ಅಪ್ಟಿಕಲ್ ಕ್ಯಾರೆಕ್ಟರ್ ರೆಕಗ್ನೇಶನ್ (ಓಸಿಆರ್)) ತಂತ್ರಾಂಶವನ್ನು ಭಾರತೀಯ ವಿಜ್ಞಾನ ಸಂಸ್ಥೆಯ ಬಿ.ಡಿ.ಐ.ಎಲ್.ನ ಧನ ಸಹಾಯದಲ್ಲಿ ರೂಪಿಸಿಯೂ ಹಕ್ಕುಸ್ವಾಮ್ಯವನ್ನು ತಾನೆ ಇಟ್ಟುಕೊಂಡಿದೆ. ಈ ತಂತ್ರಾಂಶವನ್ನು ಸಮುದಾಯಕ್ಕೆ ಬಿಡುಗಡೆ ಮಾಡಿದರೆ ಅನುಕೂಲವಾಗುತ್ತದೆ ಎಂಬ ಮಾಹಿತಿ ಇದೆ. ಕನ್ನಡ ಭಾಷೆ ಮತ್ತು ಸಾಹಿತ್ಯ ಉಳಿವಿಗೆ ಪರಿಹಾರವನ್ನು ಲೇಖಕರು ಸವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ.

**೪.೨ ಮುದ್ರಣದ ಸೌಭಾಗ್ಯವನ್ನು ಕಂಡ ಮೊದಲ ಕೃತಿ 'ಎ ಗ್ರಾಮರ್ ಆಫ್ ಕರ್ನಾಟ ಲಾಂಗ್ವೇಜ್'**. ಪ್ರೊ. ಎ.ವಿ. ನಾವಡ (ಆಗಸ್ಟ್ ೧೩, ೨೦೧೭ ಪ್ರಜಾವಾಣಿ.) ಪ್ರಸ್ತುತ ಲೇಖನದಲ್ಲಿ ಕನ್ನಡ ಕೃತಿಗಳಿಗೆ ಮುದ್ರಣದ ಅವಕಾಶ ದೊರೆತಂತಹ ಮಾಹಿತಿಯನ್ನು ಲೇಖಕರು ನಿರೂಪಿಸಿದ್ದಾರೆ. ಕ್ರೈಸ್ತ ಮಿಶನರಿಗಳು ಭಾರತಕ್ಕೆ ಧರ್ಮಪ್ರಸಾರಕ್ಕೆಂದು ಬಂದವು. ಹಾಗೆಯೇ ಜೊತೆಯಲ್ಲಿ ಮುದ್ರಣ ಯಂತ್ರದ ಬಳಕೆಯನ್ನು ತಂದರು. ಕನ್ನಡನಾಡಿನಲ್ಲಿ ಮುದ್ರಣದ ಬಳಕೆ ತಂದಿದ್ದರಿಂದ ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಂತ್ರಜ್ಞಾನದ ಸಹಾಯವು ಪ್ರಾರಂಭಿಕ ಹೆಜ್ಜೆಯಾಯಿತು. ಕ್ರೈಸ್ತ ಧರ್ಮ ಪ್ರಚಾರಕರು ತಮ್ಮ ಧರ್ಮಗ್ರಂಥಗಳನ್ನು ಜನರಿಗೆ ತಲುಪಿಸಲು ಮುದ್ರಣ ಯಂತ್ರವನ್ನು ಆವಿಷ್ಕಾರ ಮಾಡಿದರು. ಧರ್ಮಪ್ರಚಾರದ ಜೊತೆಗೆ ಸ್ಥಳೀಯ ಸಾಹಿತ್ಯ ಕೃತಿಗಳ ಮುದ್ರಣ ಮಾಡುವ ಕೆಲಸಕ್ಕೆ ಕೈ ಹಾಕಿದರು. ಇಂತಹ ಕಾರ್ಯದಲ್ಲಿ ತೊಡಗಿದ ಇಂಗ್ಲೆಂಡಿನ ವಿಲಿಯಂ ಕೇರಿಯು ಮುದ್ರಣ ತಂತ್ರಜ್ಞಾನದಿಂದ ಕನ್ನಡ ಕೃತಿಗಳನ್ನು ಮುದ್ರಿಸುವ ಪ್ರಯತ್ನ ಮಾಡಿದನು. ಅಂತೆಯೇ ವಿಲಿಂಯ ಕೇರಿಯು ರಚಿಸಿದ 'ಎ ಗ್ರಾಮರ್ ಆಫ್ ಕರ್ನಾಟಕ ಲಾಂಗ್ವೇಜ್' ಎಂಬ ಕೃತಿ ಕನ್ನಡದಲ್ಲಿ ಮುದ್ರಿಸಿದನು. ಈ ಕೃತಿಯು ಕನ್ನಡದಲ್ಲಿ ಮೊಟ್ಟಮೊದಲು ಮುದ್ರಣದ ಸೌಭಾಗ್ಯವನ್ನು ಕಂಡ ಕೃತಿಯಾಗಿದೆ. ವಿಲಿಯಂ ಕೇರಿಯು ಅನೇಕ ಭಾರತೀಯ ಭಾಷೆಗಳ ಜೊತೆಗೆ ಕನ್ನಡ ಭಾಷೆಗೂ ಅನುಕೂಲವಾಗುವಂತಹ ಕಾರ್ಯ ಮಾಡಿದನು. ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ವಿಲಿಯಂಕೇರಿಯ ಪ್ರಥಮ ತಾಂತ್ರಿಕ ಪ್ರಯತ್ನ ಪ್ರಶಂಸನೀಯವಾಗಿದೆ. ಈ ರೀತಿಯಾದ ಮಾಹಿತಿ ನನ್ನ ಸಂಶೋಧನ ಅಧ್ಯಯನಕ್ಕೆ ಪೂರಕವಾಗಿದೆ.

ಒಂದು ಸಂಶೋಧನಾ ವಿಷಯ ಆಯ್ಕೆ ಮಾಡಿಕೊಂಡ ನಂತರ ಒಂದು ಸಂಶೋಧನ ಮಹಾಪ್ರಬಂಧವು ಒಂದು ಸ್ಪಷ್ಟವಾದ ರೂಪ ಪಡೆಯಲು ಪೂರ್ವಜ್ಞಾನ ಅಗತ್ಯವಾಗುವುದರಿಂದ ಅಧ್ಯಯನದ ಸಮೀಕ್ಷೆ ಬಹುಮುಖ್ಯವಾಗುತ್ತದೆ.

**೪.೩ ಕನ್ನಡ ಇರಲಿ ತಂತ್ರಜ್ಞಾನದ ಸಂಗಡ:** ದೀಪಕ ಕರಾಡೆ (ನವೆಂಬರ್ ೮, ೨೦೧೮ ಪ್ರಜಾವಾಣಿ ಯುವ). ತಂತ್ರಜ್ಞಾನವು ಜಗತ್ತಿಗೆ ಬಂದಿರುವಂತಹ ಸಂದರ್ಭದಲ್ಲಿ ಕನ್ನಡ ಇಂದಿಗೂ ಅನಾಮಿಕನಷ್ಟು ದೂರ ಉಳಿದಿರುವುದು ಸತ್ಯವಾದ ವಿಷಯವಾಗಿದೆ. ಆದರೂ ಕೆಲವೊಂದು ಪ್ರಚಲಿತ ತಂತ್ರಾಂಶಗಳನ್ನು ಕನ್ನಡಕ್ಕೆ ತರುವ ಪ್ರಯತ್ನಗಳು ನಡೆದಿದ್ದು ಅಂಥ ಯಶಸ್ಸುಗಳಲ್ಲಿ ಧ್ವನಿ ಗುರುತಿಸುವಿಕೆಯು ಸಹ ಒಂದು. ಧ್ವನಿ ಗುರುತಿಸುವಿಕೆಯ ತಾಂತ್ರಿಕ ಕ್ರಿಯಾವ್ಯವಸ್ಥೆಯನ್ನು ಪ್ರಸ್ತುತ ಲೇಖನದಲ್ಲಿ ವಿಶ್ಲೇಷಿಸಲಾಗಿದೆ. ಟೈಪ್ ಮಾಡುವ ಕೀಬೋರ್ಡ್‌ನಿಂದ ಹಿಡಿದು ಫೇಸ್‌ಬುಕ್-ವ್ಯಾಟ್ಸಾಪ್ ಸೇರಿದಂತೆ ಸಾಮಾಜಿಕ ಜಾಲತಾಣಗಳಲ್ಲಿ ಕನ್ನಡ ರಾರಾಜಿಸುತ್ತಿರುವ ಈ ಹೊತ್ತಿನಲ್ಲಿ ವರದಾನವೆಂದೇ ಹೇಳಬಹುದಾಗಿದೆ. ಇದರ ಸಹಾಯದಿಂದ ನಿತ್ಯದ ಡಿಜಿಟಲ್ ಕೆಲಸಗಳನ್ನು ಸುಭವಾಗಿಸಿಕೊಳ್ಳಬಹುದು. ಮೆಸೇಜ್ ಕಳುಹಿಸಲು, ಟೈಪ್ ಮಾಡಲು, ಡಿಕ್ಟೇಷನ್ ತೆಗೆದುಕೊಳ್ಳಲು ಸಹಾಯಕ. ತಂತ್ರಜ್ಞಾನ ದಿನದಿಂದ ದಿನಕ್ಕೆ ಸ್ಥಳೀಯ

ಭಾಷೆಗಳಿಗೆ ಹತ್ತಿರವಾಗುತ್ತಿದ್ದು ಧ್ವನಿ ಗುರುತಿಸುವಿಕೆಯಂತಹ ವಿಶಿಷ್ಟ ತಂತ್ರಜ್ಞಾನಗಳು ಕನ್ನಡವೂ ಸೇರಿದಂತೆ ವಿವಿಧ ಭಾರತೀಯ ಭಾಷೆಗಳಲ್ಲಿ ಸಿಗುತ್ತವೆ. ಕೆಲವು ಇತಿಮಿತಿಗಳ ನಡುವೆಯೂ ಇವು ಅನೇಕ ರೀತಿಯಲ್ಲಿ ನಮ್ಮ ಬರವಣಿಗೆಯನ್ನು ಸುಲಭವಾಗಿಸಿರುವುದು ನಿಜ. ಇದು ಜಾಗತಿಕ ಭಾಷೆಯಾದ ಇಂಗ್ಲೀಷ್‌ನಲ್ಲಿ ಹುಟ್ಟಿ ಕನ್ನಡದಲ್ಲಿ ತನ್ನ ಪಡೆಯುತ್ತಿದೆ. ಧ್ವನಿ ಗುರುತಿಸುವಿಕೆ (Voice recognition or speech Recognition) ಈ ಸೇವೆ ಆರಂಭವಾಗಿದ್ದು ೧೯೫೦ರ ಆಸುಪಾಸಿನಲ್ಲಿ ಸುಮಾರು ಏಳು ದಶಕಗಳೇ ಕಳೆದಿವೆ. ಕಳೆದ ಒಂದು ದಶಕದಲ್ಲಿ ಮೊಬೈಲ್‌ನಲ್ಲಿ ಮತ್ತು ಕಂಪ್ಯೂಟರ್‌ನಲ್ಲಿ ಕನ್ನಡ ಧ್ವನಿಆಧಾರಿತ ಬಳಕೆ ಪೂರ್ಣ ಪ್ರಮಾಣದಲ್ಲಿ ಆರಂಭವಾಗಿದೆ. ಕನ್ನಡವನ್ನು ಅರ್ಥಮಾಡಿಕೊಂಡು ಅದನ್ನು ಪದಗಳಿಗೆ ಪರಿವರ್ತಿಸುವ ಅಂತಹ ತಂತ್ರಾಂಶಗಳು ಈಗ ನಮ್ಮ ಮುಂದಿವೆ. ಧ್ವನಿ ಗುರುತಿಸುವಿಕೆಯ ತಂತ್ರಾಂಶಗಳೆಂದರೆ ಡಿಕ್ಟೇಷನ್ ಡಾಟ್ ಐಒ, ಲಿಪಾಕರ್, ಗೂಗಲ್‌ವಾಯ್ಸ್, ಸ್ಪೀಚ್ ಟೈಪಿಂಗ್ ಇವಿಷ್ಟು ಹೆಚ್ಚು ಪ್ರಚಲಿತದಲ್ಲಿರುವ ಕೆಲವು ಆಯ್ಕೆಗಳಷ್ಟೆ. ಇನ್ನೂ ಅನೇಕ ತಂತ್ರಾಂಶಗಳು ಲಭ್ಯ ಇವೆ. ಅವುಗಳಲ್ಲಿ ಕೆಲವು ದುಬಾರಿಯೂ ಹೌದು. ಇತ್ತೀಚಿನ ದಿನಗಳಲ್ಲಿ ಅತಿ ಹೆಚ್ಚು ಜನಪ್ರಿಯತೆ ಗಳಿಸುತ್ತಿರುವ ಅಮೆಜಾನ್ ಅಲೆಕ್ಸಾ, ಇಕೋಡಾಟ್, ಗೂಗಲ್ ಹೋಮ್ ಮತ್ತು ವರ್ಚುವಲ್ ವೈಸ್ ಅಸಿಸ್ಟೆಂಟ್‌ಗಳಲ್ಲಿ ಇನ್ನೂ ಕನ್ನಡದ ಬಳಕೆ ಆಗಿಲ್ಲ. ಕನ್ನಡದಲ್ಲಿಯೂ ಒಸಿಆರ್(Optical character recognition)ನಲ್ಲಿಯೂ ಯಾವುದೇ ಬೆಳವಣಿಗೆಗಳು ಆಗಿಲ್ಲ. ಈ ನಿಟ್ಟಿನಲ್ಲಿ ಕನ್ನಡವನ್ನು ತಂತ್ರಜ್ಞಾನಕ್ಕೆ ಜೋಡಿಸುವ ಕೆಲಸ ಇನ್ನೂ ಚುರುಕಾಗಬೇಕಿದೆ. ಈ ಲೇಖನದಲ್ಲಿ ಕನ್ನಡವು ಪ್ರಸ್ತುತ ತಂತ್ರಜ್ಞಾನಕ್ಕೆ ಒಳಗೊಂಡು ಬೆಳವಣಿಗೆ ಆಗುತ್ತಿರುವುದರ ಕುರಿತು ಇದೆ. ಇಂತಹ ಲೇಖನದ ಮಾಹಿತಿಯು ನನ್ನ ಅಧ್ಯಯನದ ವಿಷಯಕ್ಕೆ ಪೂರಕವಾದುದಾಗಿದೆ.

**೪.೪ ಹಳೆಯ ಕೃತಿಗಳ ಡಿಜಿಟಲೀಕರಣ:** ರಶ್ಮಿ ಕೆ. (ಅಕ್ಟೋಬರ್ ೩೧, ೨೦೧೯) ಪ್ರಸ್ತುತ ಲೇಖನದಲ್ಲಿ ಹಳೆಯ ಕೃತಿಗಳ ಡಿಜಿಟಲೀಕರಣದಿಂದ ಆಗುವ ಅನುಕೂಲಗಳನ್ನು ವಿವರಿಸಿದ್ದಾರೆ. ಮಾಹಿತಿ ಮತ್ತು ತಂತ್ರಜ್ಞಾನ ವಲಯ ವಿಸ್ತಾರವಾದಂತೆ ಎಲ್ಲ ವಿಷಯಗಳು ಬರಳ ತುದಿಯಲ್ಲಿ ಸಿಗುತ್ತಿದ್ದು ನಮಗೆ ಹಳೆಯ ಪುಸ್ತಕ ಅಥವಾ ಪತ್ರಿಕೆ ವಿಷಯ ಬಂದಾಗ ಮಾತ್ರ ಲೈಬ್ರರಿಯನ್ನು ಆಶ್ರಯಿಸುತ್ತೇವೆ. ಅದರಲ್ಲಿಯೂ ಕನ್ನಡ ಸಾಹಿತ್ಯದ ಮಾಹಿತಿಗಳಿಗಾಗಿ, ಹಳೆಯ ಪುಟಗಳನ್ನು ತಿರುವುತ್ತೇವೆ. ಇಂತಹ ಪುಸ್ತಕಗಳು ಆನ್‌ಲೈನ್‌ನಲ್ಲಿ ಸಿಗುವಂತಾದರೆ ಅಲ್ಲಿರುವ ಮಾಹಿತಿಗಳು ಸುಲಭವಾಗಿ ಸರ್ಚ್ ಮಾಡಲು ಅವಕಾಶವಿದ್ದರೆ ಎಷ್ಟೊಂದು ಅನುಕೂಲವಾಗುತ್ತದೆ. ಇದರಿಂದ ಪುಸ್ತಕ ಪ್ರೇಮಿಗಳಿಗೆ ತಕ್ಷಣ ಸಿಗುವಂತಾಗುತ್ತದೆ. ಇಂತಹ ಕಾರ್ಯಕ್ಕೆ ಸಂಚಯ ಡಾಟ್ ಆರ್ಗ್ (Sanchaya. org) ಎಂಬ ಸಂಸ್ಥೆ ಮುಂದಾಗಿದೆ. ಈ ಸಂಸ್ಥೆ ಕನ್ನಡದ ಹಳೆಯ ಪುಸ್ತಕಗಳನ್ನು ಡಿಜಿಟಲೀಕರಣಗೊಳಿಸುತ್ತಿದೆ. ಮುಕ್ತ ತಂತ್ರಾಂಶದ ಮೂಲಕ ಮುಕ್ತ ಮಾಹಿತಿ ಮತ್ತು ಮುಕ್ತ ಜ್ಞಾನದ ವಾತಾರವಣವನ್ನು ರೂಪಿಸುವ ನಿಟ್ಟಿನಲ್ಲಿ ಸದಾ ಕಾರ್ಯ ನಿರತವಾಗಿರುವ ಸಂಚಯವು ಸಾಹಿತ್ಯ, ಸಂಶೋಧನೆ, ಅಧ್ಯಯನ ಮತ್ತು ಸಮುದಾಯ (ಕ್ರೌಡ್ ಸೋರ್ಸಿಂಗ್)

ಮೂಲಕ ಕನ್ನಡ ಭಾಷಾ ತಂತ್ರಜ್ಞಾನದ ಅವಶ್ಯಕತೆಗಳನ್ನು ಹುಡುಕಿ ಅವುಗಳನ್ನು ಪೂರೈಸುವ ಸಾಧ್ಯತೆಗಳನ್ನು ಕನ್ನಡಿಗರ ಮುಂದೆ ಇಡುತ್ತಿದೆ. Servents of Knowledge ಸಮುದಾಯ ಯೋಜನೆಯಡಿಯಲ್ಲಿ ಕಾಪಿರೈಟ್ ಹೊರತಾದ ಕನ್ನಡದ ಅಮೂಲ್ಯ ಪುಸ್ತಕಗಳನ್ನು ಡಿಜಿಟಲೀಕರಿಸಿ ಇಂಟರ್ನೆಟ್ ಆರ್ಕೈವ್ ಮೂಲಕ ಲಭ್ಯವಾಗಿಸುವ ಕಾರ್ಯವನ್ನು ಸಂಚಯ ಮಾಡುತ್ತಿದೆ. ಈ ರೀತಿಯ ಕಾರ್ಯದಿಂದ ಕನ್ನಡ ಸಾಹಿತ್ಯ ಮತ್ತಷ್ಟು ಬೆಳವಣಿಗೆಯಾಗಲು ಸಾಧ್ಯವಾಗುತ್ತದೆ. ಇಂದಿನ ಭಾಷಾ ಪೈಪೋಟಿಯ ತಂತ್ರಜ್ಞಾನದ ಜಗತ್ತಿನಲ್ಲಿ ಈ ರೀತಿಯ ತಾಂತ್ರಿಕ ಆವಿಷ್ಕಾರಗಳು ಕನ್ನಡ ಸಾಹಿತ್ಯಕ ವಲಯವನ್ನು ಮತ್ತಷ್ಟು ವಿಸ್ತರಿಸುತ್ತವೆ. ಇಂತಹ ಮಾಹಿತಿಯು ನನ್ನ ಸಂಶೋಧನಾ ಅಧ್ಯಯನಕ್ಕೆ ಪೂರಕವಾಗಿದೆ.

# ಅಧ್ಯಾಯ: ಎರಡು

# ಅಧ್ಯಯನದ ಪರಿಕಲ್ಪನೆ

೨.೧. ತಂತ್ರಜ್ಞಾನದ ಅರ್ಥ ಮತ್ತು ವಿವರಣೆ

೨.೨. ತಾಂತ್ರಿಕತೆ ಮತ್ತು ತಂತ್ರಜ್ಞಾನದ ಪ್ರಾಚೀನತೆ

## ಅಧ್ಯಾಯ: ಎರಡು

# ಅಧ್ಯಯನದ ಪರಿಕಲ್ಪನೆ

ತಂತ್ರಜ್ಞಾನ ಎನ್ನುವುದು ಕ್ರಿಯೆ, ಜ್ಞಾನ, ಕೌಶಲ್ಯ ಮತ್ತು ಜನಬದುಕಿನ ಇಡೀತನದಿಂದ ಹುಟ್ಟಿದ್ದೆ ಹೊರತು ಅದೊಂದು ಕೇವಲ ಉಪಕರಣ ಸಂಸ್ಕೃತಿ ಅಲ್ಲ. ಅದು ಪ್ರಯೋಗಶೀಲವಾಗಿರುವುದು. ಸದಾ ಘಟಿಸುತ್ತಲೇ ಇರುತ್ತದೆ. ಅದೊಂದು ಜಡ ಪರಿಕಲ್ಪನೆ ಮಾತ್ರವಲ್ಲ. ಮನುಷ್ಯನ ಮಾನಸಿಕ ಕ್ರಿಯೆಗಳಾದ ಭಾವಿಸುವ, ಕಲ್ಪಿಸುವ, ಆಲೋಚಿಸುವ ಹಾಗೂ ಪ್ರಯೋಗಕ್ಕೆ ಅಳವಡಿಸುವ ಪ್ರಕ್ರಿಯೆಯಿಂದ ಹುಟ್ಟಿದ್ದು. ತಂತ್ರಜ್ಞಾನ ಎನ್ನುವುದು ಸಾಂಪ್ರದಾಯಿಕ ಸಮಾಜಗಳಲ್ಲಿ ಕೇವಲ ವ್ಯಕ್ತಿಯ ನೈಪುಣ್ಯತೆ ಹಾಗೂ ಉಪಕರಣಗಳ ಬಳಕೆಗೆ ಸೀಮಿತವಾಗಿರದೆ ಜೀವನಾವಶ್ಯಕ ಒತ್ತಡ ಹಾಗೂ ದೇಹ ಭಾವಗಳ ಸಹಸ್ಪಂದನೆಯಿಂದ ಬೆಳೆದುಬಂದಿದೆ. ಸಾಹಿತ್ಯ ಮತ್ತು ತಂತ್ರಜ್ಞಾನಗಳೆಂದರೆ ಒಂದು ಪ್ರಕ್ರಿಯೆಯ ವಿವಿಧ ಹಂತಗಳು ಎನ್ನುವುದು ನನ್ನ ಭಾವನೆ. ಅದು ಜೀವಂತ ಸಮುದಾಯದ ಅಂತಃಶಿಸ್ತೀಯ ಭಾಗ ಹೊರತು ಕೇವಲ ಬಂಡವಾಳಶಾಹಿಗಳ ಗಳಿಕೆಯ ಸರಕಲ್ಲ. ಈ ಪ್ರಕ್ರಿಯಾತ್ಮಕ ಹಾಗೂ ಸಾಮುದಾಯಿಕ ಪ್ರಜ್ಞೆಯ ಅಖಂಡತೆಯಲ್ಲಿ ನಾನು ಸಾಹಿತ್ಯ ಮತ್ತು ತಂತ್ರಜ್ಞಾನವನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಿದ್ದೇನೆ.

ಭಾಷೆಯು ಮನುಷ್ಯನಿಗೆ ಲಭ್ಯವಾಗಿರುವ ಅತ್ಯಂತ ಶ್ರೇಷ್ಠ ವರದಾನವಾಗಿದೆ. ಸಮಾಜದಲ್ಲಿ ಸಾಂಘಿಕ ಜೀವನ ನಡೆಸಲು ಮನುಷ್ಯನಿಗೆ ಅತ್ಯವಶ್ಯಕ ಹಾಗೂ ಮಹತ್ವದ ಸಾಧನವೆಂದರೆ ಭಾಷೆ. ತನ್ನ ಅನಿಸಿಕೆ, ಅಭಿಪ್ರಾಯ, ಭಾವನೆಯನ್ನು ಇತರರೊಂದಿಗೆ ವ್ಯಕ್ತಪಡಿಸಲು, ಹಂಚಿಕೊಳ್ಳಲು ಒಂದು ನಿರ್ದಿಷ್ಟವಾದ ಭಾಷೆಯು ಬೇಕೆ ಬೇಕು. ಆದ್ದರಿಂದಲೇ ಖ್ಯಾತ ಅಲಂಕಾರಿಕನಾದ ದಂಡಿಯು ಭಾಷೆಯೆಂಬ ಬೆಳಕು ಜಗತ್ತಿನಲ್ಲಿ ಇಲ್ಲದಿದ್ದರೆ ಈ ಜಗತ್ತು ಕತ್ತಲಮಯವಾಗಿರುತ್ತಿತ್ತು ಎಂದಿದ್ದಾನೆ. ಭಾಷೆಯ ಉಗಮದ ಬಗ್ಗೆ ನಿರ್ದಿಷ್ಟವಾದ ಉಲ್ಲೇಖವಿಲ್ಲವಾದರೂ ಪ್ರಾಚೀನಕಾಲದಿಂದಲೂ ಇಲ್ಲಿಯವರೆಗೆ ಜಗತ್ತಿನಾದ್ಯಂತ ಆಯಾ ಭೌಗೋಳಿಕ ಅಥವಾ ಪರಿಸರಕ್ಕನುಗುಣವಾಗಿ ಹಲವಾರು ಭಾಷೆಗಳು ಸೃಷ್ಟಿಯಾಗಿವೆ. ಅವುಗಳಲ್ಲಿ ಕೆಲವು ಸಂಪದ್ಭರಿತವಾದ ಸಾಹಿತ್ಯ ಹೊಂದಿ ಜಗತ್ತಿನ ಮುಂದೆಯಿದ್ದರೆ, ಕೆಲವು ಅಳಿದಿರುವುದು, ಮತ್ತೆ

ಕೆಲವು ಅಳಿಯುತ್ತಿರುವುದು ಕಂಡುಬರುತ್ತದೆ. ಈ ಒಂದು ಭಾಷೆಯ ಆವಿಷ್ಕಾರವೇ ಒಂದು ರೋಚಕವಾಗಿರುವಂತಹದ್ದು. ಆದ್ದರಿಂದಲೇ ಚಾರ್ಲ್ಸ್‌ಡಾರ್ವಿನ್- 'ಮಾನವ ಪ್ರಪಂಚದ ಆವಿಷ್ಕಾರಗಳಲೆಲ್ಲಾ ಭಾಷೆಯ ಉಪಯೋಗಿ ಆವಿಷ್ಕಾರದಷ್ಟು ಯಾವುದು ಇಲ್ಲ ಎಂದಿದ್ದಾನೆ. ಇಂತಹ ಹಲವಾರು ಭಾಷೆಗಳಲ್ಲಿ ಸುಮಾರು ಒಂದು ಸಾವಿರದ ಐನೂರು ವರ್ಷಗಳ ಇತಿಹಾಸವಿದ್ದು ಸತ್ವಯುತ ಸಾಹಿತ್ಯ ಶಕ್ತಿಯನ್ನು ಹೊಂದಿರುವಂತಹ ಕನ್ನಡ ಭಾಷೆಯು ಒಂದು. ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯ ಹಾದಿ ನೋಡಿದಾಗ ಕ್ರಿ.ಶ. ೪೫೦ರಲ್ಲಿ ದೊರೆತಿರುವ ಹಲ್ಮಿಡಿ ಶಾಸನದಿಂದ ಪ್ರಾರಂಭವಾಗುತ್ತದೆ. ಹಲ್ಮಿಡಿ ಶಾಸನದ ಕಾಲಕ್ಕೆ ಕನ್ನಡ ಸಮೃದ್ಧಿಯಾದ ಭಾಷೆಯೆಂದು ತಿಳಿದರೂ ಆ ಕಾಲಘಟ್ಟದ ಯಾವುದೇ ಕಾವ್ಯವಾಗಲಿ, ಕೃತಿಯಾಗಲಿ ದೊರೆತಿಲ್ಲವಾದ್ದರಿಂದ ಹಲ್ಮಿಡಿ ಶಾಸನವೇ ನಮಗೆ ದೊರೆತಿರುವ ಕನ್ನಡ ಭಾಷೆಯ ಪ್ರಾಚೀನ ದಾಖಲೆಯಾಗಿದೆ. ಶಾಸನ ರೂಪದ ದಾಖಲೆಯಾಗಿ ಹಲ್ಮಿಡಿ ಶಾಸನ ಲಭ್ಯವಾದರೆ ಕೃತಿಯ ರೂಪವಾಗಿ ಲಭ್ಯವಾಗಿದ್ದು ಕವಿರಾಜಮಾರ್ಗ. ಕನ್ನಡ ನಾಡನ್ನು ಆಳಿದ ರಾಷ್ಟ್ರಕೂಟರ ದೊರೆ ಅಮೋಘವರ್ಷ ನೃಪತುಂಗನ ಆಸ್ಥಾನದ ಕವಿಯಾದ ಶ್ರೀವಿಜಯನಿಂದ ರಚಿತವಾದ ಲಾಕ್ಷಣಿಕ ಗ್ರಂಥ ಈ ಕವಿರಾಜಮಾರ್ಗ. ಒಂದು ಮೊಳಕೆಯಿಂದ ಬೃಹತ್‌ವೃಕ್ಷ ಎನ್ನುವ ಹಾಗೆ ಸಾಹಿತ್ಯ ಕೃತಿಗಳ ರಚನೆ ಕವಿರಾಜಮಾರ್ಗ ಕೃತಿಯಿಂದ ಹಿಡಿದು ಇಂದಿನವರೆಗೆ ಸಾಕಷ್ಟು ಕನ್ನಡ ಸಾಹಿತ್ಯ ಕೃತಿಗಳು ರಚನೆಯಾಗಿರುವುದನ್ನು ಕಾಣುತ್ತೇವೆ.

ಒಂದು ಭಾಷೆಯಲ್ಲಿ ಸಾಹಿತ್ಯ ಕೃತಿಗಳು ರಚನೆಯಾಗಬೇಕಾದರೆ ಬೌದ್ಧಿಕ ಸಂಪತ್ತು ಎಷ್ಟು ಮುಖ್ಯವೋ ಭೌತಿಕ ಸಂಪತ್ತು ಅಷ್ಟೇ ಮುಖ್ಯವಾದುದು. ಮನುಷ್ಯನ ಅಂತರಂಗದಲ್ಲಿ ಹುದುಗಿರುವ ಕಾವ್ಯಧಾರೆ ಗೋಚರವಾಗಬೇಕಾದರೆ ಒಂದು ಭಾಷೆಯು ಒಳಗೊಂಡಿರುವ ನಿರ್ದಿಷ್ಟ ರೂಪದ ಲಿಪಿಯನ್ನು ಪರಿಕರಗಳ ಮೇಲೆ ಬರೆದು ಅದನ್ನು ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ಒಂದು ಕಾಲದಿಂದ ಮತ್ತೊಂದು ಕಾಲಕ್ಕೆ ತಲುಪಬೇಕಾದರೆ ಆಯಾ ಸಂದರ್ಭದಲ್ಲಿ ಒಂದು ನಿರ್ದಿಷ್ಟವಾದ ತಾಂತ್ರಿಕಕಾರ್ಯ ಅಥವಾ ತಂತ್ರಜ್ಞಾನ ಅಥವಾ ಕೌಶಲ್ಯಕ್ರಿಯೆ ಬೇಕೇ ಬೇಕಾಗುತ್ತದೆ. ಹಾಗಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯೂ ಸಹ ಕಾಲದಿಂದ ಕಾಲಕ್ಕೆ ತಾಂತ್ರಿಕವಾಗಿ ಆಗಿರುವುದನ್ನು ಕಾಣಬಹುದಾಗಿದೆ.

ಈ 'ತಂತ್ರಜ್ಞಾನ' ಎಂಬ ಪದ ಇಂದಿನ ದಿನಗಳಲ್ಲಿ ಹೆಚ್ಚು ಬಳಕೆಗೊಳ್ಳುತ್ತಿದ್ದರೂ ಹಾಗೂ ವಿವಿಧ ರೀತಿಯಲ್ಲಿ ಅರ್ಥೈಸುತ್ತಿದ್ದರೂ ಕೌಶಲ್ಯಕ್ರಿಯೆ ರೂಪದಲ್ಲಿ ಹಿಂದಿನಿಂದಲೂ ವಿವಿಧ ಕ್ಷೇತ್ರಗಳಲ್ಲಿ ವಿವಿಧ ರೀತಿಯಾಗಿ 'ತಂತ್ರಜ್ಞಾನ'ವೆಂದು ಬಳಕೆಯಾಗುತ್ತಲೇ ಬಂದಿದೆ. ಆದುದರಿಂದ 'ತಂತ್ರಜ್ಞಾನ'ವೆಂಬುದನ್ನು ಭಾಷೆ ಮತ್ತು ಸಾಹಿತ್ಯಿಕ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡಿ ಇದರ ಅರ್ಥವನ್ನು ಗ್ರಹಿಸಬೇಕಾಗಿದೆ.

## ೨.೧. ತಂತ್ರಜ್ಞಾನದ ಅರ್ಥ ಮತ್ತು ವಿವರಣೆ

'ತಂತ್ರಜ್ಞಾನ' ಎಂಬ ಪದವನ್ನು ಬಿಡಿಸಿ ಬರೆದಾಗ ತಂತ್ರ+ಜ್ಞಾನ ಎಂದಾಗುತ್ತದೆ. "ತಂತ್ರ ಎಂದರೆ ಉಪಾಯ, ಇಂದ್ರಜಾಲ, ಗ್ರಂಥದ ಒಂದು ಭಾಗ, ರಹಸ್ಯ, ಸಾಹಿತ್ಯದಲ್ಲಿ ನಿರ್ಮಾಣ ಕೌಶಲ"[೧] ಇತ್ಯಾದಿಗಳು ಜ್ಞಾನವೆಂದರೆ ತಿಳುವಳಿಕೆ, ಅರಿವು, ಬ್ರಹ್ಮಜ್ಞಾನ, ಆತ್ಮವಿದ್ಯೆ, ಎಚ್ಚರ ತಿಳಿವು ಎಂಬ ವಿವಿಧ ಅರ್ಥಗಳು ಪ್ರಾಚೀನ ಕಾಲದಿಂದಲೂ ಬಳಕೆಯಾಗುತ್ತಾ ಬಂದಿವೆ. ತಂತ್ರ ಎನ್ನುವ ಪದಕ್ಕೆ ಸಂವಾದಿ ಪದವಾದ ಉಪಾಯ ಎಂಬುದಕ್ಕೆ ಕೌಶಲ್ಯ ಎಂಬ ಅರ್ಥವನ್ನು ಸಹ ನೀಡಬಹುದು. ಒಟ್ಟಾರೆಯಾಗಿ ಎರಡು ಪದಗಳ ಅರ್ಥವನ್ನು ಸಂಯೋಜಿಸಿ ನೋಡಿದಾಗ ಕೌಶಲ್ಯ ಮತ್ತು ಅರಿವಿನ ಸಂಯೋಜನೆ ಎಂಬ ಅರ್ಥ ಬರುತ್ತದೆ. ಕನ್ನಡ ನಿಘಂಟಿನಲ್ಲಿ ತಂತ್ರಜ್ಞಾನಕ್ಕೆ ಪ್ರಯೋಗ ಜ್ಞಾನ, ಶಾಸ್ತ್ರೀಯ ಜ್ಞಾನವೆಂಬ ಅರ್ಥವನ್ನು ನೀಡಲಾಗಿದೆ. ೨೧ನೆಯ ಶತಮಾನದ ಪ್ರಸ್ತುತ ಸಂದರ್ಭದಲ್ಲಿ ತಂತ್ರಜ್ಞಾನ, ತಂತ್ರಗಾರಿಕೆ, ತಾಂತ್ರಿಕತೆ ಎಂಬ ಪದಗಳು ಎಲ್ಲಾ ಕ್ಷೇತ್ರಗಳಲ್ಲೂ ಬಳಕೆಯಾಗುತ್ತಿದ್ದು ಬಹಳಷ್ಟು ಪ್ರಸಿದ್ಧಿಯನ್ನು ಪಡೆದುಕೊಂಡಿವೆ.

ಭಾಷೆ ಮತ್ತು ಸಾಹಿತ್ಯ ವಿಚಾರದ ಪರಧಿಯೊಳಗಡೆ 'ತಂತ್ರಜ್ಞಾನ'ವೆಂಬುದರ ಅರ್ಥವನ್ನು ಗ್ರಹಿಸಿದಾಗ 'ತಂತ್ರ' ಎಂದರೆ ಉಪಾಯ, ಕೌಶಲ್ಯ ಎಂದೂ 'ಜ್ಞಾನ'ವೆಂದರೆ ತಿಳುವಳಿಕೆ ಅರಿವು, ವಿವೇಕ ಎಂದರ್ಥ. ಈ ಎರಡು ಪದಗಳನ್ನು ಸಂಯೋಜಿಸಿ ನೋಡಿದಾಗ ಯಾವುದೆ ಒಂದು ವಿಚಾರವನ್ನು ದಾಖಲಿಸುವ, ಮುದ್ರಿಸುವ ಮತ್ತು ಒಬ್ಬರಿಂದ ಮತ್ತೊಬ್ಬರಿಗೆ ಕೌಶಲ್ಯಯುಕ್ತವಾಗಿ ಪ್ರಸಾರ ಮಾಡುವಂತಹ ಮಾರ್ಗವನ್ನು 'ತಂತ್ರಜ್ಞಾನ' ಎಂದು ನಾನು ಕರೆದಿದ್ದೇನೆ.

ತಾಂತ್ರಿಕತೆ ಅಥವಾ ತಂತ್ರಜ್ಞಾನ ಎಂಬುದು 'ಲೋಹದಿಂದ ಮಾಡಿದ ಸರಕುಗಳಲ್ಲಿನ ಗುರುತ್ವಾಕರ್ಷಣ ರೂಪದಿಂದಾಗುವ ಚಟುವಟಿಕೆ ಅಥವಾ ಕ್ರಿಯೆ ಎಂಬುದು ಇಂದಿನ ಜನಮನದ ವಸ್ತುಸ್ಥಿತಿಯ ವಿಚಾರವಾಗಿದೆ.' ಆದರೆ ತಂತ್ರಜ್ಞಾನವೆಂಬುದು ಹಿಂದಿನಿಂದಲೂ ಜನರ ಬದುಕಿನಲ್ಲಿದ್ದಂತಹ ಕೃಷಿ, ಕಲೆ, ಸಾಹಿತ್ಯ, ವಾಸ್ತುಶಿಲ್ಪ ಮುಂತಾದ ಅಂಶಗಳಲ್ಲಿ ಅವರದ್ದೇ ಆದ ರೀತಿಯಲ್ಲಿ ವಿವಿಧ ಬಗೆಯಲ್ಲಿ ಹಂತಹಂತವಾಗಿ ಬೆಳೆದುಬಂದಿದೆ. ಇದಕ್ಕೆ ಒಂದು ಅರ್ಥದಲ್ಲಿ ಭಾರತೀಯ ಸಾಹಿತ್ಯದಲ್ಲಿ ಅರವತ್ನಾಲ್ಕು ಕಲೆಗಳೆಂದು ಗುರುತಿಸಲಾಗಿದೆ. ಈ ಅರ್ಥದಲ್ಲಿ ತಂತ್ರಜ್ಞಾನವೆಂದರೆ ಸಕಲವನ್ನು ಸಕಲರನ್ನು ಒಳಗೊಂಡ ಒಂದು ಪ್ರಕ್ರಿಯಾತ್ಮಕ ಸೃಜನಶೀಲ ಜ್ಞಾನದ ನೆಲೆ ಎನ್ನುವುದು ನನ್ನ ನಿಲುವಾಗಿದೆ.

ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯಲ್ಲಿ ಯಾವ ರೀತಿ ತಂತ್ರಜ್ಞಾನ ಅಥವಾ ತಾಂತ್ರಿಕತೆ ಸಹಾಯಕವಾಗಿದೆ ಎಂಬುದನ್ನು ನೋಡಿದಾಗ 'ತಾಂತ್ರಿಕ ಕಾರ್ಯ' ಎನ್ನುವುದು ಮಿದುಳು ಮತ್ತು ಮನಸಿನ ಸಂಯೋಜನೆಯಾಗಿ ಅಂದಿನ ಜನರಲ್ಲಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ.

ಭೂಮಿಯ ಮೇಲೆ ಪ್ರಾಣಿಗಳು ಸೃಷ್ಟಿಯಾದಂತೆ ಮಾನವನು ಕೂಡ ಸೃಷ್ಟಿಯಾದನು. ಮೊದಲಿಗೆ ಮಾನವನು ಪ್ರಾಣಿಗಳಂತೆ ಬದುಕುತ್ತಿದ್ದ. ಆದರೆ ಇತರ ಪ್ರಾಣಿಗಳಿಗಿಂತ ಭಿನ್ನ ಮತ್ತು ಶ್ರೇಷ್ಠವೆನಿಸಲು ಅವನಿಗಿದ್ದ ಆಲೋಚನೆಯ ಶಕ್ತಿ ಮತ್ತು ಅವನಿಗೆ ದೊರೆತ 'ಭಾಷೆ'ಯ ವರದಾನ. ಈ ಭಾಷೆಯು ಮನುಷ್ಯನಲ್ಲಿ ಅವನಿಗೆ ಆದ ಅನುಭವ ಮತ್ತು ಅವನ ಮನಸ್ಸಿನಲ್ಲಿ ಮೂಡುವ ಭಾವನೆಗಳನ್ನು ವ್ಯಕ್ತಪಡಿಸಲು, ಮತ್ತೊಬ್ಬರ ಜೊತೆ ಸಂವಹನ ನಡೆಸಲು ಪ್ರಯತ್ನಿಸುವ ಸಂದರ್ಭದಲ್ಲಿ ಹುಟ್ಟಿರಬೇಕು. ಈ ಭಾಷೆಯ ಸೃಷ್ಟಿಕರಣ ಕ್ರಿಯೆಯಿಂದ ಮನುಷ್ಯನಲ್ಲಿ ಚಿಂತನೆ ಮತ್ತು ಆಲೋಚನೆಯ ಶಕ್ತಿಯಿಂದ ಅವನ ಜೀವನದ ಗತಿಯೇ ಬದಲಾಗುತ್ತಾ ಬಂದಿರುವುದನ್ನು ಮಾನವಶಾಸ್ತ್ರಜ್ಞರು ಭಾಷಾಶಾಸ್ತ್ರಜ್ಞರು ಈಗಾಗಲೇ ಗುರುತಿಸಿದ್ದಾರೆ.

ಭಾಷೆಯನ್ನು ಸೃಷ್ಟಿಸಿಕೊಂಡ ಮನುಷ್ಯ ತನ್ನ ಭಾವನೆಗಳನ್ನು ಭಾಷೆಯ ಮೂಲಕ ವ್ಯಕ್ತಪಡಿಸಿ ಅದನ್ನು ಒಂದು ಕಡೆ ದಾಖಲಿಸಲು ಕಂಡುಕೊಂಡ ತಾಂತ್ರಿಕ ಅಂಶವೇ ಬರಹ. ಬರಹವನ್ನು ತನ್ನದೇ ಆದ ಲಿಪಿಯ ಮೂಲಕ ಕಂಡುಕೊಂಡ. ಭಾಷೆಯ ಬೆಳವಣಿಗೆಯ ಬುನಾದಿಯೇ ಲಿಪಿ ತಂತ್ರಜ್ಞಾನದ ಆವಿಷ್ಕಾರ.

ಲಿಪಿಯನ್ನು ಕಲ್ಲಿನ ಮೇಲೆ, ಮಣ್ಣಿನ ಮೇಲೆ ಬರೆಯುತ್ತಾ ತಮ್ಮ ಭಾವನೆಯನ್ನು ಅಥವಾ ವಿಷಯವನ್ನು ಮುಟ್ಟಿಸುವಂತಹ ಕಾರ್ಯ ಮಾಡುತ್ತಿದ್ದರು. ಹೀಗೇ ಕಲ್ಲು, ಮಣ್ಣು, ಮರಳು, ಮರದ ತೊಗಟೆ, ಚರ್ಮ, ಲೋಹ ಇತ್ಯಾದಿ ಪರಿಕರಗಳ ಮೇಲೆ ರೂಪುಗೊಂಡು ಇಂದು ಡಿಜಿಟಲ್ ರೂಪದಲ್ಲಿ ಪರದೆಯ ಮೇಲೆ ನಿಲ್ಲುವಂತಹ ಮಟ್ಟಿಗೆ ತಂತ್ರಜ್ಞಾನ ಬೆಳೆದಿದೆ.

ಕಾಲ ಕಳೆದ ಹಾಗೆ ಮನುಷ್ಯನಲ್ಲಿ ಚಿಂತನೆ, ಆಲೋಚನೆಗಳು ಹೆಚ್ಚಾಗಿ ಬೆಳೆಯತೊಡಗಿ ಅಕ್ಷರ ಜ್ಞಾನವೂ ಬೆಳೆದು ವಿದ್ವತ್ ಪ್ರತಿಭೆಯಿಂದ ಸಾಹಿತ್ಯ ಸೃಷ್ಟಿಯನ್ನು ಮಾಡತೊಡಗಿದ. ತನ್ನ ಭಾಷೆಯ ಅವಿನಾಶತೆಗೂ ಮತ್ತು ಭಾಷೆಯ ಪ್ರಬುದ್ಧತೆಗೂ "ಸಾಹಿತ್ಯ ಸೃಷ್ಟಿಯು" ಮುಖ್ಯವಾಯಿತು.

ಭಾಷೆಯ ಮತ್ತು ಸಾಹಿತ್ಯದ ಪ್ರಸರಣ ಒಂದು ಕಡೆ ಮೌಖಿಕವಾಗಿ ಸಾಗಿದರೆ ಮತ್ತೊಂದು ಕಡೆ ಲಿಪಿಯ ಮುಖಾಂತರ ಸಾಗಿತು. ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕೃತಿಗಳು ರಚನೆಯಾದಂತೆ ಆ ಕೃತಿಗಳ ಬರಹಗಳಲ್ಲಿ ಹಾಗೂ ಆ ಕೃತಿಗಳ ರಕ್ಷಣೆಗೆ ಮಾಡಿದ ತಾಂತ್ರಿಕ ಕಾರ್ಯಗಳಲ್ಲಿ ಹಲವು ಆವಿಷ್ಕಾರಗಳಾದವು. ಭಾಷೆಯ ಪ್ರಬುದ್ಧತೆ ಮತ್ತು ಸಾಹಿತ್ಯದ ಅಭಿರುಚಿ ಹಂತಹಂತವಾಗಿ ಸಮಾಜದಲ್ಲಿ ಬೆಳೆಯತೊಡಗಿತು. ಹಾಗೆಯೇ ಭಾಷೆಯ ಮತ್ತು ಸಾಹಿತ್ಯದ ಪ್ರಸರಣ ಲಿಪಿಯ ಮುಖಾಂತರ ಹೇಗಾಯಿತೋ ಮೌಖಿಕವಾಗಿಯೂ ಸಾಗಿತು. ಮೌಖಿಕವಾಗಿ ಹೇಗೆಂದರೆ ಕಥೆ ಹೇಳುವುದರ ಮುಖಾಂತರ, ಗಾಯನದ ಮುಖಾಂತರ, ಚಿತ್ರಕಲೆಯ ಮುಖಾಂತರ, ಕೆಲವರಿಂದ ಹಲವರಿಗೆ ಏಕಕಾಲದಲ್ಲಿ ಒಂದು ಸಂದೇಶವನ್ನು

ತಲುಪಿಸುವಂತಹ ಕಾರ್ಯವನ್ನು ತಾಂತ್ರಿಕ ವಿಧಾನದಿಂದ ಜನರು ಮಾಡುತ್ತಿದ್ದರು. ಈ ಬಗೆಯ ತಾಂತ್ರಿಕತೆ ಅಥವಾ ತಂತ್ರಜ್ಞಾನದಿಂದ ಭಾಷೆ ಮತ್ತು ಸಾಹಿತ್ಯವು ಬೆಳವಣಿಗೆಯಾಯಿತು.

ತಂತ್ರಜ್ಞಾನದ ಅರ್ಥಕ್ಕೆ ಸಂಬಂಧಪಟ್ಟಂತೆ ಈ ಕೆಳಗಿನ ವಿದ್ವಾಂಸರ ವ್ಯಾಖ್ಯಾನಗಳನ್ನು ಗಮನಿಸಬಹುದಾಗಿದೆ. ಡಾ.ಜಿ. ರಾಮಕೃಷ್ಣರವರು ರಚಿಸಿರುವ 'ಭಾರತೀಯ ವಿಜ್ಞಾನದ ಹಾದಿ' ಎಂಬ ಪುಸ್ತಕದ ಶುಲ್ಬಸೂತ್ರಗಳು ಎಂಬ ಲೇಖನದಲ್ಲಿ 'ವಿಶ್ಲೇಷಣೆಯಲ್ಲಿ ಈ ರೀತಿ ಇದೆ. "ತಾಂತ್ರಿಕ ಜ್ಞಾನವೆಂದರೆ ಸ್ಥೂಲವಾಗಿ ಯಾವುದೋ ಕ್ರಿಯೆಯನ್ನೆಸಗಲು ಇರುವ ಪದ್ಧತಿಯ ತಿಳುವಳಿಕೆ. ಅವನು ಒಬ್ಬ ಇನ್ನೊಬ್ಬನಿಗೆ ಕಲಿಸುತ್ತಾ ಮುಂದುವರಿಸಬಹುದು"[೨] ಎನ್ನುವ ಅಭಿಪ್ರಾಯವಿದೆ.

ಪ್ರೊ. ಬರಗೂರು ರಾಮಚಂದ್ರಪ್ಪನವರು ಸಂಪಾದಿಸಿರುವ ಕನ್ನಡ ಪ್ರಜ್ಞೆ ಎಂಬ ಪುಸ್ತಕದ ಕನ್ನಡ ಭಾಷೆ ಮತ್ತು ತಂತ್ರಜ್ಞಾನ ಎಂಬ ಲೇಖನದಲ್ಲಿ "ತಂತ್ರಜ್ಞಾನವೆಂದರೆ ಮನುಷ್ಯನ ಮನಸ್ಸಿಗೆ ಮೆದುಳು ಕೊಟ್ಟ ಆಕಾರವೇ ತಂತ್ರಜ್ಞಾನವೆನ್ನಬಹುದು. ರೂಪಕವಾಗಿ ಹೇಳುವುದಾದರೆ ಭಾಷೆಯೆನ್ನುವುದು ಮನಸ್ಸು ತಂತ್ರಜ್ಞಾನವೆನ್ನುವುದು ಮೆದುಳು."[೩] ಹಾಗೆಯೇ ಇನ್ನೂ ಕೆಲವೊಂದು ವ್ಯಾಖ್ಯಾನಗಳನ್ನು ತಾಂತ್ರಿಕತೆಗೆ ಸಂಬಂಧಿಸಿದಂತೆ ನೋಡಬಹುದು.

ತಾಂತ್ರಿಕತೆ ಎಂದರೆ ಅಂತರಂಗದ ಸಾಮರ್ಥ್ಯವನ್ನು ಬಹಿರಂಗದ ಮೂರ್ತ ವಾಸ್ತವವಾಗಿ ಪರಿವರ್ತಿಸುವುದೇ ತಾಂತ್ರಿಕತೆ. ಅದು ಪರಿ(ಯೇ)ಕಲ್ಪನೆಯೊಂದನ್ನು ಉಪಯುಕ್ತ ವಸ್ತುವನ್ನಾಗಿಸುತ್ತದೆ.

'ನಿರ್ದಿಷ್ಟ ಉದ್ದೇಶದ ಪೂರೈಕೆಗಾಗಿ ಸುಪ್ತವಾದ ಸಾಮರ್ಥ್ಯವನ್ನು ಹೊರಹೊಮ್ಮಿಸುವುದೇ ತಾಂತ್ರಿಕತೆ.'

'ಅಂತರ್ಗತ ಸಾಮರ್ಥ್ಯವನ್ನು ಕ್ರಿಯಾಶೀಲ ಶಕ್ತಿಯಾಗಿ ಪರಿವರ್ತಿಸುವ ಕೌಶಲ್ಯವೇ ತಾಂತ್ರಿಕತೆ. ಹೀಗೆ ತಂತ್ರಜ್ಞಾನವೆನ್ನುವುದು ಆಯಾ ಕಾಲದ ಬದುಕಿನ ಶೋಧರೂಪವಾಗಿದೆ ಎನ್ನುವುದನ್ನು ಈ ಎಲ್ಲ ವ್ಯಾಖ್ಯಾನಗಳು ಹೇಳುತ್ತವೆ.

ತಂತ್ರಜ್ಞಾನವೆಂಬುದು ಇಂದಿನ ಜಗತ್ತಿನೆಲ್ಲೆಡೆ ಆದರಿಸಿ ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಪ್ರಭಾವ ಬೀರಿದೆ. ವ್ಯಾಪಾರ, ಶಿಕ್ಷಣ, ಆರೋಗ್ಯ, ಸರಕುಗಳ ಉತ್ಪಾದನೆ ಮುಂತಾದವು. ಹಾಗೆಯೇ ಭಾಷಾ ವಲಯದಲ್ಲೂ ಪ್ರವೇಶಿಸಿ ಭಾಷಾ ಪೈಪೋಟಿಗೂ ಕಾರಣವಾಯಿತು. ಭಾರತದಲ್ಲಿರುವಂತಹ ಪ್ರಾದೇಶಿಕ ಭಾಷೆಗಳಲ್ಲಿ ಒಂದಾದ ಕನ್ನಡವೂ ಕೂಡ ಜಾಗತೀಕರಣದೊಳಗೆ ತನ್ನ ನೆಲೆಯನ್ನು ಗುರುತಿಸಿಕೊಳ್ಳಲು ತಂತ್ರಜ್ಞಾನಕ್ಕೆ ಒಳಪಡುವುದು ಅವಶ್ಯವಾಗಿದೆ. ತಂತ್ರಜ್ಞಾನಕ್ಕೆ ದಕ್ಕುವ ಸ್ಥಾನಮಾನಗಳು ಭಾಷೆ ಮತ್ತು ಬದುಕನ್ನು ಪ್ರಭಾವಿಸುವ ನೆಲೆಗಳನ್ನು ನಿರ್ಧರಿಸುತ್ತವೆ ಎನ್ನುವಷ್ಟರ ಮಟ್ಟಿಗೆ 'ತಂತ್ರಜ್ಞಾನ'ವೆಂಬುದು ಪ್ರಭಾವಿಸಿದೆ.

## ೨.೨. ತಾಂತ್ರಿಕತೆ ಮತ್ತು ತಂತ್ರಜ್ಞಾನದ ಪ್ರಾಚೀನತೆ

ಭಾರತೀಯ ಸಂದರ್ಭದಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆ ಬೆಳೆದುಬಂದಿರುವ ಬಗೆಯನ್ನು ಡಾ. ರಾಧಾ ಕುಮುದು ಮುಖರ್ಜಿ ಕೆಲವು ಮುಖ್ಯವಾದ ಅಂಶಗಳ ಮೂಲಕ ಈ ರೀತಿ ವಿವರಿಸಿದ್ದಾರೆ. ಪ್ರಾಚೀನ ಭಾರತದಲ್ಲಿನ ತಂತ್ರಜ್ಞಾನದ ಬಗ್ಗೆ ಗ್ರಂಥಗಳು ಲಭ್ಯವಿಲ್ಲದಿದ್ದರೂ ಹರಪ್ಪ ಮೊಹೆಂಜೋದಾರೋಗಳಲ್ಲಿ ದೊರಕಿರುವ ಪುರಾತತ್ವ ದಾಖಲೆಯ ಮೇರೆಗೆ ವಿವರಿಸಿದ್ದಾರೆ.

ಹರಪ್ಪ ಮತ್ತು ಮೊಹೆಂಜೊದಾರೋ ನಗರಗಳಲ್ಲಿ ಆ ಕಾಲದಲ್ಲಿಯೇ ನಗರವನ್ನು ಅಚ್ಚುಕಟ್ಟಾಗಿ ನಿರ್ಮಿಸಿದ್ದಲ್ಲದೆ ಸಂರಕ್ಷಿಸಿದ್ದುದು ಪ್ರಮುಖವಾಗಿರುವಂತಹದ್ದು. ಆದರೆ ಆ ಕಾಲದ ನಗರೀಕರಣದ ಸಂದರ್ಭದ ಕುಶಲಕರ್ಮಿಗಳ ಬಗ್ಗೆ ಸ್ಪಷ್ಟ ಮಾಹಿತಿಯನ್ನೊದಗಿಸುವ ಯಾವ ಗ್ರಂಥವು ಇದುವರೆಗೂ ಲಭ್ಯವಾಗಿಲ್ಲ. ತಾಂತ್ರಿಕತೆಗೆ ಸಂಬಂಧಪಟ್ಟಂತೆ ಮತ್ತೊಂದು ಉದಾಹರಣೆಯೆಂದರೆ ಕ್ರಿ.ಪೂ. ೨೦೦೦ರ ಮೊಹಂಜೊದಾರೋ ಕಾಲದ ನಾಣ್ಯವೊಂದರಲ್ಲಿ ಹಡಗಿನ ಮುದ್ರೆ ಇರುವುದು ಕಂಡುಬರುತ್ತದೆ. ಇದನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ನೌಕಾಯಾನವು ಸರ್ವೇಸಾಮಾನ್ಯವಾಗಿದ್ದು ಸಮುದ್ರಯಾನಕ್ಕಾಗಿ ಹಡಗುಗಳನ್ನು ರಚಿಸುವ ತಂತ್ರಜ್ಞಾನವು ಹಿಂದಿನಿಂದಲೇ ಬೆಳೆದುಬಂದಿರುವುದು ಸ್ಪಷ್ಟವಾಗುತ್ತದೆ.

"ಸಿಂಧೂ ನಾಗರೀಕತೆಯ ಜನರು ಸಿಂಧೂ ನದಿಯ ಮಹಾಪೂರವನ್ನು ನಿಯಂತ್ರಿಸುವ ಸಲುವಾಗಿ ಕೈಗೊಳ್ಳಲಾದ ಕ್ರಮಗಳಲ್ಲಿ ಇಟ್ಟಿಗೆಗೆ ಸಂಬಂಧಿಸಿದ ತಾಂತ್ರಿಕ ಜ್ಞಾನ ಅತ್ಯಂತ ಮಹತ್ವದ ಪಾತ್ರವಹಿಸಿತ್ತೆಂದು ಆಲ್ಚಿನ್ ದಂಪತಿಗಳು ಅಭಿಪ್ರಾಯಪಟ್ಟಿದ್ದಾರೆ. ಇಟ್ಟಿಗೆ ಮಾಡುವುದು ಒಂದು ತಂತ್ರಜ್ಞಾನದ ಸೂಚನೆ ಅದನ್ನು ಸುಡುವುದು ಇನ್ನೊಂದು ಮಜಲು ಹೀಗೆ ಪ್ರಾಚೀನ ಭಾರತದಲ್ಲಿ ವಿಕಾಸವಾದದ ಉದ್ದಕ್ಕೂ ಇಟ್ಟಿಗೆಯನ್ನು ತಯಾರಿಸುವ ತಂತ್ರಜ್ಞಾನಕ್ಕೂ ಸಂಬಂಧವಿರುವುದನ್ನು ಕಾಣಬಹುದಾಗಿದೆ."[೪] ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ಅತಿ ಪ್ರಾಚೀನವಾದ ಕೃತಿಗಳು ಲಭ್ಯವಿಲ್ಲ. ಕಾರಣ ಬಹಳ ಹಿಂದೆ "ಕರ್ಮ ಅಥವಾ ಕ್ರಿಯೆಯು ಮತ್ತು ಕ್ರಿಯೆಯ ಹಿಂದಿನ ತಾಂತ್ರಿಕತೆಯ ಜ್ಞಾನದ ದಾಖಲೆ ಇವೆರಡೂ ಜೊತೆ ಜೊತೆಯಾಗಿ ಹೋಗುತ್ತಿರಲಿಲ್ಲ."[೫]

ವೇದ ವಾಙ್ಮಯಗಳಲ್ಲಿ, ಭಗವದ್ದೀತೆ, ಮಯಮಥ, ಸಮರಾಂಗಿಣ ಸೂತ್ರದಾರ, ಮಹಾಭಾರತ ಮುಂತಾದ ಪ್ರಾಚೀನ ಕೃತಿಗಳಲ್ಲಿ ವಸ್ತುಜ್ಞಾನ, ರಚನಾಜ್ಞಾನ ಮತ್ತು ಉಪಕರಣ ಜ್ಞಾನದ ಭಾಗವಾಗಿ ತಂತ್ರಜ್ಞಾನವನ್ನು ಭಾವಿಸಲಾಗಿದೆ. ಭಗವದ್ಗೀತೆಯಲ್ಲಿ

'ಜ್ಞಾನ ವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜತೇಂದ್ರಿಯಃ
ಯುಕ್ತ ಇತ್ಯುಚ್ಯತೆ ಯೋಗಿ ಸಮಲೋಪಾಶ್ಮಕಾಂಚನಃ'

ಎಂದು ಹೇಳಲಾಗಿದೆ. ಅಂದರೆ ಜ್ಞಾನ ವಿಜ್ಞಾನದಿಂದ ತೃಪ್ತಿ ಪಡೆದವನೂ ಧಾತು ಭೇದವಿಲ್ಲದೆ ಎಲ್ಲವನ್ನೂ ಸಮಾನವಾಗಿ ಹೇಳಲಾಗಿದೆ. ಭಗವದ್ಗೀತೆ ಮತ್ತು ಅಮರಕೋಶಗಳು ಶಿಲ್ಪಿಯನ್ನೇ ವಿಜ್ಞಾನ ಮತ್ತು ತಂತ್ರಜ್ಞಾನದ ಜನಕವೆಂದು ಹೇಳುತ್ತವೆ. ಅಂದರೆ ತಂತ್ರಜ್ಞಾನವೆಂದರೆ

ವಸ್ತುಭೇದ ಗುಣಭೇದಗಳ ಮೂಲಕ ಹುಟ್ಟಿದ್ದಲ್ಲ ಅದೊಂದು ಸಾಂಸ್ಕೃತಿಕ ನಿರ್ಮಿತಿ ಎನ್ನುವುದನ್ನು ಡಾ. ವೀರೇಶ ಬಡಿಗೇರ ಅವರು ತಮ್ಮ ಇತ್ತೀಚಿನ ಪುಸ್ತಕ (ಅಪ್ರಕಟಿತ) ಬಡಿಗ ವೃತ್ತಿ ಒಂದು ವೈಜ್ಞಾನಿಕ ಚಿಂತನೆ ಎನ್ನುವ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಪ್ರಾಚೀನ ಭಾರತದಲ್ಲಿ ತಂತ್ರಜ್ಞಾನ ಎನ್ನುವುದು ಏಕವ್ಯಕ್ತಿಯ ಸ್ವಾಮ್ಯ ಹೊಂದಿರಲಿಲ್ಲ ಅದು ಸಮಷ್ಠಿ ಪ್ರಜ್ಞೆಯ ಪ್ರಕ್ರಿಯಾತ್ಮಕ ಸ್ವರೂಪವನ್ನು ಹೊಂದಿತ್ತು ಎನ್ನುವುದು ಖಚಿತವಾಗುತ್ತದೆ.

ಒಂದು ಕಾಲದ ಮಾನವನ ಬದುಕಿನ ಸ್ಥಿತಿಗತಿಯನ್ನು ಅರಿಯಲು ಕುರುಹು ಅಥವಾ ಗುರುತುಗಳು ಪ್ರಾಥಮಿಕ ದಾಖಲೆಯಾಗಿರುತ್ತವೆ. ಆದರೆ ಸ್ಪಷ್ಟವಾದ ವಿಷಯ ಗ್ರಹಿಕೆಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಮಾನವ ಬದುಕಿನ ಇತಿಹಾಸ ತಿಳಿಯಲು ಒಂದು ನಿರ್ದಿಷ್ಟವಾದ ಭಾಷಾ ಬರಹದಿಂದ ಸಾಧ್ಯವಾಗುತ್ತದೆ. ಈ ಒಂದು ನಿರ್ದಿಷ್ಟವಾದ ಭಾಷೆಯ ಬರಹವೇ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಪ್ರಮುಖ ದಾಖಲೆಯ ಸಾಧನವಾಗಿರುತ್ತದೆ. ಹಾಗೂ ಪ್ರಮುಖವಾದ ದಾಖಲೆಯಾಗಿ ಸರ್ವಕಾಲಕ್ಕೂ ಮನುಷ್ಯ ಜೀವನದ ಕನ್ನಡಿಯಾಗಿರುತ್ತದೆ.

ಇತಿಹಾಸದಂತೆ ಮಾನವ ಬದುಕಿನ ಎಲ್ಲಾ ಅಂಶಗಳನ್ನು ತಿಳಿಸುವ ಮತ್ತೊಂದು ಅಂಶವೆಂದರೆ ಅದು ಸಾಹಿತ್ಯ. ಸಾಹಿತ್ಯ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಯಾಕೆಂದರೆ ಇವೆರಡು ಕೂಡ ಮನುಷ್ಯನ ಎಲ್ಲಾ ವಿಷಯಗಳನ್ನು ತಿಳಿಸುವಂತಹದ್ದು. ಇವೆರಡರ ಹುಟ್ಟು, ಬೆಳವಣಿಗೆ ಪ್ರಸಾರಕ್ಕೆ ಯಾವುದೇ ಒಂದು ಭಾಷೆಯ ಬರಹ ಮೂಲ ಕಾರಣವಾಗುತ್ತದೆ.

ಇದರಂತೆ ಜಗತ್ತಿನ ಭಾಷಾ ಪರಿವಾರದಲ್ಲಿ ಕನ್ನಡ ಭಾಷೆಯು ಒಂದಾಗಿದ್ದು ಐದು ಕೋಟಿಗೂ ಹೆಚ್ಚು ಮಾತನಾಡುವಂತಹ ಜನಸಂಖ್ಯೆಯನ್ನು ಹೊಂದಿದೆ. ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಕನ್ನಡಿಗರ ಬದುಕು ಸಂಸ್ಕೃತಿ, ಮೌಲ್ಯ, ಆದರ್ಶ ಮುಂತಾದ ಅಂಶಗಳನ್ನು ಜಗತ್ತಿಗೆ ಪ್ರಸರಿಸಿದೆ. ಇಂತಹ ಭಾಷೆಯು ಮೂರ್ತ ರೂಪಗೊಳ್ಳಲು ಆದ ತಾಂತ್ರಿಕ ಕಾರ್ಯದ ಅಧ್ಯಯನ ಬಹಳ ಮುಖ್ಯವಾದುದಾಗಿದೆ. ಈ ಅರ್ಥದಲ್ಲಿ ಸಾಹಿತ್ಯ ಮತ್ತು ತಂತ್ರಜ್ಞಾನವನ್ನು ಒಂದು ಚಲನಶೀಲ ಪ್ರವೃತ್ತಿಯಾಗಿ ಗ್ರಹಿಸುವ ಪ್ರಯತ್ನ ಮಾಡಿದ್ದೇನೆ.

**ಕೊನೆ ಟಿಪ್ಪಣಿಗಳು**

೧. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಪು. ೪೦೫, ೨೦೧೮

೨. ಡಾ.ಜಿ. ರಾಮಕೃಷ್ಣ, ಭಾರತೀಯ ವಿಜ್ಞಾನದ ಹಾದಿ, ಪು. ೬೧, ೨೦೧೫

೩. ಪ್ರೊ. ಬರಗೂರು ರಾಮಚಂದ್ರಪ್ಪ, ಕನ್ನಡ ಪ್ರಜ್ಞೆ, ಪು. ೭೦, ೨೦೦೭

೪. ಡಾ.ಜಿ. ರಾಮಕೃಷ್ಣ, ಭಾರತೀಯ ವಿಜ್ಞಾನದ ಹಾದಿ, ಪು. ೭೧, ೨೦೧೫

೫. ಅದೇ, ಪು. ೭೨

# ಅಧ್ಯಾಯ: ಮೂರು

# ಕನ್ನಡ ಸಾಹಿತ್ಯದ ಬೆಳವಣಿಗೆ: ಆಧುನಿಕ ಪೂರ್ವ ತಾಂತ್ರಿಕ ಸ್ವರೂಪಗಳು

೩.೧. ಲಿಪಿ ಮತ್ತು ಬರಹ: ಸಾಂಪ್ರದಾಯಿಕ ಗ್ರಹಿಕೆಗಳು

೩.೨. ಲಿಪಿ ಮತ್ತು ಬರಹ: ಪ್ರಗತಿಪರ ನಿಲುವುಗಳು

೩.೩. ಬರಹ ತಂತ್ರಜ್ಞಾನ ಮತ್ತು ಬಹುಮಾಧ್ಯಮಗಳು

೩.೪. ಸಾಹಿತ್ಯ ಕೃತಿಗಳ ರಚನೆ ಮತ್ತು ಸಂರಕ್ಷಣೆ: ಶ್ರಮ ಸಮುದಾಯಗಳು ವಿವೇಕ

೩.೫. ಕಡತ ಮತ್ತು ಕಾಗದ

೩.೬. ಕಾಗದ ಮತ್ತು ಕನ್ನಡ ಗದ್ಯದ ಬೆಳವಣಿಗೆ

# ಅಧ್ಯಾಯ: ಮೂರು

# ಕನ್ನಡ ಸಾಹಿತ್ಯದ ಬೆಳವಣಿಗೆ: ಆಧುನಿಕಪೂರ್ವ ತಾಂತ್ರಿಕ ಸ್ವರೂಪಗಳು

## ೩.೧. ಲಿಪಿ ಮತ್ತು ಬರಹ: ಸಾಂಪ್ರದಾಯಿಕ ಗ್ರಹಿಕೆಗಳು

**ಬರಹದ ರೂಪ**

ಆಂಗ್ಲ ನಾಟಕಕಾರ ಬ್ರೆಕ್ಟ್ ಬರಹ ಕುರಿತು ಈ ರೀತಿ ಹೇಳುತ್ತಾರೆ.

"ಈ ಕತ್ತಲೆಯ ಕಾಲದಲ್ಲೂ
ಕಾವ್ಯ ಬರೆಯಬಹುದೇ
ಬರೆಯಬಹುದಲ್ಲ
ಕತ್ತಲೆಯನ್ನೇ ಕುರಿತು"[೧]

ಈ ಒಂದು ಕವನದ ಧ್ವನಿಯೇ ಬರಹದ ಶಕ್ತಿಯನ್ನು ಹೇಳುತ್ತದೆ. ಬರಹವೆಂಬುದು ಕೇವಲ ಬೆಳಕಿನ ವ್ಯವಹಾರವಲ್ಲ ಅದು ಕತ್ತಲೆಯನ್ನು ಕುರಿತು ಲಿಪಿಯ ಮೂಲಕ ತಿಳಿಸುತ್ತದೆ. ಬರಹವು ಒಂದು ಭಾಷೆಯ ಉಳಿವಿಗೆ ಮತ್ತು ಬೆಳವಣಿಗೆಗೆ ಪ್ರಮುಖ ಪಾತ್ರ ವಹಿಸುತ್ತದೆ.

**ಬರಹದ ಅರ್ಥ ಮತ್ತು ವ್ಯಾಖ್ಯಾನ**

ಭಾಷೆಯ ಮೂರ್ತರೂಪವೇ ಬರಹ. "ಒಂದು ವಿಷಯ ಅಥವಾ ಆಲೋಚನೆಯನ್ನು ಕೈಯಿಂದ ಚಿಹ್ನೆಗಳ ಮೂಲಕ, ಚಿತ್ರಗಳ ಮೂಲಕ ಅಥವಾ ವರ್ಣವಿನ್ಯಾಸಗಳ ಮೂಲಕ ಪ್ರಕಟಪಡಿಸುವುದೇ ಬರಹ."[೨] ಒಂದು ವಿಷಯವನ್ನು ಅಥವಾ ಆಲೋಚನೆಯನ್ನು ಮನಸ್ಸಿನಲ್ಲಿ ಸಂಘಟಿಸಿ ಅದಕ್ಕನುಗುಣವಾದ ಲಿಪಿಯನ್ನು ಕ್ರಮಬದ್ಧವಾಗಿ ಬರೆಯುವುದೇ ಬರಹ. ಬರಹವು ರೇಖಾವಿನ್ಯಾಸಗಳ ಕೌಶಲವಾಗಿದ್ದು, ಅಕ್ಷರಗಳ ರೇಖಾ ವಿನ್ಯಾಸವು ಅರ್ಥವತ್ತಾಗಿ ಜೋಡಿಸಲ್ಪಟ್ಟಿರುತ್ತದೆ.

"ಅಮೇರಿಕಾದ ಭಾಷಾಶಾಸ್ತ್ರಜ್ಞ ಲಿಯೋನಾರ್ಡೋ ಬ್ಲೂಮ್‌ಫೀಲ್ಡ್ ಅವರು ಮಾತನ್ನು ಸಂಕೇತಗಳ ಮೂಲಕ ದಾಖಲಿಸುವ ಸಾಧನವಷ್ಟೇ ಎಂದು ಬರಹವನ್ನು ಕುರಿತು ಈ ರೀತಿ

ಹೇಳಿದ್ದಾನೆ."[3] ಒಮ್ಮೆ ಬರಹ ಸಾಧ್ಯವಾದ ಮೇಲೆ ಆಡುರೂಪದಲ್ಲಿ ಇರುವ ಹಾಡುಗಬ್ಬಗಳನ್ನು, ಕಥೆ ಕವನಗಳನ್ನು, ದಾಖಲಿಸಿ ಶಾಶ್ವತವಾಗಿ ಸಂಗ್ರಹಿಸುವುದಲ್ಲದೆ ಶಾಸ್ತ್ರಗ್ರಂಥಗಳ ಸಾಹಿತ್ಯದ ಮಾಧ್ಯಮವಾಗಿರುತ್ತದೆ. ಬರಹ ಭೌಗೋಳಿಕ ಪ್ರದೇಶಕ್ಕೆ ಬದ್ಧವಾದುದು, ಸ್ಥಿರ ಮತ್ತು ಶಾಶ್ವತವಾದುದು. ಇದರಿಂದ ಸಾಹಿತ್ಯವು ಸಂಪನ್ನಗೊಳ್ಳುವುದಲ್ಲದೆ ಬೆಳವಣಿಗೆಯೂ ಸಾಧ್ಯವಾಗುತ್ತದೆ.

"ಬರಹ ಮಾತನಾಡುವಿಕೆಯಂತೆ ಉತ್ಪಾದಕ ಕೌಶಲ, ಮಾತನಾಡುವ ಕ್ರಿಯೆಗೆ ಹೇಗೆ ಪೂರ್ವಾಲೋಚನೆ, ಮಾನಸಿಕ ಸಿದ್ಧತೆಯ ಅಗತ್ಯತೆ ಮುಖ್ಯವೋ ಹಾಗೆಯೇ ಬರಹಕ್ಕೂ ಕೂಡ ಪೂರ್ವಾಲೋಚನೆ ಮಾನಸಿಕ ಸಿದ್ಧತೆ ಹಾಗೂ ಉತ್ತಮ ಕೌಶಲ್ಯವು ಅತ್ಯಗತ್ಯವಾಗಿದೆ."[೪] ಮಾತನಾಡುವಿಕೆಯಲ್ಲಿ ಆಲೋಚನೆಗಳನ್ನು ಧ್ವನಿಯ ಮೂಲಕ ಅಭಿವ್ಯಕ್ತಿಸುತ್ತೇವೆ. ಆದರೆ ಬರಹದಲ್ಲಿ ಲಿಪಿ ಸಂಕೇತಗಳ ಮೂಲಕ ವ್ಯಕ್ತಪಡಿಸುತ್ತೇವೆ. ಈ ಲಿಪಿ ಸಂಕೇತಗಳ ಮೂಲಕ ವ್ಯಕ್ತಪಡಿಸುವ ಕ್ರಿಯೆಯು ವರ್ತಮಾನದ ವಿಚಾರಗಳನ್ನು ಭವಿಷ್ಯತ್ತಿಗೆ ಕೊಂಡೊಯ್ದು ಭವಿಷ್ಯತ್ತಿನಲ್ಲಿ ಮತ್ತೆ ಅದೇ ವಿಚಾರಗಳನ್ನು ಭೂತಕ್ಕೆ ತಳ್ಳಿ ಅವುಗಳಿಗೆ ಇತಿಹಾಸವೆಂಬ ಅನ್ವರ್ಥವನ್ನು ಕೊಡು(ತ್ತವೆ)ವ ಶಕ್ತಿ ಬರಹಕ್ಕೆ ಇದೆ. ಈ ಬರವಣಿಗೆಯ ಸೃಷ್ಟಿಯೇ ತಾಂತ್ರಿಕವಾದುದಾಗಿದೆ. ಮೌಖಿಕವಾದ ವಿಷಯಗಳನ್ನು ಮುಂದಿನ ಪೀಳಿಗೆಗೆ ಲಿಪಿ ಸಂಕೇತಗಳ ಮೂಲಕ ಅರಿವನ್ನು ಮೂಡಿಸುವ ಈ ಬರಹದ ಶಕ್ತಿ ವರ್ಣನೆಗೆ ನಿಲುಕದ್ದು.

ಕನ್ನಡ ಬರಹದ ಚರಿತ್ರೆಯನ್ನು ಅವಲೋಕಿಸಿದಾಗ ಒಂದು ನಿರ್ದಿಷ್ಟವಾದ ಕಾಲಮಾನವನ್ನು ಗುರುತಿಸುವುದು ಕಷ್ಟಸಾಧ್ಯವಾಗುತ್ತದೆ. ಭಾರತದಲ್ಲಿ ಬರವಣಿಗೆಯು ಆರಂಭವಾಗುವುದು ಅಶೋಕನ ಕಾಲದಿಂದ. ಇದಕ್ಕೂ ಪೂರ್ವದಲ್ಲಿ ನಾಗರೀಕತೆಗಳಲ್ಲಿ ಕಂಡುಬರುವ ಗುರುತು ಚಿಹ್ನೆಗಳು ಬರಹದ ಪ್ರಾರಂಭಿಕತೆಯನ್ನು ಹೇಳುತ್ತವೆ.

ಮೊದಲು ಬರಹ, ಚಿತ್ರಲಿಪಿ, ವರ್ಣಲಿಪಿ, ಅಕ್ಷರಲಿಪಿಯಿಂದ ಆರಂಭಗೊಂಡಿತು. ಮಾನವನು ತನ್ನದೇ ಆದ ನಿರ್ದಿಷ್ಟವಾದ ಭಾಷೆಯನ್ನು ಕಂಡುಕೊಂಡು ಆ ಭಾಷೆಯಲ್ಲಿ ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಭಾಷೆಗೊಂದು ಲಿಪಿಯನ್ನು ಕಂಡುಕೊಂಡನು. ಲಿಪಿಯನ್ನು ಕಂಡುಕೊಂಡ ಕಾರ್ಯವೇ ಒಂದು ಶ್ರೇಷ್ಠವಾದ ತಾಂತ್ರಿಕ ಆವಿಷ್ಕಾರವಾಗಿದೆ. ಮನುಷ್ಯ ತನ್ನಲ್ಲಿರುವ ಆಂತರಿಕವಾದ ಭಾವನೆಗಳಾದ ಸಂತೋಷ, ದುಃಖ, ಆಶ್ಚರ್ಯ ಮುಂತಾದವುಗಳೆಲ್ಲವುಗಳಿಗೂ ಹಾಗೂ ತನ್ನ ದೇಹದ ಧ್ವನಿಪಟಲದಿಂದ ಉಂಟಾಗುವ ಶಬ್ದಗಳಿಗೆ ಸ್ವರ ಸಂಕೇತವನ್ನು ಕೊಟ್ಟು ಅದನ್ನು ದಿನೇ ದಿನೇ ಬಳಕೆಗೆ ತಂದಿದ್ದು ಒಂದು ಉತ್ತಮವಾದ ಪ್ರಾಯೋಗಿಕ ಕ್ರಿಯೆಯಾಗಿದೆ. ದಿನೇ ದಿನೇ ಪ್ರಯೋಗ ಮಾಡುತ್ತಾ ಬಂದ ಲಿಪಿ ಸಂಕೇತಗಳನ್ನು ನಾಗರೀಕನಾದ ನಂತರ ದಿನನಿತ್ಯದ ಬದುಕಿನ ಚಟುವಟಿಕೆಗಳು ಹೆಚ್ಚಾದಂತೆ ಅವುಗಳಿಗೆ ವೈಜ್ಞಾನಿಕವಾಗಿ ಲಿಪಿ ಸಂಕೇತ ನೀಡುತ್ತಾ ಭಾಷೆಯಲ್ಲಿ ಪದಗಳ ನಿರ್ಮಾಣ ಮಾಡಿದ್ದಾನೆ.

### ೩.೨. ಲಿಪಿ ಮತ್ತು ಬರಹ: ಪ್ರಗತಿಪರ ನಿಲುವುಗಳು

ಭಾರತದಲ್ಲಿ ಬರವಣಿಗೆಯು ಐತಿಹಾಸಿಕವಾಗಿ ದಾಖಲೆ ರೂಪದಲ್ಲಿ ಕಾಣುವುದು. ಅಶೋಕನ ಕಾಲದಲ್ಲಿ. ಅದಕ್ಕಿಂತ ಹಿಂದೆ ನೋಡಿದಾಗ ಸಿಂಧೂ ನಾಗರೀಕತೆಯಲ್ಲಿನ ಲಿಪಿಗಳ ಮೂಲಕ ಬರವಣಿಗೆ ಇತ್ತು ಎಂದು ತಿಳಿಯಲಾಗಿದೆ. ಆದರೆ ಸಿಂಧೂ ನಾಗರೀಕತೆಯ ಲಿಪಿಗಳನ್ನು ಇನ್ನು ಸ್ಪಷ್ಟವಾಗಿ ಓದಲು ಸಾಧ್ಯವಾಗಿಲ್ಲ. ಮೌರ್ಯರಿಗಿಂತ ಪೂರ್ವದ ನಾಣ್ಯಗಳ ಮುದ್ರೆಗಳಲ್ಲಿನ ಚಿಹ್ನೆಗಳ ಬಗ್ಗೆ ವ್ಯಾಪಕ ಅಧ್ಯಯನ ನಡೆದಿಲ್ಲ. ಹಾಗಾಗಿ ಬರವಣಿಗೆಯ ಇತಿಹಾಸ ಸ್ಪಷ್ಟತೆಯ ವಿಚಾರವು ಇನ್ನೂ ಕಗ್ಗಂಟಾಗಿಯೇ ಉಳಿದಿದೆ.

ಬರವಣಿಗೆಯ ವಿಚಾರವನ್ನು ಪೌರಾಣಿಕ ಹಿನ್ನೆಲೆಯಲ್ಲಿ ನೋಡುವುದಾದರೆ ಮಹಾಭಾರತದಲ್ಲಿ ವ್ಯಾಸನು ಹೇಳಿದ ಕಾವ್ಯವನ್ನು ಗಣಪತಿಯು ಲಿಪಿಕಾರನಾಗಿ ಬರೆದನಂತೆ ಎಂದು ತಿಳಿಯಲಾಗಿದೆ. ಬೌದ್ಧ ಗ್ರಂಥಗಳಲ್ಲಿ ಸ್ವಂತ ಮತ್ತು ಆಡಳಿತ ಪತ್ರಗಳು, ರಾಜನ ಆಜ್ಞೆಗಳು, ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳು, ಹಸ್ತಪ್ರತಿಗಳು ಮುಂತಾದವುಗಳ ಉಲ್ಲೇಖವಿದೆ. ಹಾಗೂ ಫಲಕ ಮತ್ತು ವರ್ಣಕದ (ಮರದ ಲೇಖನಿ) ಉಲ್ಲೇಖವಿದೆ. ಬುದ್ಧನು ಚಿಕ್ಕಂದಿನಲ್ಲಿ ಗ್ರಂಥದ ಹಲಗೆ ಮೇಲೆ ಬರೆಯುತ್ತಿದ್ದ ಎಂಬ ಉಲ್ಲೇಖವಿದೆ.

ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಲಿಪಿ, ಲಿಬಿ, ಲಿಪಿಕಾರ, ಯವನಾನಿ, ಗ್ರಂಥ, ಸ್ವರಿತ ಎಂಬ ಬರವಣಿಗೆಯ ಚಹರೆಗಳನ್ನು ಉಲ್ಲೇಖಿಸಲಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಲೇಖನಕ್ಕೆ ಸಂಬಂಧಿಸಿದ ಮಾಹಿತಿಯು ದೊರೆಯುತ್ತದೆ. ಈ ಗ್ರಂಥಗಳಲ್ಲದೆ ಲೇಖನ ಅಥವಾ ಬರವಣಿಗೆಗೆ ಸಂಬಂಧಪಟ್ಟಂತೆ ಇನ್ನು ಉತ್ತಮವಾದ ಮಾಹಿತಿಯು ಬೌದ್ಧ ಧರ್ಮ ಗ್ರಂಥಗಳಲ್ಲಿ ನಮಗೆ ದೊರೆಯುತ್ತವೆ. ಬೌದ್ಧ ಧರ್ಮದ ಗ್ರಂಥಗಳಾದ 'ತ್ರಿಪಿಟಕ'ಗಳಲ್ಲಿ ಲೇಖನ ಮತ್ತು ಲೇಖಕ ಎಂಬ ಪದಗಳು ಪದೇ ಪದೇ ಉಪಯೋಗಿಸಲ್ಪಡುತ್ತವೆ.

"ಮೌರ್ಯ ಸಾಮ್ರಾಜ್ಯದ ಕುಸಿತದ ನಂತರ ಹರಿದು ಹಂಚಿಹೋದ ಭಾರತದಲ್ಲಿ ಮುಂದೆ ಸುಮಾರು ೧೦೦ ವರ್ಷಗಳ ನಂತರ ತಲೆಯೆತ್ತಿದ ಸಣ್ಣಪುಟ್ಟ ರಾಜ್ಯಗಳ ರಾಜರು ಹಾಗೂ ಹೊರಗಿನಿಂದ ಬಂದು ಇಲ್ಲಿ ನೆಲೆಸಿದ ಆಕ್ರಮಣಕಾರರು ಮುಂದೆ ಅಶೋಕನು ಬಳಸಿದ ಲಿಪಿಯನ್ನೇ ಬಳಸತೊಡಗಿದರು. ಇಲ್ಲಿಂದ ಮುಂದೆ ರಾಜರಲ್ಲದೆ ಸಾರ್ವಜನಿಕರು ಈ ಲಿಪಿಯನ್ನು ಬಳಸತೊಡಗಿದರು. ಭಾರತದಲ್ಲಿ ಲಿಪಿಗಳು ಬಳಕೆಗೆ ಬಂದವು. ಭಾರತದಲ್ಲಿ ಲಿಪಿಗಳು ಸಾರ್ವತ್ರಿಕ ಬಳಕೆಗೆ ಉಪಯೋಗವಾಗತೊಡಗಿದ ಮೇಲೆ ಬರವಣಿಗೆಯ ಸಾಧನಗಳ ಕಾರಣದಿಂದ ಭಿನ್ನತೆ ಕಾಣತೊಡಗಿತು. ಬಂಡೆಗಳ ಮೇಲೆ ಬರೆಯಬೇಕಿದ್ದರೆ ಕುಂಚ ಮತ್ತು ಬಣ್ಣವನ್ನು ಉಪಯೋಗಿಸಿ ಬರೆದ ಮೆಲೆ ಉಳಿ ಮತ್ತು ಸುತ್ತಿಗೆಯ ಸಹಾಯದಿಂದ ಕೆತ್ತುತ್ತಿದ್ದರು."[೫]

ಅಶೋಕನು ತನ್ನ ನಾಡಿನಲ್ಲಿ ಧರ್ಮಲಿಪಿಗಳನ್ನು ಬರೆಸಲು ಪಾಟಲೀಪುತ್ರದಿಂದಲೇ ಲಿಪಿಕಾರರನ್ನು ಕಳುಹಿಸಿದ್ದ. ಆದರೆ ಈ ಕಾಲಕ್ಕೆ ಸ್ಥಳೀಯರು ಈ ಲಿಪಿಯನ್ನು ಕಲಿತಿದ್ದುದರಿಂದ

ಆ ಲಿಪಿಕಾರರೇ ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತಿದ್ದರು. ಮೊದಲು ಶಿಲೆಯೊಂದೆ ಮಾಧ್ಯಮವಾಗಿತ್ತು. ಕಾಲಕಳೆದಂತೆ ಲೋಹ, ಮರ, ಬಟ್ಟೆ, ಮಣ್ಣು, ತಾಳೆಗರಿಗಳು (ಈ) ಶಾಸನಗಳ ಬರವಣಿಗೆಯ ಮಾಧ್ಯಮಗಳಾದವು. ಲೋಹದಲ್ಲಿ ಹೆಚ್ಚಾಗಿ ತಾಮ್ರ ಬಳಕೆಯಾಗಿದೆ. ಆರಂಭದಲ್ಲಿ ಉತ್ತರದಲ್ಲಿ ಭೂರ್ಜ ಪತ್ರಗಳು ಬರವಣಿಗೆಗೆ ಬಳಕೆಯಾದರೆ ದಕ್ಷಿಣದಲ್ಲಿ ತಾಳೆಗರಿ ಬಳಕೆಯಾಯಿತು. ಇವುಗಳ ಮೇಲೆ ಅಕ್ಷರಗಳನ್ನು ಬರೆದು ಅದಕ್ಕೆ ರಾಜಮುದ್ರೆಯನ್ನು ಒತ್ತುತ್ತಿದ್ದರು. ಒಂದು ಪಟದಿಂದ ಅನೇಕ ಪಟಗಳವರೆಗೆ ಈ ತಾಮ್ರ ಶಾಸನಗಳು ಇದ್ದು ಶಾಸನದ ಪಾಠದ ಉದ್ದದ ಮೇಲೆ ಈ ಪಟಗಳ ಸಂಖ್ಯೆ ಹೆಚ್ಚು ಕಡಿಮೆಯಾಗುತ್ತಿತ್ತು. ಹೆಚ್ಚು ಪಟಗಳಿದ್ದಾಗ ಇವುಗಳನ್ನು ಉಂಗುರದಲ್ಲಿ ಸೇರಿಸಿ ರಾಜಮುದ್ರೆಯೊಂದಿಗೆ ಬಂಧಿಸುತ್ತಿದ್ದರು. ಬರವಣಿಗೆಗೆ ಚಿನ್ನ ಬೆಳ್ಳಿಯನ್ನು ಬಳಸಿದ್ದರೂ ಅವುಗಳು ದೊರೆತಿರುವ ಸಂಖ್ಯೆ ಕಡಿಮೆ.

ಮರದ ಬಳಕೆ ನಮ್ಮಲ್ಲಿ ಹೆಚ್ಚಾಗಿದ್ದರೂ ಶಾಸನಗಳನ್ನು ಅಥವಾ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಇಂತಹ ಯಾವುದೇ ಲೇಖನಗಳು ದೊರೆತಿರುವುದು ಕಡಿಮೆ. ಇದಕ್ಕೆ ಭಾರತದಲ್ಲಿರುವ ಹವಾಮಾನ ವೈಪರೀತ್ಯವೇ ಕಾರಣವಾಗಿದೆ.

ಬರವಣಿಗೆಗೆ ಪ್ರಾರಂಭದಲ್ಲಿಯೇ ಬರಹಗಾರರು ತಮ್ಮದೇ ಆದ ಕೌಶಲ್ಯ ಬಳಸಿದರು. ಮಾನವ ನಾಗರೀಕನಾದಂತೆಲ್ಲ ಹಂತಹಂತವಾಗಿ ಬರಹಕ್ಕೆ ತನ್ನದೇ ವಿಧಾನಗಳನ್ನು ಅನುಸರಿಸುತ್ತಾ ಮಾರ್ಪಾಟುಗಳನ್ನು ಮಾಡಿಕೊಳ್ಳುತ್ತಾ ಬಂದಿದ್ದಾನೆ. ಬರಹಕ್ಕೆ ಹೇಗೆ ಒಂದು ನಿರ್ದಿಷ್ಟವಾದ ಪರಿಕರ ನಿರ್ದಿಷ್ಟವಾದ ವಿಧಾನ ಬಳಸಿದನೋ ಅದನ್ನೇ ಬರಹ ಸಂರಕ್ಷಣೆಯಲ್ಲಿಯೂ ಮಾಡಿದ. ಬರಹವನ್ನು ಎಲ್ಲೆಂದರಲ್ಲಿ ಬರೆಯಲಿಲ್ಲ. ನಿರ್ಜನ ಪ್ರದೇಶದಲ್ಲಿ ಒಂದೆಡೆ ಗಟ್ಟಿಯಾದ ಬಂಡೆಗಳ ಮೇಲೆ ಬರೆದರೆ, ಮತ್ತೊಂದೆಡೆ ತೆಳುವಾದ ವಸ್ತುಗಳ ಮೇಲೆ ಬರೆದು ಅವುಗಳನ್ನು ಯಾರಿಗೂ ಕಾಣದೆ ಮುಚ್ಚಿಡುತ್ತಿದ್ದು ಅವುಗಳನ್ನು ಗಾಳಿ, ನೀರು, ಬೆಂಕಿ ಇವುಗಳಿಂದ ದೂರವಿಟ್ಟು ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸಿದರು. ಬರಹದ ಸೃಷ್ಟಿ ಬೆಳವಣಿಗೆ ಹಾಗೂ ಸಂರಕ್ಷಣೆಯಲ್ಲೂ ಸಾಂಪ್ರದಾಯಿಕ ಕುಶಲಕರ್ಮಿಗಳು ಕಂಡುಕೊಂಡಿದ್ದ ಅಂದಿನ ತಾಂತ್ರಿಕ ವಿಧಾನ ಇಂದಿನ ತಂತ್ರಜ್ಞಾನಕ್ಕೆ ಬುನಾದಿಯಾಗಿದೆ.

### ಬರಹ ಮತ್ತು ಭಾರತೀಯ ಸಂದರ್ಭ

ಜನಪದ ಸಾಹಿತ್ಯ ಬಹಳ ವಿಪುಲವಾಗಿ ಬೆಳೆದಿರುವುದಂತು ಸತ್ಯ, ಅದೇ ರೀತಿಯಾಗಿ ಒಂದು ಭಾಷೆಯ ನಿಖರ ದಾಖಲೆಯಾಗಿ ಬರಹ ರೂಪದಲ್ಲಿನ ಸಾಹಿತ್ಯವು ಮುಖ್ಯವಾಗುತ್ತದೆ. ಯಾವುದೇ ಒಂದು ಭಾಷೆಯು ನಿರ್ದಿಷ್ಟವಾದ ಚಾರಿತ್ರಿಕ ಬೆಳವಣಿಗೆಯ ಅಂಶಗಳು ಪರಿಗಣಿಸಲ್ಪಡುವುದು ಆ ಭಾಷೆಯ ಲಿಪಿ ಸ್ವರೂಪದ ದಾಖಲೆಗಳಿಂದ. ಅದೇ ರೀತಿಯಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಯನ್ನು ಬರಹದ ದಾಖಲೆಯಿಂದ ನೋಡಬೇಕಾದುದು ಮುಖ್ಯವಾಗುತ್ತದೆ.

ಕನ್ನಡ ಬರಹದ ಮೂಲಕ ಸಾಹಿತ್ಯವು ಉಗಮ ಮತ್ತು ಬೆಳವಣಿಗೆ ಹಾಗೂ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ವಿಶ್ಲೇಷಣೆ ಮಾಡುವುದಕ್ಕೂ ಮುನ್ನ ಭಾರತೀಯ ಸಂದರ್ಭದ ಬರಹದ ಕುರಿತು ಕೆಲವೊಂದು ವಿಚಾರಗಳನ್ನು ವಿಶ್ಲೇಷಣೆ ಮಾಡಬೇಕಾಗಿದೆ. "ಭಾರತೀಯ ಜ್ಞಾನಪರಂಪರೆಯಲ್ಲಿ ಮೌಖಿಕ ಹಾಗೂ ಲಿಖಿತ ಎಂದು ಗುರುತಿಸಲಾಗಿದೆ. ಕಿವಿಗೆ ತಾಗುವ ಕಣ್ಣಿಗೆ ಕಾಣುವ ಮನಸ್ಸಿಗೆ ಮುಟ್ಟುವ ಅನುಭವ ಜ್ಞಾನ ಭಾರತೀಯರದು ಭಾರತೀಯರಲ್ಲಿ ಪುಸ್ತಕಕ್ಕಿಂತ ವ್ಯಕ್ತಿ ಅನುಭವಕ್ಕೆ ಮೊದಲ ಆದ್ಯತೆ ಇತ್ತು. ಬರಹಕ್ಕಿಂತ ಮಾತು ಹಾಗೂ ನೇರ ನಿರೂಪಣೆ ಪರಿಣಾಮಕಾರಿಯಾಗಿತ್ತು."[೬] ಆದರೆ ಆರ್ಯರು ಸೃಷ್ಟಿಮಾಡಿದ ಸಾಮಾಜಿಕ ಏಣಿ-ಶ್ರೇಣಿ ವ್ಯವಸ್ಥೆಯಲ್ಲಿ ಅಕ್ಷರ ಜ್ಞಾನ ಹೊಂದುವ ಅವಕಾಶ ಕೇವಲ ವೈದಿಕರಿಗೆ ಮಾತ್ರ ದೊರೆಯುವಂತಾಯಿತು. ಇದರಿಂದ ಉಳಿದ ಬಹುಪಾಲು ಮಂದಿಗೆ ಅಕ್ಷರ ಜ್ಞಾನ ಪಡೆಯುವ ಅವಕಾಶ ಇಲ್ಲವಾಯಿತು. ಮನುವಿನ ವರ್ಣಾಶ್ರಮ ಪದ್ಧತಿಯಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ರಚನೆಗೊಂಡು ವರ್ಣಾಶ್ರಮ ವ್ಯವಸ್ಥೆ ಭದ್ರವಾಗಿ ಅಖಂಡ ಭಾರತದಲ್ಲಿ ನೆಲೆಯೂರಿತು. ಈ ನಾಲ್ಕು ವರ್ಗಗಳಲ್ಲಿ ಅತ್ಯಂತ ಶೋಷಣೆಯ ಸ್ಥಿತಿ ಶೂದ್ರವರ್ಗದವರಾಗಿತ್ತು. ಸಮಾಜದಲ್ಲಿ ಯಾವುದೇ ಸ್ಥಾನಮಾನವಿಲ್ಲದೆ ಗುಲಾಮರಂತೆ ಬದುಕಬೇಕಾಯಿತು. ಇನ್ನುಳಿದ ಮೂರು ವರ್ಗಗಳ ಸೇವೆಯನ್ನು ಮಾಡುವುದೇ ಇವರ ಕಾರ್ಯವಾಗಿತ್ತು. ಇವರು ಅಕ್ಷರ ಜ್ಞಾನ ಕಲಿಯುವ ಹಾಗೂ ಇತರ ಯಾವುದೇ ಉನ್ನತವಾದ ಸ್ಥಾನಮಾನ ಪಡೆಯುವ ಹಾಗೆಯೂ ಇರಲಿಲ್ಲ. ಇವರ ಬದುಕು ಅತ್ಯಂತ ಶೋಚನೀಯವಾಗಿತ್ತು. ಶೂದ್ರವರ್ಗದವರನ್ನು ಕುರಿತು "ಯಾಜ್ಞವಲ್ಕನು ಕೆಳಜಾತಿ ಕೆಳವರ್ಗಗಳು ಉನ್ನತ ಜ್ಞಾನ ಮತ್ತು ತಂತ್ರಜ್ಞಾನಕ್ಕೆ ಯೋಗ್ಯರಲ್ಲ ಅದು ಬ್ರಾಹ್ಮಣರಿಗೆ ಮಾತ್ರ ಎಂದು ಹೇಳುತ್ತಾನೆ."[೭] ದಿನ ಕಳೆದಂತೆ ಶೂದ್ರವರ್ಗಗಳಲ್ಲಿ ಹಲವಾರು ಕಸುಬುದಾರಿಕೆಯ ವರ್ಗಗಳು ಹುಟ್ಟಿಕೊಂಡವು. ಕಸುಬುದಾರಿಕೆಯು ಕಲೆಯೋಪಾದಿಯಲ್ಲಿ ಬೆಳೆಯುತ್ತಾ ಸಾಗಿತು. ಈ ಕಸುಬುದಾರಿಕೆಯಿಂದ ಸಮಾಜದಲ್ಲಿನ ಜನರ ಅಗತ್ಯತೆಗಳ ಪೂರೈಸಲು ಅನುಕೂಲವಾಯಿತು. ಈ ಅಗತ್ಯತೆಯಲ್ಲಿ ಜನರ ಸಾಂಸ್ಕೃತಿಕ ಅಗತ್ಯತೆಯು ಒಂದು. ಸಾಂಸ್ಕೃತಿಕ ಅಗತ್ಯತೆಯ ಅಂಶಗಳಲ್ಲಿ ಕಲಾ ಸಂಬಂಧಿ ಚಟುವಟಿಕೆಗಳು ಹಾಗೂ ಲಿಪೀಕರಣ ಕ್ರಿಯೆಗಳು ಪ್ರಮುಖವಾಗಿದ್ದವು. ಈ ಲಿಪಿಕರಣ ಕ್ರಿಯೆಯು ಮೊದಲು ಧಾರ್ಮಿಕ ವಿಷಯಗಳ ಕುರಿತಾದ ಕೆತ್ತನೆಯ ಕಾರ್ಯದಿಂದ ಪ್ರಾರಂಭಗೊಂಡು ಬರಹದ ಕೆತ್ತನೆಯವರೆಗೂ ಮುಂದುವರೆಯಿತು. ಕಲಾತ್ಮಕ ಕ್ರಿಯೆಗಳಿಂದ ಆರಂಭಗೊಂಡ ಕೌಶಲ್ಯಪೂರಿತ ಕಸುಬುದಾರಿಕೆಯ ಕಾರ್ಯ 'ಬರವಣಿಗೆ'ಯವರೆಗೂ ಸಾಗಿರುವುದರಿಂದ ಕಲೆ ಹಾಗೂ ಬರವಣಿಗೆಗೆ ಅಪರೂಪದ ನಂಟಿದೆ ಎಂದು ತಿಳಿಯಬಹುದಾಗಿದೆ.

ಸಮಾಜದಲ್ಲಿ ಉನ್ನತ ಸ್ಥಾನಮಾನ ಹಾಗೂ ಅಧಿಕಾರ ಹೊಂದಿದ್ದ ವೈದಿಕರು ಜ್ಞಾನಸಂಬಂಧಿ ಚಟುವಟಿಕೆಗಳ ಬಗ್ಗೆ ಪೂರ್ಣ ಹತೋಟಿಯಲ್ಲಿಟ್ಟುಕೊಂಡಿದ್ದು ಎಲ್ಲಾ ವಿಚಾರಗಳನ್ನು ಧರ್ಮದ ಹಿನ್ನೆಲೆಯಲ್ಲಿಯೇ ಮಾಡುತ್ತಿದ್ದರು. ಹಾಗೂ ಧಾರ್ಮಿಕ ವಿಷಯವನ್ನೊಳಗೊಂಡ ಸಾಹಿತ್ಯವನ್ನು

ರಚಿಸುತ್ತಿದ್ದರು. ಇವರು ಸಾಹಿತ್ಯ ರಚನೆಗೆ ಆಯ್ಕೆ ಮಾಡಿಕೊಂಡ ಭಾಷೆ ಸಂಸ್ಕೃತ. ಈ ಸಂಸ್ಕೃತ ಭಾಷೆಯನ್ನು ದೇವಭಾಷೆಯೆಂದು ಶ್ರೇಷ್ಠವಾದ ಭಾಷೆಯೆಂದು ಬಿಂಬಿಸುತ್ತಾ ಹೋದರು. ಸರ್ವ ಜ್ಞಾನದ ಮೂಲ ಸಂಸ್ಕೃತ ಭಾಷೆ ಎನ್ನುವಷ್ಟರಮಟ್ಟಿಗೆ ಸಂಸ್ಕೃತ ಭಾಷೆಯ ಕುರಿತು ಪ್ರಸಿದ್ಧೀಕರಣ ಮಾಡತೊಡಗಿದರು. ಇನ್ನೂ ಮುಂದುವರೆದು ರಾಜ್ಯವನ್ನು ಆಳುವಂತಹ ರಾಜಮಹಾರಾಜ ಹಾಗೂ ಎಲ್ಲಾ ಅಧಿಕಾರಸ್ಥರು ಈ ಭಾಷೆಗೆ ಪ್ರಾಧಾನ್ಯತೆ ಕೊಡುವಂತೆ ಮಾಡಿದರು. ರಾಜ್ಯದ ಆಡಳಿತ ಭಾಷೆ ಸಂಸ್ಕೃತ ಭಾಷೆ ಎನ್ನುವಷ್ಟರ ಮಟ್ಟಿಗೆ ಸಂಸ್ಕೃತ ಭಾಷೆ ಬೆಳೆಯಿತು. ಸಂಸ್ಕೃತ ಭಾಷೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಂತೆಲ್ಲ ಉಳಿದ ದೇಶಿಭಾಷೆಗಳು ಅಕ್ಷರ ರೂಪಕ್ಕೆ ಸಿಗದೆ ದಿನದಿಂದ ದಿನಕ್ಕೆ ತಮ್ಮ ವರ್ಚಸ್ಸನ್ನು ಕಳೆದುಕೊಳ್ಳುವಂತಾಯಿತು. ಹಾಗೂ ಮೌಖಿಕವಾಗಿಯೇ ಇದ್ದು ಬರಹರೂಪಕ್ಕೆ ಸಿಗದೆ ನಲುಗುವಂತಾಯಿತು. ಈ ರೀತಿಯ ಬರಹ ಪ್ರಾಮುಖ್ಯತೆ ಕಳೆದುಕೊಂಡ ಭಾರತೀಯ ದೇಸಿ ಭಾಷೆಗಳಲ್ಲಿ ಕನ್ನಡವೂ ಒಂದು.

"ಧರ್ಮ ಹಾಗೂ ರಾಜಕೀಯಗಳಂತೆ ನುಡಿ ಹಾಗೂ ಲಿಪಿಗಳು ಸಾಂಸ್ಥಿಕ ರೂಪವನ್ನು ಪಡೆದುಕೊಂಡಾಗ ಅದು ತನ್ನ ಅನೇಕತೆಯನ್ನು ಕಳೆದುಕೊಂಡ ಅಧಿಕಾರ ಕೇಂದ್ರವಾಗಿ ಮಾರ್ಪಡುತ್ತದೆ. ಸಮಾಜದಲ್ಲಿ ಒಂದು ರಾಚನಿಕ ಬದಲಾವಣೆ ತರಬಹುದಾದ ಸಾಮರ್ಥ್ಯವನ್ನು ಕಳೆದುಕೊಂಡು ಜಡವಾಗಿ ಬಿಡುತ್ತದೆ. ಸಾಂಸ್ಥೀಕರಣ ಹಾಗೂ ಅಧಿಕಾರದ ಹಂಬಲಗಳು ಭಾಷೆಯನ್ನು ಏಕಾಕಾರಗೊಳಿಸಿ ಸ್ಥಗಿತಗೊಳಿಸುವ ಪ್ರಯತ್ನದಲ್ಲಿ ತೊಡಗುತ್ತದೆ. ಲಿಪಿ ಹಾಗೂ ಭಾಷೆಯ ಪ್ರಮಾಣೀಕರಣ ಎನ್ನುವುದು ಅಧಿಕಾರ ಕೇಂದ್ರ ಹಾಗೂ ಭಾಷೆಯ ಪ್ರಮಾಣೀಕರಣ ಎನ್ನುವುದು ಅಧಿಕಾರ ಕೇಂದ್ರ ಹಾಗೂ ಆಡಳಿತ ವ್ಯವಸ್ಥೆಯಿಂದ ರೂಪಗೊಳ್ಳುವ ಮಾನದಂಡಗಳಾಗುತ್ತವೆ. ಇಂಥ ಪ್ರಮಾಣೀಕರಣ ರೂಪವೇ 'ಶುದ್ಧವೆಂದು' ಸ್ಥಿರೀಕರಣಗೊಳ್ಳುತ್ತದೆ. ಅಧಿಕಾರದ ನೆಲೆಯಲ್ಲಿ ಮಾತಿಗಿಂತ ಬರಹಕ್ಕೆ ಪ್ರಮುಖ ಸ್ಥಾನ ಕಾಣುತ್ತದೆ."[೮]

ಅಧಿಕಾರ ಕೇಂದ್ರೀಕೃತ ವ್ಯವಸ್ಥೆಯಲ್ಲಿ ಯಾವುದೆ ಅಧಿಕಾರ ಪ್ರಭುತ್ವವು ತನ್ನ ಆಳ್ವಿಕೆಗೆ ಒಳಪಟ್ಟಿರುವಂತಹ ಒಂದು ನಿರ್ದಿಷ್ಟ ಪ್ರಾದೇಶಿಕ ವ್ಯಾಪ್ತಿಯಲ್ಲಿ ಬರುವಂತಹ ಧರ್ಮ, ಕಲೆ, ಭಾಷೆ, ಇನ್ನಿತರ ಯಾವುದೇ ವಸ್ತು ವಿಷಯಕ್ಕೆ ಮೌಲಿಕತ್ವವನ್ನು ತಮ್ಮ ಸಂದರ್ಭಕ್ಕೆ ತಕ್ಕಂತೆ ನೀಡುತ್ತದೆ. ಉದಾ. ಅಧಿಕಾರ ರೂಢನಾದ ರಾಜ ಯಾವ ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡುತ್ತಾನೋ ಆ ಧರ್ಮ ಹೆಚ್ಚು ಪ್ರಸಾರವಾಗುತ್ತದೆ. ದಿನದಿಂದ ದಿನಕ್ಕೆ ಬೆಳೆಯುತ್ತಾ ಸಾಗುತ್ತದೆ. ರಾಜ್ಯದ ಐತಿಹಾಸಿಕ ಚರಿತ್ರೆಯಲ್ಲಿ ಒಂದು ಭಾಗವಾಗಿ ದಾಖಲಾಗಿರುತ್ತದೆ. ಅದರಂತೆ ಭಾಷೆಯೂ ಕೂಡ ಹಾಗೆಯೇ.

ಒಂದು ಕಡೆ ರಾಜಪ್ರಭುತ್ವ ಮತ್ತೊಂದು ಕಡೆ ವರ್ಣಾಶ್ರಮ (ಪದ್ಧ)ವ್ಯವಸ್ಥೆಯ ಕಟ್ಟುಬದ್ಧ ಶೋಷಣೆ, ಇವೆರಡರ ನಡುವೆ ಸಿಲುಕಿಕೊಂಡ ಕನ್ನಡವು ಬಂಧನದಿಂದ ಮುಕ್ತಿಯಾಗಲು ಹಲವು ಶತಮಾನಗಳೇ ಬೇಕಾಯಿತು. ಕನ್ನಡ ಭಾಷೆಯ ಉಲ್ಲೇಖ ಮಹಾಭಾರತದ

ಭೀಷ್ಮಪರ್ವದಲ್ಲಿ ಕಂಡುಬರುವಂತೆ ಭಾಷೆಯ ಇತಿಹಾಸ ಕ್ರಿಪೂರ್ವಕ್ಕೆ ಹೋದರೂ ಅಧಿಕೃತ ಬರಹದ ದಾಖಲೆಯು ೫ನೇ ಶತಮಾನದಲ್ಲಿನ ದಾಖಲೆಯಿಂದ. ಭೌದ್ಧಿಕ ಚಟುವಟಿಕೆಯ ಹಕ್ಕನ್ನು ಕಸಿದುಕೊಂಡ ವೈದಿಕರು ವೇದ ಆಗಮ ಉಪನಿಷತ್‌ಗಳನ್ನು ಮೌಖಿಕವಾಗಿಯೇ ಪಠಣಮಾಡುತ್ತಾ ಅವುಗಳನ್ನು ಉಳಿಸತೊಡಗಿದರು. ಹಾಗೆಯೇ ಸಾಹಿತ್ಯವನ್ನು ರಚಿಸಿದ ನಂತರ ಆ ಸಾಹಿತ್ಯದ ಪ್ರತಿ ಮಾಡಲು ಲಿಪಿಕಾರರನ್ನು ಬಳಸಿಕೊಳ್ಳಲು ಮುಂದಾದರು. ಕನ್ನಡ ಸಂದರ್ಭದಲ್ಲಿಯೂ ವೃತ್ತಿ ಪ್ರವೃತ್ತಿಯಾಗಿ ಕಂಡುಬಂದ ಬರವಣಿಗೆ ಕಾರ್ಯ ಕನ್ನಡ ಸಾಹಿತ್ಯ ಬೆಳವಣಿಗೆಗೆ ಕಾರಣವಾದ ತಾಂತ್ರಿಕ ಕಾರ್ಯವೆನ್ನಬಹುದು. ರಾಜನ ಆಜ್ಞೆಗಳನ್ನು ಶಾಸನರೂಪದಲ್ಲಿ ನಿರ್ಮಿಸಲು ಲಿಪಿಶಿಲ್ಪಿಗಳು ಸಹಾಯವಾದರೆ ಸಾಹಿತ್ಯ ರಚನೆಯಾದ ನಂತರ ಕೃತಿ ಹಾಗೂ ಕೃತಿಯ ಪ್ರತಿಯನ್ನು (ನಿ)ಮಾಡಲು ಕೌಶಲ್ಯಯುಕ್ತ ಲಿಪಿಕಾರರು ಸಹಕಾರಿಯಾದರು. ಭಾಷೆ ಮತ್ತು ಸಾಹಿತ್ಯದ ಅಧಿಕೃತೆಯಲ್ಲಿ ಲಿಖಿತ ಪರಂಪರೆಯೇ ಸಮಾಜದಲ್ಲಿ ಮುಖ್ಯವಾದುದಾಗಿರುವುದರಿಂದ ಬರಹ ರೂಪದಲ್ಲಿನ ಸಾಹಿತ್ಯ ಬೆಳವಣಿಗೆಗೆ ಕಾರಣವಾದ ತಾಂತ್ರಿಕ ಪಾತ್ರದ ವಿಶ್ಲೇಷಣೆ ಮುಖ್ಯ.

ಭಾಷೆ ಹುಟ್ಟಿದ ಬಹುಕಾಲದ ನಂತರದಲ್ಲೇ ಆ ಭಾಷೆಗೆ ಲಿಪಿ ರೂಪುಗೊಳ್ಳುತ್ತದೆ. ಕನ್ನಡ ಭಾಷೆಯೂ ಈ ನಿಯಮಕ್ಕೆ ಹೊರತಾದುದಲ್ಲ. ಆದರೆ ಸಾಕ್ಷಾಧಾರಗಳಿಲ್ಲವಾದ್ದರಿಂದ ಕೇವಲ ಊಹೆಯ ಮೇಲೆಯೇ ಭಾಷೆಯ ಬೆಳವಣಿಗೆಯನ್ನು ಗ್ರಹಿಸಬೇಕಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಭಾಷಾ ವಿದ್ವಾಂಸರು "ದ್ರಾವಿಡ ಭಾಷೆಗಳು ಸಂಸ್ಕೃತಕ್ಕಿಂತ ಬೇರೆಯಾದ ಭಾಷಾ ಪಂಗಡಕ್ಕೆ ಸೇರಿವೆ ಎಂಬುದನ್ನು ನಿರ್ವಿವಾದವಾಗಿ ಒಪ್ಪಿಕೊಂಡಿದ್ದಾರೆ. ತಮಿಳು, ಕನ್ನಡ, ತೆಲುಗು, ಮಲೆಯಾಳಂ ಭಾಷೆಗಳು ಆದಿದ್ರಾವಿಡ ಭಾಷೆಯೊಂದರ ಬೇರೆ ಬೇರೆ ಕಾಲಗಳಲ್ಲಿ ಬೇರೆಯಾಗಿ ಬೆಳವಣಿಗೆಯನ್ನು ಪಡೆದವು ಎಂಬುದು ಸ್ಪಷ್ಟವಾಗಿದೆ." "ಭಾಷೆಗೆ ಲಿಪಿ ರೂಪತಳೆಯುವುದು ಸಹ ಕಾಲಕಾಲಗಳಲ್ಲಿ ಹರಡಿಕೊಂಡಿರುವ ಕ್ರಿಯೆಯಾಗಿದೆ."[೯] ಅಕ್ಷರಗಳು ಬೆಳೆಯುವ ದಾರಿಯಲ್ಲಿ ಚಿತ್ರಲಿಪಿ, ಭಾವಲಿಪಿ, ಪದಸೂಚಕ ಲಿಪಿಯಾಗಿ ಮಾರ್ಪಾಟು ಹೊಂದಿದವು. ಒಟ್ಟಿನಲ್ಲಿ ಭಾರತದಲ್ಲಿ ಕ್ರಿಸ್ತಪೂರ್ವ ಎರಡು ಸಾವಿರ ವರ್ಷಗಳಿಗೂ ಹಿಂದೆ ಲೇಖನ ಪದ್ಧತಿ ರೂಢಿಯಲ್ಲಿ ಇತ್ತೆಂಬುದು ಈ ಮುದ್ರೆಗಳಿಂದ ಸಾಬೀತಾಗುತ್ತದೆ. ಆದರೆ ಕರ್ನಾಟಕದಲ್ಲಿ ಕನ್ನಡ ಭಾಷೆಯ ಲಿಪಿ ಬೆಳವಣಿಗೆ ಹೊಂದಿದ ಚರಿತ್ರೆ ಅಸ್ಪಷ್ಟವಾಗಿಯೇ ಇದೆ.

ಕ್ರಿಪೂ. ೩–೪ನೇ ಶತಮಾನದಲ್ಲಿಯೇ ಕನ್ನಡ ಭಾಷೆಯು ಇತ್ತು ಎಂಬುದನ್ನು ವಿದ್ವಾಂಸರು ತಿಳಿಸಿದ್ದಾರೆ. ಕ್ರಿಪೂ. ೩–೪ನೇ ಶತಮಾನಕ್ಕೆ ಸೇರಿದ ಸಂಸ್ಕೃತ ಮಹಾಭಾರತದ ಭೀಷ್ಮಪರ್ವದಲ್ಲಿ 'ಕರ್ಣಾಟಕ' ಎಂಬ ಮಾತು ಬರುತ್ತದೆ. ಈ ಶಬ್ದ 'ಕನ್ನಡ' ಎಂಬುದರ ಸಂಸ್ಕೃತ ರೂಪವಾಗಿರುವುದರಿಂದ ಇದನ್ನು ನಾಡು ನುಡಿ ಎರಡಕ್ಕೂ ಅನ್ವಯಿಸಿ ಹೇಳಬಹುದಾಗಿದೆ. ಕ್ರಿಪೂರ್ವದ ಗ್ರೀಕ್ 'ಪ್ರಹಸನ'ವೊಂದರಲ್ಲಿ ಕನ್ನಡ ಶಬ್ದಗಳು ಬಳಕೆಯಾಗಿವೆ ಎಂದು ಡಾ. ಗೋವಿಂದ ಪೈರವರು ಸಾಧಾರಣವಾಗಿ ತೋರಿಸಿಕೊಟ್ಟಿದ್ದಾರೆ. ಕ್ರಿಪೂ. ೩ನೇ ಶತಮಾನದಲ್ಲಿ

ರಚನೆಯಾದ ಅಶೋಕನ ಶಾಸನದಲ್ಲಿ ಒಂದಾದ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ್' ಎಂಬ ಶಬ್ದ ಕನ್ನಡ ಶಬ್ದವೆಂದು ನಿರ್ಧಾರವಾಗಿದೆ. ಹಾಗೆಯೇ ಕ್ರಿ.ಶ. ೧೫೦ರಲ್ಲಿ ರಚಿತವಾದ 'ಗಥಾಸಪ್ತಸತಿ' ಎನ್ನುವ ಪದ್ಯ ಕಾವ್ಯಗಲ್ಲಿ ಪೆಟ್ಟು ತೀರ್ ಎಂಬ ಕ್ರಿಯಾಪದಗಳು ಹೊಟ್ಟೆ ತುಪ್ಪ ಎಂಬ ಪದಗಳು ಬಳಕೆಯಾಗಿವೆ. ಕನ್ನಡ ಭಾಷೆಯ ಶಬ್ದಗಳು ಕ್ರಿ.ಪೂರ್ವದಲ್ಲಿಯೇ ಕಂಡುಬರುವುದರಿಂದ ಕನ್ನಡ ಭಾಷೆಯ ಪ್ರಾಚೀನತೆಯನ್ನು ಕ್ರಿ.ಪೂರ್ವದವರೆಗೂ ಕೊಂಡೊಯ್ಯಬಹುದು. ಆದರೆ ಭಾಷೆಯ ಲಿಪಿ ಅಥವಾ ಬರಹಕ್ಕೆ ಸಂಬಂಧಿಸಿದಂತೆ ಕ್ರಿಪೂರ್ವ ಕಾಲದ ಯಾವುದೇ ಕಾವ್ಯ ಅಥವಾ ಶಾಸನಗಳು ದೊರೆತಿಲ್ಲ. ಆದುದರಿಂದ ಕನ್ನಡ ಭಾಷೆಯು ಸಾಹಿತ್ಯ ರಚನೆಯ ಪ್ರಬುದ್ಧತೆಯನ್ನು ಕ್ರಿಪೂರ್ವ ಕಾಲದಲ್ಲಿ ಹೊಂದಿತ್ತು ಎಂಬ ವಿಷಯ ಯಾವುದೇ ಆಧಾರವಿಲ್ಲದೆ ಸತ್ಯಕ್ಕೆ ದೂರವಿದೆ.

ಕನ್ನಡ ಲಿಪಿ ಬೆಳವಣಿಗೆ ಹೊಂದಿ, ಕನ್ನಡದ ಪ್ರಾರಂಭಿಕ ಬರವಣಿಗೆ ಕ್ರಿ.ಶ. ಎರಡು–ಮೂರನೇ ಶತಮಾನದಲ್ಲಿ ಮೊದಲಾಗಿದೆ ಎಂದು ಭಾವಿಸಬಹುದು. ಅಶೋಕನ ಲಿಪಿಗಳ ನಂತರ "ಕ್ರಿಪೂ. ಒಂದನೆಯ ಶತಮಾನದ 'ಮಾಧವಪುರ' ವಡಗಾವಿ ಶಾಸನದಲ್ಲಿ (ಸ–)ಣಾಟಪತಿಸ ಎಂಬ ಪ್ರಯೋಗ ಕಂಡುಬರುತ್ತದೆ. ಇಲ್ಲಿ 'ಣಾಟಪತಿ' ಎಂಬ ಪ್ರತಿ ಪದಿಕಕ್ಕೆ–ಸ ಎಂಬ ವಿಭಕ್ತಿ ಪ್ರತ್ಯಯ ಸೇರಿದೆ."[೯] ಪ್ರಾಕೃತ ಶಾಸನಗಳಲ್ಲಿ 'ನ'ಕಾರಕ್ಕೆ ಬದಲು 'ಣ'ಕಾರವಿರುವುದು ಅಪರೂಪವೇನಲ್ಲ. ಆದುದರಿಂದ ನಾಟಪತಿ ಎಂಬ ಅರಿಸಮಾಸವೆಂದು ಹೇಳಬಹುದು. ಇಲ್ಲಿಯ 'ನಾಟ' ಎಂಬ ಪೂರ್ವಪದವು ಇಂದು ಕನ್ನಡದಲ್ಲಿ ಪ್ರಚುರವಾಗಿರುವ 'ನಾಡು' ಎಂಬುದರ ಪ್ರಾಚೀನರೂಪ. ಪುನ್ನಾಟ, ಕರ್ನಾಟ (ಅಥವಾ ಪುಣ್ಣಾಟ, ಕರ್ಣಾಟ) ಎಂಬ ಸಮಾಸಗಳಲ್ಲಿಯೂ ಈ ರೂಪವಿರುವುದನ್ನು ಕಾಣಬಹುದು. ತಮಿಳಿನಲ್ಲಿಯೂ 'ನಾಟ್ಟು' 'ನಾಟ್ಟಾನ್' ಮುಂತಾದ ಪ್ರಯೋಗಗಳಿವೆ. ಆದುದರಿಂದ ವಡಗಾವಿ ಶಾಸನದ ಈ ಪದವನ್ನು ಈವರೆಗೆ ತಿಳಿದುಬಂದಿರುವಂತೆ ಕನ್ನಡ ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸುವ ಸ್ಪಷ್ಟವಾದ ಪ್ರಥಮಾಧಾರವೆನ್ನಬಹುದು.[೧೦]

ನಂತರ "ಎರಡನೆಯ ಶತಮಾನದ ಮಳವಳ್ಳಿಯ ಶಾಸನದಲ್ಲಿ ಕನ್ನಡ ಪದದ ಉಲ್ಲೇಖವಿದೆ. ಈ ಶಾಸನದಲ್ಲಿ ಮಳವಳ್ಳಿಯನ್ನು 'ಮಟ್ಟಪಟ್ಟಿ' ಎಂದು ಕರೆಯಲಾಗಿದೆ. ಇಲ್ಲಿಯ 'ಪಟ್ಟಿ' ಎಂಬ ಉತ್ತರ ಪದವು 'ಗ್ರಾಮ' ಎಂಬ ಅರ್ಥವನ್ನು ಕೊಡುವ ಕನ್ನಡ ಪದವಾಗಿದೆ."[೧೧] ಮೂರನೇ ಶತಮಾನದ ಹಿರೇಹಡಗಲಿಯ ಶಾಸನದಲ್ಲಿ 'ಕೊಟ್ಟಸಮ' (=ಕೊಟ್ಟಶರ್ಮ) ಎಂಬ ವ್ಯಕ್ತಿಯ ಹೆಸರಿದೆ. ಇಲ್ಲಿಯ 'ಕೋಟ್ಟ' ಎಂಬುದು ದ್ರಾವಿಡ ಮೂಲದ್ದಿರುವಂತೆ ಕಾಣುತ್ತದೆ. 'ಕೋಟ್ಟ' ಎಂಬ ಪ್ರಯೋಗವು ಅಂದಿನ ಕನ್ನಡದಿಂದ ಪ್ರಾಕೃತಕ್ಕೆ ಸೇರಿದ್ದೆಂದು ಹೇಳಲು ಅನುಮಾನ ಪಡಬೇಕಾಗುತ್ತದೆ. ಆದರೂ ಇಲ್ಲಿಯ 'ಟ್ಟ'ಕಾರ ದ್ವಿತ್ವವು ಕನ್ನಡದ ಪ್ರಭಾವವಾಗಿರುವ ಸಾಧ್ಯತೆ ಇದೆ. ಮುಂದೆ ನಾಲ್ಕನೆಯ ಶತಮಾನದಲ್ಲಿ ಮಳವಳ್ಳಿಯ ಕದಂಬ

ಶಾಸನದಲ್ಲಿ 'ಮಟ್ಟಪಟ್ಟಿ' ಸೋಮಪಟ್ಟಿ, ವೇಗೂರು ಎಂಬ ಮುಂತಾದ ಊರ ಹೆಸರುಗಳುಳ್ಳ ಪದಗಳಿವೆ. ಈ ಊರ ಹೆಸರುಗಳಲ್ಲಿ ಬಹಳಷ್ಟು ಕನ್ನಡ ಭಾಷೆಯ ಅಂಶಗಳಿವೆ.

ನಾಲ್ಕನೇ ಶತಮಾನದ ತರುವಾಯ ಕ್ರಿ.ಶ. ೪೫೦ರ ಕಾಲಘಟ್ಟದ 'ಹಲ್ಮಿಡಿ' ಶಾಸನವೇ 'ಕನ್ನಡ ಭಾಷೆ'ಯಲ್ಲಿ ಹಾಗೂ 'ಕನ್ನಡ ಲಿಪಿ'ಯಲ್ಲಿ ರಚಿತವಾಗಿರುವ ಕನ್ನಡದ ಮೊಟ್ಟ ಮೊದಲ ಶಾಸನವಾಗಿದೆ. ಈ ಶಾಸನವನ್ನು ಡಾ.ಎಂ.ಎಚ್. ಕೃಷ್ಣಯ್ಯರವರು ಕಂಡುಹಿಡಿದರು. "ಈ ಶಾಸನದ ಭಾಷೆಯನ್ನು ಅವಲೋಕಿಸಿದ ರೈಸ್, ರಾವ್‌ಬಹದ್ದೂರ್, ನರಸಿಂಹಚಾರ್ಯರು ಮೊದಲಾದವರು ಈ ಶಾಸನದ ಭಾಷೆಯನ್ನು ಪೂರ್ವದ ಹಳಗನ್ನಡ ಎಂದು ಕರೆದಿದ್ದಾರೆ."[೨] ಹಲ್ಮಿಡಿ ಶಾಸನದಲ್ಲಿ ಬಳಕೆಯಾಗಿರುವ ಭಾಷೆಯನ್ನು ಗಮನಿಸಿದರೆ ಹಳಗನ್ನಡದ ಮೇಲೆ ಸಂಸ್ಕೃತದ ಪೂರ್ಣಹಿಡಿತ ಇದೆ ಎಂದು ತಿಳಿಯುತ್ತದೆ. ಈ ಶಾಸನದ ಭಾಷೆಯಲ್ಲಿರುವ ತೊಡಕನ್ನು ಕನ್ನಡ ಭಾಷೆಯ ತೊಡಕು ಎಂದು ಪರಿಗಣಿಸುವುದಕ್ಕಿಂತ ಸಂಸ್ಕೃತ ಪಾಂಡಿತ್ಯ ಪರವಾದ ಮನಸ್ಸಿನವನೊಬ್ಬ ಕನ್ನಡದಲ್ಲಿ ರಚಿಸಹೋದಾಗ ಆಗುವ ತೊಡಕು ಎಂದು ವಿಶ್ಲೇಷಿಸಬಹುದು. ಆಸ್ಥಾನ ಪಂಡಿತರು ಬಳಸದಿದ್ದ ಕನ್ನಡವನ್ನು ಬರಹಕ್ಕೆ ತರಲು ಯತ್ನಿಸುತ್ತಿದ್ದ ಕಾಲ ಅದು. ಕನ್ನಡ ಭಾಷೆ ಜನಸಾಮಾನ್ಯರ ನಡುವೆ ಸಮೃದ್ಧವಾಗಿ ಬೆಳೆದಿತ್ತು. ಈ ಶಾಸನದ ಭಾಷೆ ಪೂರ್ವದ ಹಳಗನ್ನಡವೆನ್ನಲು ಕೆಲವೊಂದು ಅಂಶಗಳನ್ನು ಕಾಣಬಹುದು. ಕವಿರಾಜಮಾರ್ಗಕ್ಕಿಂತ ಹಿಂದೆ ಕಾಲದ ಕನ್ನಡವೂ ಪೂರ್ವದ ಹಳಗನ್ನಡವಾಗಿದೆ. ದ್ವಿತೀಯ ವಿಭಕ್ತಿ 'ಆನ್'ಗೆ ಬದಲು ದೀರ್ಘವಿರುತ್ತದೆ. ಉದಾಹರಣೆಗೆ ಆದಾನ್, ಷಷ್ಠಿ ವಿಭಕ್ತಿಯ 'ಅ' ಕಾರದ ಬದಲಾಗಿ 'ಆ' ಕಾರ ಬರುತ್ತದೆ. ಉದಾಹರಣೆಗೆ ಕಾಲಭೋರನಾ, ದೇಶದಾ, ಸಪ್ತಮಿ ವಿಭಕ್ತಿಗೆ 'ಎ' ಕಾರ ಮತ್ತು 'ಉಳ್' ಪ್ರತ್ಯಯ ಇರುತ್ತದೆ. ಉದಾ. ಸಮಕ್ಷದೆ ನಾಡುಳ್, ಆಹವದುಳ್, 'ಇ'ಕಾರಕ್ಕೆ ಬದಲಾಗಿ 'ಎ'ಕಾರ ಇರುತ್ತದೆ. ಉದಾಹರಣೆಗೆ 'ಎರಿದು' 'ಬ'ಕಾರಕ್ಕೆ ಬದಲಾಗಿ 'ವ'ಕಾರ ಇರುತ್ತದೆ. ಉದಾ. ವಿಟ್ಟಾರ್ ಹೀಗೆ ಪೂರ್ವದ ಹಳಗನ್ನಡದ ಲಕ್ಷಣಗಳಿಗೆ ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು. ಕನ್ನಡ ಭಾಷೆಯ ಮೇಲೆ ಸಂಸ್ಕೃತದ ಪ್ರಭಾವ ಆಗಿದೆ ಎಂಬುದಕ್ಕೆ ಕೆಲವೊಂದು ಉದಾಹರಣೆಗಳನ್ನು ನೋಡಬಹುದು. 'ಪೆತ್ತಜಯನ್' ಎಂಬ ಅರಿಸಮಾಸವನ್ನು 'ಪೊಗಳೆಪಟ್ಟಣ' ಎಂಬ ಕರ್ಮಣೀ ರೂಪ (?)ವನ್ನೂ ನೋಡಬಹುದು. ಇದು ಸಂಸ್ಕೃತ ಕನ್ನಡ ಭಾಷೆಗಳ ಸಂಬಂಧದ ಹಳಮೆಗೆ ಮತ್ತು ಸಂಸ್ಕೃತದ ವ್ಯಾಕರಣ ನಿಯಮಗಳು ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿರುವುದಕ್ಕೆ ಸಾಕ್ಷಿಯಾಗಿವೆ.

ಹಲ್ಮಿಡಿ ಶಾಸನದ ಆಧಾರದಿಂದ ಆ ಕಾಲಕ್ಕಾಗಲೇ ಕನ್ನಡ ಬಲಿತ ಭಾಷೆಯಾಗಿತ್ತು. ಕನ್ನಡ ಸಾಹಿತ್ಯವಿದ್ದಿರಬೇಕು, ಮುಂತಾದ ಊಹೆಗಳನ್ನು ವಿದ್ವಾಂಸರು ಮಾಡಿದ್ದಾರೆ. ಆದರೆ ಈ ಶಾಸನದ ಪಠ್ಯ ಗಮನಿಸಿದಾಗ ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಶಾಸನದ ಆರಂಭ ಪದ್ಯ ಸಂಸ್ಕೃತದಲ್ಲಿದೆ. ಬಹು ಸುಂದರವಾದ ಭಾವವನ್ನು ಅದು ಹೊಂದಿದೆ. ಅದನ್ನು ಶಾಸನದ ಕವಿಯೇ ರಚಿಸಿದ್ದಾನೋ ಅಥವಾ ಯಾವುದಾದರೂ ಸಂಸ್ಕೃತ ಗ್ರಂಥದಿಂದ

ತೆಗೆದುಕೊಂಡಿದ್ದಾನೋ ತಿಳಿಯದು. ಈ ಶ್ಲೋಕವನ್ನು ಬಿಟ್ಟರೆ ಶಾಸನದ ಉಳಿದ ಭಾಗವೆಲ್ಲ ಕನ್ನಡದಲ್ಲಿದೆ. ಆದರೆ ಶ್ಲೋಕವನ್ನುಳಿದ ಹದಿನೈದು ಸಾಲು ಶಾಸನದಲ್ಲಿ ಉಳಿದ ಭಾಗವೆಲ್ಲ ಕನ್ನಡದಲ್ಲಿದೆ. ಆದರೆ ಶ್ಲೋಕವನ್ನುಳಿದ ಹದಿನೈದು ಶಾಸನದಲ್ಲಿ ಕೇವಲ ಕೆಲವೇ ಕೆಲವು ಕನ್ನಡ ಪದಗಳಿವೆ. "ಕುಲಾಮಲವ್ಯೋಮತಾರಾಧಿನಾಥ ದಕ್ಷಿಣಾ ಪಥ ಬಹುಶತಹವನ ಪಶುಪ್ರದಾನ ಶೌರ್ಯೋದ್ಯಮಭರಿತ ಮೊದಲಾದ ಸಂಸ್ಕೃತದ ದೀರ್ಘ ಸಮಾಸಗಳೇ ಈ ಶಾಸನದಲ್ಲಿ ಕಂಡುಬರುತ್ತವೆ. ಆದ್ದರಿಂದ ಹಲ್ಮಿಡಿಯ ಶಾಸನದ ಕಾಲಕ್ಕೆ ಕನ್ನಡ ಚೆನ್ನಾಗಿ ಬಲಿತ ಭಾಷೆಯಾಗಿತ್ತು ಎಂದು ಹೇಳುವುದು ಕಷ್ಟವಾಗುತ್ತದೆ."[೧೩] ಕನ್ನಡ ಭಾಷೆ ಈ ಶಾಸನ ರಚನೆಯ ಸಂದರ್ಭದಲ್ಲಿ ಹೆಚ್ಚಾಗಿ ಬರವಣಿಗೆಗೆ ಬಳಕೆಯಾಗದಿದ್ದುಕ್ಕೆ ಭಾಷೆಯ ಕಾರಣಕ್ಕಿಂತ ರಾಜಕೀಯ ಸಾಮಾಜಿಕ ವಾತಾವರಣವನ್ನೇ ಲೆಕ್ಕಕ್ಕೆ ತೆಗೆದುಕೊಳ್ಳುವುದು ಸೂಕ್ತವೆನಿಸುತ್ತದೆ. ಇಂದು ಕನ್ನಡ ನಾಡಿನಲ್ಲಿ ಕನ್ನಡ ಜನರ ಭಾಷೆಯಾಗಿದ್ದರೂ ಇಂಗ್ಲೀಷ್ ಭಾಷೆಯೇ ದಾಖಲೆಗಳ ಭಾಷೆಯಾಗಿರುವಂತಹ ಪರಿಸ್ಥಿತಿ ಅಂದಿನ ಸಂದರ್ಭದಲ್ಲಿಯೂ ಕೂಡ ಇತ್ತೆಂಬುದನ್ನು ಅರಿಯಬೇಕು. ಆಗ ಸಂಸ್ಕೃತ ಭಾಷೆ ಈಗಿನ ಇಂಗ್ಲಿಷಿನ ಸ್ಥಾನದಲ್ಲಿರಬಹುದು ಎಂಬುದನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಹಲ್ಮಿಡಿ ಶಾಸನದ ಕಾಲಕ್ಕಾಗಲೇ ಕನ್ನಡದ ಲಿಪಿಯ ಸುಧಾರಣೆಯಾಗಿತ್ತು. "ಕನ್ನಡ ಲಿಪಿಯ ಬೆಳವಣಿಗೆಯಲ್ಲಿ ಕದಂಬರ ಲಿಪಿಯ (ಸು) ಪಾತ್ರ ಮಹತ್ವವಾಗಿತ್ತು. ಭ್ಯೂಲರ್ ಮುಂತಾದ ವಿದ್ವಾಂಸರು ಇದು ಕನ್ನಡದ ಲಿಪಿಯ ಅತ್ಯಂತ ಪ್ರಾಚೀನವಾದ ಸ್ಥಿತಿ ಎಂದು ಭಾವಿಸಿದ್ದಾರೆ."[೧೪] ಕನ್ನಡ ಲಿಪಿಯ ವಿಕಾಸದ ಹಂತದಲ್ಲಿ ಕದಂಬರ ಲಿಪಿಯು ಅತ್ಯಂತ ಮಹತ್ವದ ಹಂತವೆಂದು ಹೇಳಬಹುದು. ಏಕೆಂದರೆ ಅಶೋಕನ ಮತ್ತು ಶಾತವಾಹನರ ಬ್ರಾಹ್ಮೀ ಪ್ರಾಕೃತ ಭಾಷೆಯ ಶಾಸನಗಳನ್ನು ಬರೆಯುವುದಕ್ಕೋಸ್ಕರ ಬಳಸಲ್ಪಟ್ಟ ಲಿಪಿಗಳು. ಕದಂಬರ ಲಿಪಿ ಮೊಟ್ಟ ಮೊದಲ ಬಾರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಯ ಜಾಯಮಾನಕ್ಕೆ ಒಗ್ಗುವ ಹಾಗೆ ಱ, ೞ, ಋ ಹಾಗೂ ವಿಸರ್ಗಗಳನ್ನು ಮೊಟ್ಟ ಮೊದಲ ಬಾರಿಗೆ ಈ ಕಾಲಘಟ್ಟದಲ್ಲಿ ಸೃಷ್ಟಿಸಿಕೊಳ್ಳಲಾಯಿತು. ಈ ಕಾಲದಲ್ಲಿ ಅಕ್ಷರಗಳ ಉದ್ದವನ್ನು ಕುಗ್ಗಿಸಿ ಗಾತ್ರವನ್ನು ಹಿಗ್ಗಿಸಿತು. ಚೌಕಾಕಾರದ ಸ್ವರೂಪವನ್ನು ಕೊಡಲಾಯಿತು. ಒಟ್ಟಾರೆ ಕದಂಬರ ಲಿಪಿಯು ಅತ್ಯಂತ ಪ್ರಾಚೀನ ಸ್ವರೂಪವನ್ನು ದಾಖಲಿಸಿದೆ ಎಂದೆನ್ನಬಹುದು.

ಕದಂಬರು ಬಾದಾಮಿಯ ಚಾಲುಕ್ಯರಂತೆ ಆಗಲಿ ಗಂಗರಂತೆ ಆಗಲಿ ರಾಜಕೀಯವಾಗಿ ಮಹಾಶಕ್ತಿಯಾಗಿರಲಿಲ್ಲ. ಆದರೆ ರಾಜಕೀಯ ಇತಿಹಾಸದಲ್ಲಿ ಗೌಣವೆನಿಸಿದರೂ ಕನ್ನಡ ಲಿಪಿ ಮತ್ತು ಭಾಷಾ ಇತಿಹಾಸದಲ್ಲಿ ಬಹುಮುಖ್ಯವಾಗಿದ್ದಾರೆ. ಭಾಷೆಯ ವಿಷಯಕ್ಕೆ ಸಂಬಂಧಿಸಿದಂತೆ "ಕದಂಬರ ಕಾಲದಲ್ಲಿ ನಾಲ್ಕು ಬದಲಾವಣೆಗಳು ಕಂಡವು. ೧. ಸುಮಾರು ಅರ್ಧ ಸಹಸ್ರಮಾನಕ್ಕಿಂತ ಹೆಚ್ಚು ಕಾಲ ಬಳಕೆಯಲ್ಲಿದ್ದ ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯ ವಹಿವಾಟು ಅಂತ್ಯಗೊಳ್ಳುವುದು. ೨. ಬ್ರಾಹ್ಮೀ ಸ್ಥಾನವನ್ನು ಮುಂಚೂಣಿ ಕನ್ನಡ ಲಿಪಿ ಮತ್ತು ಪ್ರಾಕೃತ ಭಾಷೆಯ ವಹಿವಾಟು ಅಂತ್ಯಗೊಳ್ಳುವುದು. ಬ್ರಾಹ್ಮಿ ಸ್ಥಾನವನ್ನು ಮುಂಚೂಣಿ ಕನ್ನಡ

ಲಿಪಿ ಪಡೆದುಕೊಂಡು ಸಂಸ್ಕೃತ ಭಾಷಾ ವ್ಯವಹಾರವನ್ನು ನಿಭಾಯಿಸತೊಡಗುವುದು. ೩. ದಕ್ಷಿಣದ ಪ್ರತಿಷ್ಠಿತರ ವ್ಯವಹಾರ ಭಾಷೆಯಾಗಿ ಸಂಸ್ಕೃತ ಹೊರಹೊಮ್ಮುವುದು. ೪. ಕನ್ನಡ ಭಾಷೆ ಮತ್ತು ಕನ್ನಡ ಲಿಪಿ ಸಂಸ್ಕೃತದೊಡನೆ ನುಡಿ ಕಾರ್ಯಭಾರವನ್ನು ಹಂಚಿಕೊಳ್ಳಲಾರಂಭಿಸುವುದು. ಮಾಧ್ಯಮದ ಇತಿಹಾಸದಲ್ಲಿ ಇದೊಂದು ಸಂಕ್ರಮಣ ಕಾಲ."[೧೫]

ಕದಂಬರ ಕಾಲದ ಲಿಪಿಗೂ ಅದರ ಸಮಕಾಲೀನವಾದ ಗುಪ್ತರ ಲಿಪಿಗೂ ಇರುವ ಹೋಲಿಕೆಗಳು ಅಧ್ಯಯನಕಾರರ, ಓದುಗರ ಗಮನ ಸೆಳೆಯುತ್ತವೆ. ಮುಖ್ಯವಾಗಿ ಹೇಳುವುದಾದರೆ ಗುಪ್ತರ ಲಿಪಿಗೂ ಇರುವ ಹೋಲಿಕೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಗುಪ್ತರ ಲಿಪಿಯ ಮುಖ್ಯ ಲಕ್ಷವಾದ ಚೌಕತಲೆಯ (Box headed) ಅಕ್ಷರಗಳು ಕದಂಬರ ಕಾಲದಲ್ಲೂ ಬಳಕೆಯಲ್ಲಿದ್ದವು. ಕದಂಬ ಮಯೂರಶರ್ಮನ ಚಂದ್ರವಳ್ಳಿಯ ಶಾಸನ ಕಾಕುಸ್ಥವರ್ಮನ ಹಲ್ಮಿಡಿ ಶಾಸನ, ತಾಳಗುಂದ ಶಾಸನ ಮತ್ತು ಮೃಗೇಶವರ್ಮನ ಶಾಸನಗಳಲ್ಲಿ ಲಿಪಿಯ ವೈವಿಧ್ಯವು ಕಂಡುಬರುತ್ತದೆ. ಮಯೂರಶರ್ಮನ ಶಾಸನವು ಗುಹಾಲಿಪಿಯ ಕೊನೆಯ ಕಾಲಕ್ಕೆ ಸೇರಿದ್ದು ಶಾತವಾಹನರ ಲಿಪಿಯನ್ನು ಬಹಳವಾಗಿ ಹೋಲುತ್ತದೆ. ಇದರಲ್ಲಿ ತಲೆಕಟ್ಟು ಕಾಣಬರುತ್ತದೆ. ಆದರೆ ಅದು ಬಹುಸಣ್ಣದಾದ ಒಂದು ಗೆರೆಯಾಗಿ ನೆಟ್ಟಗಿರುತ್ತದೆ. ಆದರೆ ಅದು ಬಹುಸಣ್ಣದಾದ ಒಂದು ಗೆರೆಯಾಗಿ ನೆಟ್ಟಗಿರುತ್ತದೆ. ಉದ್ದವಾದ ಅಕ್ಷರಗಳ ಕೆಳಭಾಗ ಸಾಮಾನ್ಯವಾಗಿ ಅತಿ ಉದ್ಧವಾಗಿಯೂ ಡೊಂಕಾಗಿಯೂ ಕಾಣುವುದು. 'ಸ' ಎಂಬ ಅಕ್ಷರವು ಈ ಸಣ್ಣ ಶಾಸನದಲ್ಲಿ ಮೂರು ನಾಲ್ಕು ವಿಧಗಳಲ್ಲಿ ಬರೆಯಲ್ಪಟ್ಟಿರುವುದನ್ನು ನೋಡಬಹುದು. ಈ ಅಕ್ಷರದ ಮೊದಲ ರೂಪದ ಅನುಕರಣವನ್ನು ಇಲ್ಲಿ ಕಾಣಬಹುದು. ಕಾಕುಸ್ಥವರ್ಮನ ಹಲ್ಮಿಡಿ ಶಾಸನದಲ್ಲಿ ಸರಳವಾಗಿರುವ ತಲೆಕಟ್ಟಿನ ಜೊತೆಗೆ ಅಪರೂಪವಾಗಿ ಡೊಂಕಾಗಿರುವ ತಲೆಕಟ್ಟು ದೊರೆಯುವುದು. ಕ.ರ.ಉ. ಮುಂತಾದ ಅಕ್ಷರಗಳು ಇನ್ನೂ ಕಿರಿದಾಗುವುದನ್ನು ಗಮನಿಸಬೇಕು. ಗ.ಸ. ಮುಂತಾದ ಅಕ್ಷರಗಳ ಮೇಲ್ಭಾಗವು ಇನ್ನೂ ಬಾಯಿಬಿಟ್ಟಿಲ್ಲದಿರುವುದನ್ನು ಕಾಣಬರುತ್ತದೆ. ವ.ಥ. ಮುಂತಾದ ಅಕ್ಷರಗಳು ಅಗಲವಾಗುವ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತವೆ. ಈ ಮೇಲಿನ ಎರಡು ಶಾಸನಗಳ ಲಿಪಿಯಲ್ಲಿ ಗುಪ್ತರ ಕಾಲದ ಚೌಕತಲೆಯಾಗಲೀ ಅಥವಾ ತ್ರಿಕೋಣಾಕಾರದ ತಲೆಯಾಗಲಿ ಕಾಣಬರುವುದಿಲ್ಲ. ಅವುಗಳನ್ನು ನಾವು ಕಾಕುಸ್ಥವರ್ಮನ ತಾಳಗುಂದ ಶಾಸನದಲ್ಲಿ ಕಾಣುವ ಲಿಪಿಯಾಗಿ ಪರಿವರ್ತಿತವಾಗಿರುವುದು ಆಶ್ಚರ್ಯವೆಂದೂ, ಅದು ಗುಪ್ತರ ಲಿಪಿಯ ಪ್ರಭಾವದಿಂದ ಉಂಟಾಗಿರಬೇಕೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ತಾಳಗುಂದ ಶಾಸನದ ಲಿಪಿಯಲ್ಲಿ ಚೌಕತಲೆಯ ಬರಹವನ್ನು ನಾವು ನೋಡುತ್ತೇವೆ. ಈ ಚೌಕತಲೆಯೂ ಬರೆಯುವ ವಿಧಾನದಿಂದ ಬೆಳೆದದ್ದು ಎಂದು ಹೇಳಬಹುದು. "ತಾಳಗುಂದ ಶಾಸನ ಲಿಪಿಯು ಎಲ್ಲಾ ಕದಂಬ ಶಾಸನಗಳ ಲಿಪಿಗಿಂತ ಸುಂದರವಾಗಿಯೂ ಕಲಾತ್ಮಕವಾಗಿಯೂ ಇದೆ. ನಂತರ ಆಳಿದ ಮೃಗೇಶವರ್ಮನ ತಾಮ್ರ ಶಾಸನಕ್ಕೂ ತಾಳಗುಂದ ಕಲ್ಲಿನ ಶಾಸನಕ್ಕೂ ಅನೇಕ ಹೋಲಿಕೆಗಳಿದ್ದಾಗ್ಯೂ, ತಾಳಗುಂದ ಶಾಸನವು ತಾಮ್ರ ಪತ್ರದ

ಮೇಲೆ ಬರೆಯಲ್ಪಟ್ಟಿರುವುದಿಂದ ಬರೆಯುವ ಪದಾರ್ಥ ಮತ್ತು ಲೇಖನಿಯಿಂದ ಉಂಟಾಗಬಹುದಾದ ವೈವಿಧ್ಯಗಳನ್ನು ನಾವು ಇಲ್ಲಿ ಗಮನಿಸಬಹುದು."[೧೬] ತಾಳಗುಂದ ಶಾಸನದ ಲಿಪಿಯೂ ಬ್ರಾಹ್ಮಿಲಿಪಿಯಷ್ಟು ಉದ್ದುದ್ದವಾಗಿಲ್ಲದಿದ್ದರೂ, ಅಕ್ಷರಗಳು ಗುಂಡಾಗಿಯಂತೂ ಇಲ್ಲ. ಆದರೆ ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅವು ದುಂಡಾಗುವ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತದೆ ಎಂದು ಹೇಳಬಹುದು.

ಹಲ್ಮಿಡಿ ಶಾಸನ ಕಾಲಕ್ಕಾಗಲೇ ಗದ್ಯ ಮತ್ತು ಪದ್ಯಯೆಂಬ ಸಾಹಿತ್ಯ ಪ್ರಕಾರಗಳು ಕಂಡುಬರುವುದು ಕಾಣುತ್ತೇವೆ. ಹಲ್ಮಿಡಿ ಶಾಸನದ ಪಠ್ಯ ಗದ್ಯದಲ್ಲಿದೆ. ಆದರೆ ಬಹುತೇಕ ಶಾಸನಗಳಿರುವುದು ಪದ್ಯದಲ್ಲಿ. ಗದ್ಯವನ್ನು ಪ್ರಶಸ್ತಿಗಳಿಗಾಗಿಯೋ, ವಂಶವರ್ಣನೆಗಾಗಿಯೋ, ಕೊಟ್ಟದಾನದ ವಿವರಗಳನ್ನು ಹೇಳುವುದಕ್ಕಾಗಿಯೋ ಉಪಯೋಗಿಸಿಕೊಂಡಿದೆ. ಅಂದರೆ ಪ್ರಮುಖವಲ್ಲದ ವಿಷಯಗಳನ್ನು ಹೇಳಲು ಶಾಸನಗಳಲ್ಲಿ ಗದ್ಯವನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಈ ಮಾತು ಕಲಿತವರು ವಿದ್ವಾಂಸರು ಬರೆದ ಶಾಸನಗಳಿಗೆ ಅನ್ವಯವಾಗುತ್ತದೆ. ಇವರು ಬರೆದ ಶಾಸನಗಳಲ್ಲಿ ಪದ್ಯಗಳು ಹೇಗೆ ಪ್ರೌಢವಾಗಿ, ಸಂಸ್ಕೃತ ಭೂಯಿಷ್ಠವಾಗಿರುತ್ತಿದ್ದಿತೊ ಹಾಗೆಯೇ ಗದ್ಯವೂ ಪ್ರೌಢವಾಗಿ ಸಂಸ್ಕೃತ ಭೂಯಿಷ್ಠವಾಗಿರುತ್ತಿದ್ದಿತು. ಆ ಗದ್ಯವನ್ನು ಕನ್ನಡವೆಂದು ಕರೆಯುವುದು ಅವುಗಳ ಕೊನೆಯಲ್ಲಿ ಬರುವ ಪ್ರತ್ಯಯಗಳಿಂದ ಈ ಪ್ರತ್ಯಯಗಳನ್ನು ತೆಗೆದರೆ ಅವು ಸಂಸ್ಕೃತದ ಪದಗಳೇ ಆಗುತ್ತವೆ. ಆದರೆ ಸಾಮಾನ್ಯರನ್ನು ಕುರಿತು ಬರೆದ ಶಾಸನಗಳಾದ ವೀರಗಲ್ಲುಗಳಲ್ಲಿ, ತುರುಗೋಳಿನಲ್ಲಿ ಸತ್ತವರ ಸ್ಮಾರಕಗಳಲ್ಲಿ ಮಾಸ್ತಿಕಲ್ಲುಗಳಲ್ಲಿ ಆಡುಮಾತಿನ ಸೊಗಡು ಕಂಡುಬರುತ್ತದೆ. ಇಲ್ಲಿನ ಕನ್ನಡ ತನ್ನ ನೀರಸತನವನ್ನು ಕಳೆದುಕೊಂಡು ಮಿರುಗುತ್ತಿರುವುದು ಕಂಡುಬರುತ್ತದೆ. ಆ ಭಾಷೆಯಲ್ಲಿ ಮಣ್ಣಿನ ವಾಸನೆ ಹೊಡೆಯುತ್ತದೆ. ಹಾಗೆಯೇ ಫಲಸ್ತುತಿಯ ಮತ್ತು ಶಾಪದ ಮಾತುಗಳಲ್ಲಿ ಜನಸಾಮಾನ್ಯರ ಒರಟಾದ ಆದರೆ ಶಕ್ತಿಯುತವಾದ ಗದ್ಯ ಕಂಡುಬರುತ್ತದೆ. ನಾನಾ ಉದ್ದೇಶಗಳಿಗಾಗಿ ನಾನಾ ರೀತಿ ಶೈಲಿಗಳಲ್ಲಿ ಶಾಸನಗಳಲ್ಲಿ ಗದ್ಯ ಬಳಕೆಯಾಗಿರುವುದನ್ನು ನೋಡಬಹುದಾಗಿದೆ.

ಹಲ್ಮಿಡಿ ಶಾಸನದ ತರುವಾಯ ಸು. ಕ್ರಿ.ಶ. ೪೮೦ರ ಗಂಗರಾಜರ ತೀರ ಹಳೆಯ ಉಲ್ಲೇಖವುಳ್ಳದೆಂದು ರೈಸರು ವರ್ಣಿಸಿದ ಸಿರಗುಂದದ ಶಾಸನವಿದೆ. ಇದರಲ್ಲಿ ಪೂರ್ವದ ಹಳಗನ್ನಡವೆಂಬುದು ಸ್ಪಷ್ಟವಿದೆ. ಹಾಗೆಯೇ "ಕೆಲಗುಂದಿ ಎಂಬಲ್ಲಿನ ಕಲ್ಲಿನ ಬರಹವಿರುವ ೫ನೇ ಶತಮಾನದ ಉತ್ತರಾರ್ಧ ಕಾಲಘಟ್ಟದ ಕದಂಬ ದೊರೆ ರವಿವರ್ಮನ ಉಲ್ಲೇಖ ಮಾಡಿರುವ ಶಾಸನವಿದೆ.

ಸ್ವಸ್ತಿ ಶ್ರೀ ರವಿವರ್ಮ(ರ್)
ನಾಡಾಳೆ ಮಲ್ಲಿಗೆ ಆ
ಅರಸರಾ ಪೆರಿಯಾ ಅರಸಿ

ಕಳಿ ಗುಜ್ಜೆನಿಯಾ ಪಡುಗ (ಲ್)
ಇನ್ನಿ ದಾನ್ನ ಮಿ ಪೋರ್ಪ (ಇ್ವಪಾ)
ದಗೆ ಸಂಯುಕ್ತರಪ್ಪಾ (ರ)"[೧೭]

ಹಲ್ಮಿಡಿ ಶಾಸನ ಬಿಟ್ಟರೆ ಇದೇ ಕನ್ನಡದ ಮೊದಲ ಶಾಸನವೆಂದೂ ಇದರಲ್ಲಿ ಅಚ್ಚಗನ್ನಡ ಪದಗಳೇ ಹೆಚ್ಚಾಗಿವೆಯೆಂದು ಊಹಿಸಲಾಗಿದೆ. ಕ್ರಿ.ಶ. ೭ನೆಯ ಶತಮಾನದ ನಂತರ ಸಾಹಿತ್ಯದ ಗುಣವುಳ್ಳ ಶಾಸನಗಳು ದೊರೆಯುತ್ತವೆ. ಹಲ್ಮಿಡಿ ಶಾಸನದಲ್ಲಿ ಗದ್ಯ ಬಳಕೆಯಾದರೂ ಸಂಸ್ಕೃತ ಮಿಶ್ರಿತ ಭಾಷೆ ಮತ್ತು ಸಾಹಿತ್ಯದ ಪ್ರಭಾವವಿದೆ. ಹಲ್ಮಿಡಿ ಶಾಸನದ ನಂತರ ಬಾದಾಮಿ ಶ್ರವಣಬೆಳಗೊಳದಲ್ಲಿ ಸಾಹಿತ್ಯ ಗುಣವುಳ್ಳ ಹೇರಳವಾದ ಶಾಸನಗಳು ಲಭ್ಯವಾಗಿವೆ. ಆದುದರಿಂದ ಶಾಸನದಲ್ಲಿ ಸಾಹಿತ್ಯ ಯುಗವು ೭ನೇ ಶತಮಾನದಿಂದ ಮೊದಲಾಯಿತೆನ್ನಬೇಕು. ಸಾಹಿತ್ಯಿಕ ಗುಣವುಳ್ಳ ಪ್ರಾಚೀನ ದಾಖಲೆಯಾಗಿ ಕಪ್ಪೆ ಅರಭಟ್ಟನ ಶಾಸನ ಮುಖ್ಯವಾದುದಾಗಿದೆ.

ಸಾಧುಗೆ ಸಾದು ಮಾಧುರ್ಯ್ಯಂಗೆ ಮಾಧುರ್ಯಂ
ಬಾದಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವ ನೀತನ್ಪರನಲ್ಲ.

ಈ ಶಾಸನದ ಪಠ್ಯ ಪದ್ಯದ ಪ್ರಕಾರವಾಗಿದೆ. ಇಲ್ಲಿ ಬಳಸಲಾಗಿರುವ ಛಂದಸ್ಸು ಜನಪದ ಛಂದಸ್ಸಾದ ತ್ರಿಪದಿಯಾಗಿದೆ. ಈ ಶಾಸನ ಕನ್ನಡ ದೇಸಿ ಛಂದಸ್ಸಿನ ಬಳಕೆಯಿರುವ ಸಾಹಿತ್ಯ ಬರವಣಿಗೆಯ ಮೊದಲ ದಾಖಲೆಯಾಗಿದೆ. ಇಲ್ಲಿಯ ತ್ರಿಪದಿಯ ಸಹಜ ಸಿದ್ಧ ಶೈಲಿಯನ್ನು ನೋಡಿದರೆ ಈ ಶಾಸನದ ಕಾಲಕ್ಕಿಂತಲೂ ಹಿಂದಿನಿಂದಲೂ ತ್ರಿಪದಿಗಳು ಬಳಕೆಯಲ್ಲಿದ್ದಿರಬೇಕೆಂದು ಅನ್ನಿಸುತ್ತದೆ. ಹಾಗೂ ಪೂರ್ವದ ಹಳಗನ್ನಡವು ಹಳಗನ್ನಡಕ್ಕೆ ತಿರುಗುತ್ತಿರುವುದನ್ನು ಈ ಶಾಸನದಲ್ಲಿ ಕಾಣಬಹುದು. ಒಬ್ಬ ಕನ್ನಡ ವೀರನ ಆವೇಶಯುತವಾದ ಸ್ವಭಾವದ ಚಿತ್ರಣ ಹಾಗೂ ಭಾವ–ಭಾಷೆಗಳ ಯೋಗ್ಯ ಮಿಲನವುಳ್ಳ ಒಂದು ಚಿಕ್ಕ ಕವಿತೆಯ ಸತ್ವವೂ ಈ ಪಠ್ಯದಲ್ಲಿದೆ. ಹೀಗೆ ಅನೇಕ ದೃಷ್ಟಿಯಿಂದ ಬಾದಾಮಿಯ ಶಾಸನವು ಸ್ಮರಣೀಯವಾಗಿದೆ.

ಬಾದಾಮಿಯ ಶಾಸನದಂತೆ ಶ್ರವಣಬೆಳಗೊಳದ ಸು. ೩೦ ಶಾಸನಗಳಲ್ಲಿ ಪದ್ಯರಚನೆಯಿದೆ. "ಅವುಗಳಲ್ಲಿ ಜೈನಮುನಿಗಳ ಹಾಗೂ ಕಂತಿಯರ ವೈರಾಗ್ಯ ತಪೋಮಹಿಮೆ ಮುಂತಾದ ಗುಣಗಳ ಚಿತ್ರಣವಿದೆ. ಉದಾ. ಶ್ರವಣ ಬೆಳಗೊಳದ ೨೨. ೨೬. ೮೮ ಶಾಸನಗಳನ್ನು ನೋಡಬಹುದು. ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆರವೊಲ್ಮಂಜು ವೊಲ್ತೋಱಿ ಬೇಗಂ/ ಪಿರಿಗುಂ ಶ್ರೀ ರೂಪಲೀಲಾಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ ಎಂಬ ಪದ್ಯವು ಸೊಗಸಾದುದು."[೧೮] ಈ ಶಾಸನ ಜಿನಮುನಿಗಳನ್ನು ಸ್ತುತಿಸುವುದಕ್ಕೆ ಮಾತ್ರ ಬಳಕೆಯಾಗಿದೆ. ಮುನಿಗಳ ಮಹಿಮೆ ಜನರಿಗೆ ತಿಳಿಯಲೆಂಬ ಉದ್ದೇಶದಿಂದಲೇ ಕನ್ನಡ ಶಾಸನಗಳನ್ನು ಕೆತ್ತಿಸಿದ್ದಾರೆ. ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಕಾಲಕ್ಕೆ ಕನ್ನಡ ಬಲ್ಲ ಅನೇಕ

ವಿದ್ವಾಂಸರು ರಾಜಾಸ್ಥಾನಗಳಲ್ಲಿ ಪ್ರಭಾವಶಾಲಿಗಳಾಗಿ ಇದ್ದುದರಿಂದ ಆ ಕಾಲದ ದತ್ತಿ ಬರಹಗಳು ರಚಿತವಾಗಿವೆ. ಹಾಗೆಯೇ ಚಾಲುಕ್ಯ ಮಂಗಳೇಶನ ಬಾದಾಮಿ ವೈಷ್ಣವ ಗುಹೆಯ ಶಾಸನವೂ ಗಮನಾರ್ಹವಾಗಿದೆ.

ಸ್ವಸ್ತಿ ಶ್ರೀಮತ್ ಪ್ರಿಥಿವೀ ವಲ್ಲಭ ಮಂಗಲೀಸನಾ
ಕಲ್ಮನೆಗೆ ಇತ್ತೊಂದು ಲಂಜಿಗೇಸರಂ ದೇವರ್ಕ್ಕೆಪೂನಿಜುವ
ಮಾಲಕಾರರ್ಗೆ ಅರ್ದ್ದವಿಸದಿ ಇತ್ತೊಂದಾನಳಿವೊ
ಪಞ್ಚಮಹಾ ಪಾತಕನಂ ಏಟನೆಯ ನರಕದಾ ಪುಳುಅಕುಂ

ಈ ತಿಳಿಗನ್ನಡಕ್ಕೆ ಶಾಸನವನ್ನು ನೋಡಿದಾಗ ಈ ಶಾಸನ ರಚನೆಯ ಕಾಲಕ್ಕಾಗಲೇ ಕನ್ನಡಕ್ಕೆ ಸ್ವತಂತ್ರ ಅಸ್ತಿತ್ವವಿದ್ದು ಅದು ಕಾವ್ಯ ರಚನೆಗೆ ಬಳಕೆಯಾಗುವಂಥ ಸ್ವರೂಪವನ್ನು ಪಡೆದಿತ್ತೆಂದು ತಿಳಿಯಬಹುದು. ಅಲ್ಲದೆ ತ್ರಿಪದಿಯ ಬಳಕೆಯನ್ನು ಗಮನಿಸಿದರೆ ಸಂಸ್ಕೃತ ಛಂದಸ್ಸು ಕನ್ನಡಕ್ಕೆ ಬರುವುದಕ್ಕಿಂತ ಮೊದಲೇ ದೇಸೀ ಛಂದಸ್ಸಿನಲ್ಲಿ ಕಾವ್ಯ ನಿರ್ಮಾಣವಿತ್ತೆಂಬುದೂ ಗೊತ್ತಾಗುತ್ತದೆ. ಆದರೂ ಕನ್ನಡದಲ್ಲಿ ಮೊದಲು ಅಚ್ಚಗನ್ನಡದ ಯುಗವಾಗಿ ಹೋಗಿರಬೇಕೆಂಬ ಊಹೆಯ ಬಗ್ಗೆ ನಮಗೆ ಸಮ್ಮತವಿಲ್ಲವೆಂದೇ ಹೇಳಬೇಕಾಗಿದೆ. ಯಾಕೆಂದರೆ ಕನ್ನಡ ಭಾಷೆ ಮತ್ತು ಸಾಹಿತ್ಯಗಳು ಗ್ರಂಥಸ್ಥವಾದ ರೂಪದಲ್ಲಿ ಸಂಸ್ಕೃತದ ಸಾಕಷ್ಟು ಪ್ರಭಾವದಿಂದಲೇ ಹುಟ್ಟಿ ಬೆಳೆದವಿವೆ. ಅಚ್ಚಗನ್ನಡದ ದೇಸಿ ಹಾಗೂ ಛಂದಸ್ಸಿನ ಎಳೆಗಳನ್ನು ಕನ್ನಡದ ನೇಯ್ಗೆಯಲ್ಲಿ ಗುರುತಿಸುವುದಾದರೂ ತಮಿಳಿನ ಹಾಗೆ ಸಂಸ್ಕೃತದಿಂದ ಬಹುಶಃ ಆಲಿಪ್ತವಾದ ಗ್ರಾಂಥಿಕ ಸ್ವರೂಪವು ಕನ್ನಡಕ್ಕೆ ಇದ್ದಿತೆಂದು ತೋರುವುದಿಲ್ಲ.

ಭಾಷಾ ಮಾಧ್ಯಮದಲ್ಲಿ ಬದುಕನ್ನು ಚಿತ್ರಿಸುವ ಸಾಧನಗಳಾಗಿ ದಾಖಲೆ ಮತ್ತು ಸಾಹಿತ್ಯ ಮುಖ್ಯವಾಗುತ್ತವೆ. ಶಾಸನಗಳು ದಾಖಲೆ ವರ್ಗಕ್ಕೆ ಸೇರಿದ್ದು ಸಾಹಿತ್ಯಿಕವಾಗಿ ಬಂದ ಕಾರಣ ಕರ್ನಾಟಕದ ಶಾಸನಗಳು ದಾಖಲೆ ವರ್ಗಕ್ಕೆ ಸೇರಿದ್ದು ಸಾಹಿತ್ಯಿಕವಾಗಿ ಬಂದ ಕಾರಣ ಕರ್ನಾಟಕದ ಶಾಸನಗಳು ಸಾಹಿತ್ಯದ ದಾಖಲೆಯಾಗಿವೆ. ಶಾಸನಗಳಲ್ಲಿ ಸಾಹಿತ್ಯದ ಗುಣ ಅಧಿಕವಾದುದರಿಂದಲೇ ಅವುಗಳನ್ನು ನಮ್ಮ ಪ್ರಾಚೀನರು ಸಾಹಿತ್ಯದ ಮುಖ್ಯ ಭಾಗವೆಂದು ಪರಿಗಣಿಸಿದ್ದಾರೆ. ಶಾಸನಗಳಲ್ಲಿ ದಾನ, ಧರ್ಮ, ವೀರರ ತ್ಯಾಗ ಮುಂತಾದ ಹಲವಾರು ವಿಷಯವನ್ನೊಳಗೊಂಡಂತೆ ಇರುತ್ತವೆ. ಈ ಶಾಸನಗಳು ಬಂಡೆಗಲ್ಲು ಅಲ್ಲದೆ ತಾಮ್ರ, ಬೆಳ್ಳಿ, ಲೋಹಗಳ ಮೇಲೆ ಕೊರೆಯಲ್ಪಟ್ಟಿರುತ್ತವೆ. ಶಾಸನವೆಂಬ ಪದದ ಅರ್ಥವೇ ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಬಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹವೆಂದು ಈ ಶಾಸನದಲ್ಲಿ "ಕೊರೆಯುವ ಕ್ರಿಯೆ ಮತ್ತು ಬಹುಕಾಲ ಉಳಿಯುವ ಲೇಖನ ಸಾಮಾಗ್ರಿಗಳು ಮುಖ್ಯವಾಗಿರುತ್ತವೆ."[೧೯] ಶಾಸನಗಳು ಪ್ರಜೆಗಳು ಪಾಲಿಸಬೇಕಾದ ರಾಜನ ಆಜ್ಞೆಗಳಾಗಿರುತ್ತವೆ. ಶಾಸನಗಳು ಹಲವು ಬಗೆಯಲ್ಲಿ ಕಂಡುಬರುತ್ತವೆ. ದಾನ ಶಾಸನ, ವೀರಗಲ್ಲು, ತುರುಗೋಳ್ (ಗೋಗ್ರಹಣದ ವೀರಗಲ್ಲು) ಬೇಟೆ ವೀರರ ವೀರಗಲ್ಲು, ಊರಗಡಿ ವಿವಾದದಲ್ಲಿ ಮಡಿದವರ

ವೀರಗಲ್ಲು, ದಾರಿಗಳ್ಳರೊಡನೆ ಹೋರಾಡಿದ ವೀರಗಲ್ಲು, ಮಾಸ್ತಿಕಲ್ಲುಗಳು, ನಿಷದಿಕ್ಕು, ಗರುಡಕಲ್ಲುಗಳು ಯೂಪಶಾಸನಗಳು, ಪ್ರಶಸ್ತಿ ಶಾಸನಗಳು, ಅಂಕಿತನಾಮ ಶಾಸನಗಳು, ಜಯಪತ್ರಗಳು, ಕೂಟಶಾಸನಗಳು, ರಾಜಾಜ್ಞೆ ಮುಂತಾದವುಗಳು ಕಂಡುಬರುತ್ತವೆ.

ಶಾಸನಗಳು ರಾಜಕೀಯ, ಸಾಮಾಜಿಕ, ಧಾರ್ಮಿಕ ಜೀವನ ಹಾಗೂ ಭಾಷೆ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳಲು ಸಹಕಾರಿಯಾಗಿದ್ದು ವಿಶಿಷ್ಟ ಘಟನೆಗಳ ನಿಜದಾಖಲೆಯಾಗಿವೆ. ಐತಿಹಾಸಿಕವಾಗಿ ಎಷ್ಟು ಮುಖ್ಯವೋ ಭಾಷೆ ಮತ್ತು ಸಾಹಿತ್ಯ ವಿಷಯದ ಕುರಿತಾಗಿ ಅಷ್ಟೇ ಮುಖ್ಯವಾಗಿವೆ. ಶಾಸನಗಳು ಯಾವ ರಾಜನ ಆಳ್ವಿಕೆಯ ಕಾಲದಲ್ಲಿ ರಚನೆಯಾಗಿರಲಿ ಯಾವ ಭಾಷೆಯಲ್ಲಿ ರಚನೆಯಾಗಿರಲಿ ಅವುಗಳು ದೀರ್ಘಕಾಲ ಉಳಿದುದರಿಂದ ಯಾವುದೇ ಶಾಸನವು ಬಹುಸಂಖ್ಯಾತರಿಗೆ ಒಂದು ವಿಷಯವನ್ನು ತಲುಪಿಸುವ ಉದ್ದೇಶದ ಜೊತೆಯಲ್ಲಿ ಆ ಕಾಲದ 'ಭಾಷೆ'ಯ ಚಿತ್ರಣವನ್ನು ಸಹ ನೀಡುತ್ತಿರುತ್ತದೆ. ರಾಜಕೀಯ ಚರಿತ್ರೆಯ ರಚನೆಗೆ ಶಾಸನಗಳು ಹೇಗೆ ಅಗತ್ಯವಾದ ಬುನಾದಿಯಾಗಿವೆಯೋ ಹಾಗೆಯೇ ಭಾಷೆ ಸಾಹಿತ್ಯಗಳ ಹಳಮೆಯನ್ನು ಗೊತ್ತು ಮಾಡಲು ವಿಶ್ವಾಸರ್ಹ ಸಾಧನೆಗಳಾಗಿವೆ.

ಕನ್ನಡ ನಾಡಿನಲ್ಲಿ ಶಾಸನಗಳ ಇತಿಹಾಸದ ಪ್ರಾರಂಭವೇ ಕ್ರಿ.ಪೂ. ಕಾಲಘಟ್ಟದಲ್ಲಿ ರಚನೆಯಾಗಿರುವ ಅಶೋಕನ ಶಾಸನಗಳಿಂದ ಮಸ್ಕಿ, ಜಟಿಂಗಾ ರಾಮೇಶ್ವರ, ಬ್ರಹ್ಮಗಿರಿ ಮುಂತಾದ ಕಡೆ ಅಶೋಕನ ಶಾಸನಗಳು ಕಂಡುಬರುತ್ತವೆ. ಅಶೋಕನು ಕರ್ನಾಟಕದಲ್ಲದೆ ಭಾರತದಾದ್ಯಂತ ಹಲವಾರು ಕಡೆ ಶಾಸನಗಳನ್ನು ನಿರ್ಮಿಸಿದ್ದಾರೆ. ಆದ್ದರಿಂದಲೇ ಅವನನ್ನು ಶಾಸನಗಳ ಪಿತಾಮಹನೆಂದು ಕರೆಯುತ್ತಾರೆ. ಅಶೋಕನ ಶಾಸನಗಳ ತರುವಾಯ ಹಲ್ಮಿಡಿ ಶಾಸನವನ್ನು ಒಳಗೊಂಡಂತೆ ಕವಿರಾಜ ಮಾರ್ಗ ಕೃತಿಯ ಕಾಲಘಟ್ಟದ ವರೆಗಿನ ಶಾಸನಗಳಲ್ಲಿ ಕನ್ನಡದ ಉಲ್ಲೇಖಗಳು ದೊರೆಯುತ್ತವೆ. ಈ ಉಲ್ಲೇಖಗಳು ಕನ್ನಡ ಭಾಷಾ ಇತಿಹಾಸ ದಾಖಲೆಯಾಗಿ ಉಳಿಯುವುದರಿಂದ ಕನ್ನಡ ಭಾಷೆ ಮತ್ತು ಕನ್ನಡ ಸಂಸ್ಕೃತಿಯ ಪ್ರಾಚೀನತೆಯ ವಿಶ್ಲೇಷಣೆಗೆ ಹಾಗೂ ಮತ್ತಷ್ಟು ಮಾಹಿತಿ ದೊರೆಯಬಹುದೆಂಬ ಕುತೂಹಲಕಾರಿ ಸಂಶೋಧನೆಗೆ ಎಡೆಮಾಡಿಕೊಡುತ್ತದೆ. ಇಂತಹ ಹಲವಾರು ಜಿಜ್ಞಾಸೆಗೆ ಕಾರಣವಾಗುವ ಶಾಸನಗಳು ಮೂರ್ತರೂಪವಾಗಿ ನಮಗೆ ಲಭ್ಯವಾಗಿರುವುದು. ಶಾಸನ ನಿರ್ಮಿತಿ ಕಾಲಘಟ್ಟದಲ್ಲಿನ ಬರಹ ಕ್ರಿಯೆಯ ಕೌಶಲ್ಯತೆಯಿಂದ ಹಲವಾರು ಜಿಜ್ಞಾಸೆಗೆ ಕಾರಣವಾದ ಶಾಸನಗಳು ಸಾವಿರಾರು ವರ್ಷಗಳು ಕಳೆದರೂ ನಶಿಸದೆ ಉಳಿದಿವೆ. ಕಾರಣ ಶಾಸನಗಳ ಬರಹಕ್ಕೆ ಆಯ್ಕೆ ಮಾಡಿಕೊಂಡ ವಸ್ತುಗಳು ಘನವಸ್ತುಗಳು. ಅವುಗಳ ಆಯ್ಕೆ ಮಾಡಿಕೊಂಡು ಶಾಸನ ರಚನೆ ಮಾಡಿಕೊಂಡಿದ್ದೇ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಯ ಮೊಟ್ಟ ಮೊದಲ ತಂತ್ರಜ್ಞಾನವಾಗಿದೆ. ಸಾಹಿತ್ಯ, ಸಂಸ್ಕೃತಿ ಮೇಲೆ ಬೆಳಕು ಚೆಲ್ಲುವ ಶಾಸನಗಳನ್ನು ಕುರಿತು ಡಾ. ಚಿದಾನಂದಮೂರ್ತಿಯವರು 'ಶಾಸನಗಳು ಕನ್ನಡ ಸಾಹಿತ್ಯದ ಮೊದಲ ಲಿಖಿತ ದಾಖಲೆ' ಹಾಗೂ 'ಕನ್ನಡ ಸಾಹಿತ್ಯದ ತಲಕಾವೇರಿ' ಎಂದು ಕರೆದಿದ್ದಾರೆ.

ಇತ್ತೀಚೆಗೆ ಹೆಚ್.ಎಸ್. ಗೋಪಾಲರಾಯರು ತುಮಕೂರು ಜಿಲ್ಲೆ, ಹೊನ್ನುಡಿಕೆ ಗ್ರಾಮದ ಪಕ್ಕ ಜಲಗಾರ ದಿಬ್ಬ ಎನ್ನುವಲ್ಲಿ ಒಂದು ಶಾಸನವನ್ನು ಪತ್ತೆಹಚ್ಚಿದ್ದಾರೆ. ಹಾಗೆಯೇ ಕ್ರಿ.ಶ. ೩೫೦ರ ಕಾಲದ ಒಂದು ಶಾಸನ ತಾಳಗುಂದದಲ್ಲಿ ಪತ್ತೆಯಾಗಿದೆ. ವಿದ್ವಾಂಸರು ಈ ಎರಡು ಶಾಸನಗಳ ಪಠ್ಯವನ್ನು ನೋಡಿ ಇವು ಕನ್ನಡ ಭಾಷೆಯ ಪ್ರಾಚೀನತೆಯನ್ನು ತಿಳಿಸುವಂತಹ ಶಾಸನಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಶಾಸನಗಳಲ್ಲಿನ ಲಿಪಿ, ಬರಹದ ಪ್ರಾಚೀನತೆಯ 'ಅಧಿಕೃತತೆ'ಯನ್ನು ಸಾರ್ವಜನಿಕವಾಗಿ ಮಾಡದಿರುವುದು ಒಗಟಾಗಿಯೇ ಉಳಿದಿದೆ.

ಕ್ರಿ.ಶ. ೭ನೆಯ ಶತಮಾನದಲ್ಲಿ ಸಾಹಿತ್ಯ ಗುಣವುಳ್ಳ ಶಾಸನಗಳು ಬಾದಾಮಿ ಮತ್ತು ಶ್ರವಣಬೆಳಗೊಳದಲ್ಲಿ ಕಂಡುಬಂದಿದ್ದು, ನಂತರದ ದಿನಗಳಲ್ಲಿ ಬಾದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲದಲ್ಲಿ ಹಲವಾರು ಶಾಸನಗಳು ರಚನೆಯಾಗಿವೆ. ಈ ಶಾಸನಗಳು ಚಿಕ್ಕವು ಹಾಗೂ ಸರಳವಾದವು. ವ್ಯವಹಾರಿಕವಾದವು. ಹಲ್ಮಿಡಿ ಶಾಸನದಂತೆ ಯಾವುದೇ ಕಾವ್ಯಾಂಶವಿಲ್ಲ. ಹಾಗೂ ೯ನೆಯ ಶತಮಾನದ ಕಾಲಘಟ್ಟದವರೆಗೂ ಯಾವುದೇ ಸಾಹಿತ್ಯ ಕೃತಿಯು ಲಭ್ಯವಾಗಿಲ್ಲ. ಲಭ್ಯವಾಗಿದ್ದರೆ ಸಾಹಿತ್ಯ ಚರಿತ್ರೆಯ ಇತಿಹಾಸ ಇನ್ನೂ ಹಿಂದಕ್ಕೆ ಹೋಗುತ್ತಿತ್ತು.

ನಮಗೆ ದೊರೆತಿರುವ ಮೊಟ್ಟಮೊದಲ ಕೃತಿಯೆಂದರೆ ಕ್ರಿ.ಶ. ೮೫೦ರ ಕಾಲಘಟ್ಟದಲ್ಲಿ ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗ ಆಸ್ಥಾನದ ಕವಿ ಶ್ರೀವಿಜಯನಿಂದ ರಚಿತವಾದ 'ಕವಿರಾಜಮಾರ್ಗ'. ಈ ಕೃತಿಯು ಕಂದಪದ್ಯದಲ್ಲಿ ರಚಿತವಾಗಿರುವಂತಹ ಒಂದು ಲಾಕ್ಷಣಿಕ ಗ್ರಂಥ. ಕನ್ನಡ ಸಂದರ್ಭದಲ್ಲಿನ ಬಹಳ ಮುಖ್ಯವಾದ ಕೃತಿ. ಕನ್ನಡ ನಾಡಿನ ಎಲ್ಲೆಯ ಬಗ್ಗೆ, ಕನ್ನಡ ಜನಪರ ಬಗ್ಗೆ, ಕನ್ನಡ ಜನತೆಯ ಕಾವ್ಯ ರಚನಾ ಕೌಶಲ್ಯದ ಬಗ್ಗೆ, ಕನ್ನಡ ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿರುವಂತಹ ಹಿಂದಿನ ಕವಿಗಳ ಬಗ್ಗೆ, ಕನ್ನಡ ಸಾಹಿತ್ಯ ಪ್ರಕಾರಗಳ ಬಗ್ಗೆ ಹೀಗೆ ಹಲವಾರು ಬಗೆಯ(ಲ್ಲಿ) ವಿಷಯವನ್ನು ತಿಳಿಸುವಂತಹ ಅಮೂಲ್ಯವಾದ ಕೃತಿಯಾಗಿದೆ. ಹಲ್ಮಿಡಿ ಶಾಸನ ಹಾಗೂ ಕವಿರಾಜ ಮಾರ್ಗ ಕೃತಿಯ ರಚನೆಯ ಕಾಲಕ್ಕೆ ಕನ್ನಡ ಭಾಷೆಯ ಸಾಹಿತ್ಯ ಬರಹದ ಕ್ರಿಯೆಯಲ್ಲಿ ಎರಡು ತಾಂತ್ರಿಕ ಬೆಳವಣಿಗೆಗಳು ಕಂಡುಬರುವುದನ್ನು ಗಮನಿಸಬಹುದಾಗಿದೆ. ೧. ಬರಹಕ್ಕೆ ಬಳಕೆಯಾದ ಭೌತಿಕ ಸಾಮಾಗ್ರಿಗಳ ಬದಲಾವಣೆ ಅಥವಾ ಪಲ್ಲಟ. ೨. ಸಾಹಿತ್ಯ ರಚನೆಯಲ್ಲಿ ವಿವಿಧ ರೀತಿಯ ಬರಹ ಪ್ರಕ್ರಿಯೆಗಳು. ಮೊದಲನೆಯ ವಿಷಯಕ್ಕೆ ಸಂಬಂಧಿಸಿದಂತೆ ಕ್ರಿ.ಪೂರ್ವ ಕಾಲದಲ್ಲಿ ರಚನೆಯಾದ ಅಶೋಕನ ಶಾಸನ ಹಾಗೂ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನ, ಕೆಲಗುಂದಿಯ ರವಿವರ್ಮನ ಶಾಸನ ಮುಂದುವರೆದು ಹಲವಾರು ಶಾಸನಗಳು ಕ್ರಿ.ಶ. ೮೫೦ರ ವರೆಗೆ ದೊರೆಯುತ್ತವೆ. ಈ ಶಾಸನಗಳ ಬರವಣಿಗೆಗೆ ಉಪಯೋಗಿಸಿರುವಂತಹ ಸಾಮಾಗ್ರಿಗಳು ಗಟ್ಟಿ ಸಾಮಾಗ್ರಿಗಳು. ಶಿಲೆ ಹಾಗೂ ಲೋಹ ಮುಂತಾದವು. ಈ ಸಾಮಾಗ್ರಿಗಳ ಬಳಕೆಯ ಉದ್ದೇಶ ಬರಹವು ಹಲವಾರು ವರ್ಷ ಅಥವಾ ಮುಂದಿನ ಪೀಳಿಗೆಯವರೆಗೂ ನಶಿಸದೆ ಇರಬೇಕು ಎಂಬುದು. ಆದರೆ ಶಿಲೆ ಅಥವಾ ಕಲ್ಲು ಬರಹಕ್ಕೆ ಯೋಗ್ಯವಾಗಿದ್ದರೂ ಕೂಡ ಸ್ಥಳಾಂತರಿಸುವುದು ಕಷ್ಟ. ಹಾಗೂ

ಒಬ್ಬರಿಂದ ಮತ್ತೊಬ್ಬರಿಗೆ ವರ್ಗಾಯಿಸಲು ಕೂಡ ಬರುವುದಿಲ್ಲ. ಅವುಗಳ ಮೂಲ ನೆಲೆಗೆ ಹೋಗಿ ವಿಷಯವನ್ನು ಗ್ರಹಿಸಬೇಕಾಗುತ್ತದೆ. ಇದರಿಂದ ಹಲವು ಮಂದಿಗೆ ಸಾಹಿತ್ಯದ ಜ್ಞಾನ ಲಭ್ಯವಾಗುವುದು ತುಂಬಾ ಕಡಿಮೆ. ಹಾಗಾಗಿ ಬರಹದ ಭೌತಿಕ ಸಾಮಾಗ್ರಿಗಳು ಮತ್ತೊಂದು ಸ್ವರೂಪಕ್ಕೆ ಪಲ್ಲಟಗೊಂಡಿತು. ಬರಹ ಕ್ರಿಯೆಗೆ ಬಳಕೆಯಾದ ಮತ್ತೊಂದು ಸಾಮಾಗ್ರಿಯೇ ತಾಳೆಗರಿ. ತಾಳೆಗರಿಗಳು ತೆಳುವಾಗಿದ್ದು ಹಾಗೂ ಹಗುರವಾಗಿದ್ದವು. ತಾಳೆಗರಿಗಳ ಮೇಲೆ ಕಂಠದಿಂದ ಕೊರೆಯುವಾಗ ಅಕ್ಷರಗಳು ದುಂಡಾಗಿ ಮೂಡಿ ಬರುತ್ತಿದ್ದು ಅಂದವಾಗಿ ಕಾಣುತ್ತಿದ್ದವು. ಇದರಿಂದ ಕನ್ನಡ ಲಿಪಿಯು ದಿನದಿಂದ ದಿನಕ್ಕೆ ವಿಕಾಸಗೊಳ್ಳುವುದಕ್ಕೂ ಜೊತೆಗೆ ಓದುಗ ವಲಯವನ್ನು ಆಕರ್ಷಿಸುವುದಕ್ಕೂ ಅನುಕೂಲವಾಯಿತು. ತಾಳೆಗರಿ ಅಥವಾ ಇತರ ಯಾವುದೇ ಹಗುರವಾದ ವಸ್ತುಗಳ ಮೇಲೆ ಬರವಣಿಗೆ ಮಾಡುವುದರಿಂದ ಅದನ್ನು ಓದಲು ಬಹು ಮಂದಿಗೆ ವರ್ಗಾಯಿಸಬಹುದಾದಂತಹ ಸಂದರ್ಭ ಈ ಅವಧಿಯಲ್ಲಿ ನಡೆದಿದೆ. ಹಾಗೆಯೇ ರಚನೆಯಾದ ಸಾಹಿತ್ಯ ಕೃತಿಯನ್ನು ಹಲವು ಪ್ರತಿಗಳಾಗಿ ಮಾಡುವ ಲಿಪಿಕರಣ ಕಾರ್ಯ ಕವಿರಾಜ ಮಾರ್ಗ ಕೃತಿಯು ರಚನೆಯಾದ ನಂತರ ನಡೆಯಿತೆನ್ನಬಹುದು. ಈ ಎಲ್ಲಾ ಅಂಶಗಳು ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಕಾರಣವಾದ ಬರಹದ ಭೌತಿಕ ಸಾಮಾಗ್ರಿಗಳ ಬದಲಾವಣೆ ಅಥವಾ ಪಲ್ಲಟ. ೨. ಸಾಹಿತ್ಯದ ವಿವಿಧ ರಚನೆಯಲ್ಲಿ ವಿವಿಧ ರೀತಿಯ ಬರಹ ಪ್ರಕ್ರಿಯೆಗಳು. ಕನ್ನಡ ಭಾಷೆ ಮತ್ತು ಸಾಹಿತ್ಯದ ಬರವಣಿಗೆಯ ವೈಧಾನಿಕತೆಯ ಬೆಳವಣಿಗೆಯ ಹಾದಿಯಲ್ಲಿ ಈಗಾಗಲೇ ಹಲ್ಮಿಡಿ ಶಾಸನದಲ್ಲಿನ ಗದ್ಯ ಹಾಗೂ ಬಾದಾಮಿ ಶಾಸನದಲ್ಲಿನ ಪದ್ಯದ ಪ್ರಕಾರಗಳು ಕಂಡುಬಂದಿವೆ. ಅಚ್ಚಗನ್ನಡ ಛಂದಸ್ಸು ಎಂದು ಹೆಸರಾದ ತ್ರಿಪದಿಯು ೭ನೇ ಶತಮಾನಕ್ಕಾಗಲೇ ಕಂಡುಬಂದಿರುವುದು ಆ ಕಾಲಘಟ್ಟದಲ್ಲಿ ಛಂದಸ್ಸಿಗನುಗುಣವಾಗಿ ಸಾಹಿತ್ಯ ರಚನೆ ಎಂಬ ನಿಯಮ ಸಾರ್ವತ್ರಿಕವಾಗಿರಬೇಕು. ಆದುದರಿಂದಲೇ ಕನ್ನಡ ಸಂದರ್ಭದ ಅಂಶಗಣಾನ್ವಿತ ತ್ರಿಪದಿಯು ರಚಿತಗೊಂಡಿದೆ. ಹಲ್ಮಿಡಿ ಶಾಸನದ ಗದ್ಯ ಹಾಗೂ ಬಾದಾಮಿ ಶಾಸನದ ಪದ್ಯ ಸಾಹಿತ್ಯ ರಚನೆಯಲ್ಲಿ ಬಳಕೆಯಾದ ಬರಹ ವೈಧಾನಿಕತೆಯ ಮೊಟ್ಟ ಮೊದಲ ಬರಹದ ವೈಧಾನಿಕತೆಯ ಪ್ರಕ್ರಿಯೆ. ಈ ಬರಹದ ವೈಧಾನಿಕತೆಯೇ ಮುಂದೆ ಸಾಹಿತ್ಯ ರಚನೆಗೆ ಪ್ರೇರಕವಾದುದಾಗಿದೆ. ಹಾಗೂ ಸಾಹಿತ್ಯ ಬೆಳವಣಿಗೆಗೆ ಮುಖ್ಯವಾದ ತಾಂತ್ರಿಕ ಕೊಡುಗೆಯಾಗಿದೆ. ಲಭ್ಯವಾಗಿರುವ ಕವಿರಾಜಮಾರ್ಗ ಕೃತಿಯ ವೇಳೆಗಾಗಲೇ ಕನ್ನಡ ಭಾಷೆ ಮತ್ತು ಸಾಹಿತ್ಯ ರಾಜಕೀಯ ಮತ್ತು ಧರ್ಮದ ತೆಕ್ಕೆಗೆ ಸಿಲುಕಿಕೊಂಡಿತ್ತು. ಆದರೂ ನಿಧಾನವಾಗಿ ತನ್ನ ಎಲ್ಲೆಯನ್ನು ಹಂತಹಂತವಾಗಿ ವಿಸ್ತರಿಸಿತು. ರಾಜಕೀಯ ಮತ್ತು ಧರ್ಮದ ತೆಕ್ಕೆಗೆ ಸಿಲುಕಿಕೊಂಡ ಉದಾಹರಣೆಯಾಗಿ 'ಕವಿರಾಜಮಾರ್ಗ' ಕೃತಿಯೇ ಸಾಕ್ಷಿ. ಕನ್ನಡ ಸಂದರ್ಭದ ಹಲವಾರು ವಿಷಯಗಳನ್ನು ಹೇಳುವ ಕವಿರಾಜಮಾರ್ಗಕಾರ ತನ್ನ ಕಾವ್ಯ ರಚನೆಗೆ ಆಯ್ಕೆಮಾಡಿಕೊಂಡ ಸಾಹಿತ್ಯ ಪ್ರಕಾರ ಹಾಗೂ ಛಂದಸ್ಸು ದೇಶಿ ಅಥವಾ ಅಚ್ಚಗನ್ನಡದ ಯಾವ ಛಂದಸ್ಸು ಹಾಗೂ ಸಾಹಿತ್ಯ ಪ್ರಕಾರವಲ್ಲದ ಪ್ರಾಕೃತ ಮೂಲದ ಮಾತ್ರ

ಗಣ ಛಂದಸ್ಸುದ ಕಂದ ಪದ್ಯದಲ್ಲಿ. ಕಾರಣ ಶ್ರೀ ವಿಜಯ ಜೈನನಾಗಿದ್ದುದು ಧಾರ್ಮಿಕವಾಗಿ ರಾಜಕೀಯವಾಗಿ ಎಷ್ಟೇ ಪ್ರಭಾವವಿದ್ದರೂ ಕನ್ನಡ ಭಾಷೆ ತನ್ನ ಅಸ್ಮಿತೆಯನ್ನು ಉಳಿಸಿಕೊಂಡೆ ಸಾಗತೊಡಗಿತು. ಕವಿರಾಜಮಾರ್ಗಕಾರನು ತಾನು ಸಾಹಿತ್ಯ ರಚನೆಗೆ ಬಳಸಿಕೊಂಡಿರುವ ಕಂದಪದ್ಯ,

"ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದ ವಿಷಯ ವಿಶೇಷಂ"[೨೦]

ತ್ರಿಪದಿಯ ನಂತರದ ಸ್ಥಾನ ಕಂದಕ್ಕಿದೆ. ಬಾದಾಮಿಯ ಶಾಸನ ತ್ರಿಪದಿಗೆ ಜನ್ಮ ನೀಡಿದರೆ ಗಂಗ ಶ್ರೀಪುರುಷನ ಕಾಲದ (೭೬೬-೮೮) ಸಂಸ್ಕೃತ ಮಿಶ್ರಿತವಾದ ಶಾಸನ ಕಂದದಲ್ಲಿದೆ. ಈ ಕಂದಗಳು ಅತ್ಯಂತ ಪ್ರಾಚೀನ ಕಾಲದವು. ಅದೇ ಕನ್ನಡದ ಪ್ರಥಮ ಕಂದಗಳಾಗಿವೆ ಎಂದು ಡಾ. ಎಂ.ಎಂ. ಕಲಬುರ್ಗಿಯವರು ತಮ್ಮ ಮಹಾಪ್ರಬಂಧದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಈ ಕಂದ ಸ್ವರೂಪ ಬಳಕೆಗೆ ಬರಲು ಇದು ಆ ಕಾಲಕ್ಕಾಗಲೇ ಕವಿಜನ ಪ್ರಿಯವೂ, ಶಾಸ್ತ್ರ ಕವಿಜನಪ್ರಿಯವೂ ಆಗಿರಬಹುದು. ಆದರೂ ಕನ್ನಡದ ಗತಿಗೆ ಹೆಚ್ಚಿಗೆ ಹೊಂದಿಕೊಂಡು ಹೋಗುವ ಅಂಶಗಳು ಇರುವುದರಿಂದ ಕವಿರಾಜಮಾರ್ಗಕಾರ ಬಳಸಿದ ಈ ಕಂದಪದ್ಯ ಮುಂದೆ ಹಲವಾರು ಕವಿಗಳು ತಮ್ಮ ಸಾಹಿತ್ಯ ರಚನೆಗೆ ಕಂದಪದ್ಯವನ್ನು ಬಳಸಿಕೊಳ್ಳಲು ಮಾದರಿಯಾಯಿತು. ಕೆಲವೊಂದು ಕೃತಿಗಳು ಕಂದಪದ್ಯದಲ್ಲಿಯೇ ರಚನೆಯಾದಿವು. ಕನ್ನಡಕ್ಕೆ ಆದಿ ಕವಿಯೆಂದು ಹೆಸರಾದ ಪಂಪನ ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತದ ಒಟ್ಟು ೧೬೧೦ ಪದ್ಯಗಳಲ್ಲಿ ೭೩೮ ಎಂದರೆ ಸುಮಾರು ಅರ್ಧದಷ್ಟು ಪದ್ಯಗಳು, ಕಂದಪದ್ಯಗಳು, ರನ್ನನ ಅಜಿತ ತೀರ್ಥಂಕರ ಪುರಾಣದ ಪ್ರಥಮಾಶ್ವಾಸದ ೯೬ ಪದ್ಯಗಳಲ್ಲಿ ೬೦ ಎಂದರೆ ಮೂರರಲ್ಲಿ ಎರಡು ಪಾಲು ಕಂದಪದ್ಯಗಳು. ಪೊನ್ನನ ಶಾಂತಿಪುರಾಣದಲ್ಲಿ ೧೧೯೯ ಕಂದಪದ್ಯಗಳು ಹಾಗೆಯೇ ಕೆಲವು ಕಾವ್ಯಗಳು ಕಂದಪದ್ಯದಲ್ಲಿಯೇ ರಚಿತವಾಗಿವೆ. ಉದಾಹರಣೆಗೆ ಜನ್ನನ ಯಶೋಧರ ಚರಿತೆ, ಕನ್ನಡದ ಪ್ರಮುಖ ಲಾಕ್ಷಣ ಅಥವಾ ಶಾಸ್ತ್ರ ಕೃತಿಗಳಾದ ನಾಗವರ್ಮನ ಛಂದೋಂಬುದಿ, ಕಾವ್ಯಾವಲೋಕನ, ಕೇಶಿರಾಜನ ಶಬ್ದಮಣಿದರ್ಪಣ ಇವುಗಳು ಕಂದಪದ್ಯದಲ್ಲಿಯೇ ರಚನೆಯಾಗಿವೆ. ಹಾಗೂ ಇತರ ಚಂಪೂ ಕೃತಿಗಳಲ್ಲಿ ಕಂದವು ಬಳಕೆಗೊಂಡಿದೆ. ಸಾಹಿತ್ಯ ರಚನೆಯಲ್ಲಿ ಇಷ್ಟೊಂದು ರೀತಿಯಲ್ಲಿ ಕಂದವು ಬಳಕೆಗೊಂಡಿದೆ ಎಂದರೆ ಕಂದವು ಮಾತ್ರ ಬಂಧವಾಗಿದ್ದರೂ ಕನ್ನಡಕ್ಕೆ ಹೆಚ್ಚಾಗಿ ಹೊಂದಿಕೊಂಡು ಇದಕ್ಕೆ ಮುಖ್ಯ ಕಾರಣವಿರಬೇಕು. ಅದರ ತ್ವರಿತ ಗತಿ ಕಥೆಯನ್ನು ಮುಂದುವರಿಸಿಕೊಂಡು ಹೋಗಲು ತುಂಬಾ ಅನುಕೂಲ ಹಾಗೂ ಅದರ ರಚನೆ ಸುಲಭ. ಏಕೆಂದರೆ ಅದರ ಗಾತ್ರ ಕಿರಿದು, ಅದರ ನಾದ ಕಿವಿಯಲ್ಲಿ ಬಹುಬೇಗ ನಿಲ್ಲುತ್ತದೆ. ಡಿ.ಎಸ್. ಕರ್ಕಿಯವರು "ಕಂದ ನದಿಯಂತೆ ತುಂಬಿ ಗಂಭೀರವಾಗಿ

ಪ್ರವಹಿಸುವ ಛಂದೋಲಯವಲ್ಲ, ಚಿಲುಮೆಯಂತೆ ಚಿಮ್ಮುವ ಲಯ. ಚಿಕ್ಕ ಚಿಕ್ಕ ಭಾವಗಳನ್ನು ಚೊಕ್ಕ ಚೊಕ್ಕಾಗಿ ಚಿತ್ರಿಸಬಲ್ಲದು; ಉಪಮೆ ಮತ್ತು ದೃಷ್ಟಾಂತಗಳಿಂದ ಭಾವವನ್ನು ಮಿಂಚಿನಂತೆ ಥಳ್ಳನೆ ಬೆಳಗಬಲ್ಲದು. ಹಸಿ ಗೋಡೆಯಲ್ಲಿ ಹರಳು ನೆಟ್ಟಂತೆ ಅದು ಪರಿಣಾಮ ಬೀರುತ್ತದೆ"[೨೧] ಎಂದು ಅದರ ಮಹತ್ವವನ್ನು ತಮ್ಮ ಕೃತಿಯಾದ ಕನ್ನಡ ಛಂದೋ ವಿಕಾಸದಲ್ಲಿ ತಿಳಿಸಿದ್ದಾರೆ. ಜನಪದ ಸಾಹಿತ್ಯದಲ್ಲಿ ತ್ರಿಪದಿಗೆ ಸಂದ ಸ್ಥಾನ ಪಾಂಡಿತ್ಯ ಪ್ರಧಾನ ಕಾವ್ಯದಲ್ಲಿ ಕಂದಕ್ಕೆ ಸಂದಿದೆ ಎನ್ನಬಹುದಾಗಿದೆ. ಅದೇ ರೀತಿಯಾಗಿ ಮುಂದಿನ ತಲೆಮಾರಿನವರು ಸಾಹಿತ್ಯ ರಚಿಸಲು ಸಹ ಈ ಕೃತಿಯೇ ಪ್ರೇರಣೆ ಎನ್ನಬಹುದಾಗಿದೆ. ಈ ಕೃತಿಯಲ್ಲಿ ತಿಳಿಸಿರುವಂತಹ ಸಾಹಿತ್ಯಕ್ಕೆ ಸಂಬಂಧಪಟ್ಟ ವಿಷಯಗಳು ಅತೀ ಮುಖ್ಯವೂ ಆಗಿರುವುದರಿಂದ ಇದು ಮುಂದೆ ತ್ವರಿತವಾಗಿ ಹಲವು ಪ್ರತಿಗಳಾಗಿ ಮಾರ್ಪಟ್ಟಿರಬಹುದಾಗಿದೆ.

ಕವಿರಾಜಮಾರ್ಗ ಕಾಲದ ಮತ್ತೊಂದು ಕೊಡುಗೆಯೆಂದರೆ ನಮಗೆ ಲಭ್ಯವಾಗಿರುವ ಶಿವಕೋಟ್ಯಾಚಾರ್ಯ ವಿರಚಿತ ಕ್ರಿ.ಶ. ೯೨೦ ಸುಮಾರಿಗೆ ರಚಿತವಾದ 'ಗದ್ಯ ಕೃತಿಯಾದ ವಡ್ಡಾರಾಧನೆ' ಹತ್ತೊಂಬತ್ತು ಜೈನ ಯತಿಗಳ ಕಥೆ. ಇದು ಜೈನ ಧಾರ್ಮಿಕ ಕೃತಿ. ಹತ್ತೊಂಬತ್ತು ಜನ ಜೈನ ಯತಿಗಳ ಕಥೆಯನ್ನು ಒಳಗೊಂಡಿರುವ ಗದ್ಯ ಪ್ರಕಾರದಲ್ಲಿ ರಚನೆಯಾಗಿರುವ ವಡ್ಡಾರಾಧನೆ ಕೃತಿ ಕನ್ನಡ ಸಾಹಿತ್ಯದ ಅಮೂಲ್ಯ ಕೊಡುಗೆ. ಕನ್ನಡ ದೇಸಿಗೆ ಪ್ರಾಧಾನ್ಯತೆಯನ್ನು ಕೊಟ್ಟಿರುವಂತಹ ಕೃತಿಯಾಗಿದೆ. ಆದರೂ ಸಂಸ್ಕೃತವನ್ನು ತ್ಯಾಗ ಮಾಡದ ದೇಸಿ ಮಾರ್ಗಗಳ ಸಮನ್ವಯ ಕಂಡುಬರುತ್ತದೆ. 'ವಡ್ಡಾರಾಧನೆ'ಯ ಗದ್ಯಶೈಲಿ ಕನ್ನಡ ಸಾಹಿತ್ಯದಲ್ಲಿ ಅಪೂರ್ವವಾಗಿದೆ. ಈ ಗದ್ಯ ಪ್ರಕಾರ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಕಂಡುಬಂದಂತಹ ಪ್ರಮುಖ 'ಬರಹ ಪ್ರಕ್ರಿಯೆ'ಯಾಗಿದೆ. ಬರಹ ಅಥವಾ ಬರವಣಿಗೆ ಇತಿಹಾಸ ಕುರಿತಂತೆ 'ಗದ್ಯ' ಮೊದಲೋ ಪದ್ಯ ಮೊದಲೋ ಎಂದು ಹೇಳುವುದು ಕಷ್ಟ, ಹಲ್ಮಿಡಿ ಶಾಸನ ಗದ್ಯದಲ್ಲಿದ್ದರೆ ನಂತರದ ಶಾಸನಗಳು ಪದ್ಯದಲ್ಲೂ ಇವೆ. ಕವಿರಾಜಮಾರ್ಗಕಾರನ ಕಾಲಕ್ಕಾಗಲೇ ಸಾಹಿತ್ಯದ ಬರವಣಿಗೆ ಗದ್ಯ ಮತ್ತು ಪದ್ಯ ಎರಡು ಪ್ರಕಾರಗಳಲ್ಲಿಯೂ ಇತ್ತೆಂದು ಕವಿರಾಜಮಾರ್ಗಕಾರ ತಿಳಿಸಿದ್ದಾನೆ. "ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿಗಳ್"[೨೨] ಎಂಬ ಪ್ರಸಿದ್ಧ ಗದ್ಯಕಾರರ ಹೆಸರುಗಳನ್ನು ತಿಳಿಸಿದ್ದಾನೆ. "ವಿಮಳೋದಯನ ಕೃತಿಯು ಪ್ರಶ್ನೋತ್ತರ ರತ್ನಮಾಲಿಕೆಯೆಂದಕ(ರ್ತನೇ) ಗೋವಿಂದ ಪೈಗಳು ಹೇಳಿದ್ದಾರೆ. ನಾಗಾರ್ಜುನ ಎಂಬುವನು 'ನಾಗಾರ್ಜುನಕಕ್ಷಪುಟ' ಎಂಬ ವೈದ್ಯ ಗ್ರಂಥವನ್ನು ರಚಿಸಿರುವನೆಂಬ ಸಂಭವವಿದೆ. ಜಯಬಂಧುವಿನ ಕೃತಿಯ ತಿಳಿದಿಲ್ಲ. ದುರ್ವಿನೀತನು ಭಾರವೀಯ 'ಕಿರತಾರ್ಜುನೀಯ' ಕಾವ್ಯದ ೧೫ನೆಯ ಸರ್ಗದ ಟೀಕಾಕಾರ ಹಾಗೂ ಬೃಹತ್ ಕಥೆಯನ್ನು 'ವಡ್ಡಕಥಾ' ಎಂಬ ಹೆಸರಿನಲ್ಲಿ ಕನ್ನಡಿಸಿರಬೇಕೆಂದೂ ತಿಳಿದುಬರುತ್ತದೆ."[೨೩] ಆದರೂ ಈ ಮೂವರು ಗದ್ಯಕಾರರ ಗದ್ಯ ಕೃತಿಗಳು ಲಭ್ಯವಾಗಿಲ್ಲ. ವಡ್ಡಾರಾಧನೆಯೊಂದೆ ಗದ್ಯದಲ್ಲಿ ಲಭ್ಯವಿರುವ ಮೊದಲ ಕೃತಿ. ವಡ್ಡಾರಾಧನೆ ಕೃತಿಯನ್ನು ಗಮನಿಸಿದರೆ 'ಕಥನಕಲೆ'ಗೆ ಗದ್ಯ ತುಂಬಾ ಮುಖ್ಯವಾದುದಾಗಿದೆ. ಕಥೆಯ

ನಿರೂಪಣೆ ಸಾರಾಗವಾಗಿ ಸಾಗಲು ಗದ್ಯ ತುಂಬಾ ಸಹಕಾರಿಯಾಗಿದೆ. ಈ ಕೃತಿಯಲ್ಲಿ ಅಚ್ಚಗನ್ನಡದೊಲವು ನಿಚ್ಚಳವಾಗಿದೆ. ಕನ್ನಡ ದೇಸಿ ಹಳಗನ್ನಡದ ವ್ಯಾಕರಣ ಪ್ರಕ್ರಿಯೆಯಿಂದ ಮಾರ್ಗವಾಗಿ ನಡುನಡುವೆ ಪೂರ್ವದ ಹಳಗನ್ನಡದ ಪ್ರಯೋಗದಿಂದ ಪ್ರಾಚೀನ ಕಳೆಯಿಂದ ಕೂಡಿ ಇರುವುದೇ ಈ ಗದ್ಯದ ವೈಶಿಷ್ಟ್ಯ. ಗದ್ಯಶೈಲಿಯು ಉತ್ತಮ ಸಂವಾದ ಮಾಡುವುದಕ್ಕೆ ಸಹ ಅನುಕೂಲವಾಗಿದೆ. ದೇಸೀಯತೆಯ ಅಭಿವ್ಯಕ್ತಿಗೆ ಗದ್ಯವು ಪ್ರಮುಖ ಸಾಹಿತ್ಯ ಪ್ರಕಾರವಾಗಿದೆ. ಉದಾ. "ನಮ್ಮ ಮಗಳಿಗೆ ನಿಮ್ಮ ವ್ರತಗಳನ್ನು ಏಕೆ ಕೊಟ್ಟಿರಿ" ಎಂದು ಬ್ರಾಹ್ಮಣ ಕೇಳಲು ಅವನು "ನಿಮ್ಮ ಮಗಳಿಗೆ ನಮ್ಮ ವ್ರತಗಳನ್ನು ನಾವು ಕೊಟ್ಟರೆ ನಿನಗೆ ಬೇನೆ ಮೂಡಿತ್ತೆ" ಎಂದನಂತೆ. ಇಲ್ಲಿ ಬೇನೆ ಮೂಡಿತ್ತೆ ಎಂಬ ದೇಸಿಯ ಬಳಕೆ ಎಷ್ಟು ಯತಾರ್ಥವಾಗಿದೆ. ಇಂದಿಗೂ ಬೇನೆಯಾಯಿತೇ, ಬ್ಯಾನಿ ಆತೇ ಎಂಬಲ್ಲಿ ವಿಶಿಷ್ಟಾರ್ಥದಲ್ಲಿ ಉಳಿದುಕೊಂಡಿದೆ. ಗದ್ಯವು ಶಕ್ತಿಯುತವೂ ಅರ್ಥವಾಹಿಯೂ ಆಗಿ ತನ್ನ ಬಲವಾದ ಎಳೆತದಿಂದ ಓದುಗನನ್ನು ಮುಂದೆ ಮುಂದೆ ಕರೆದೊಯ್ಯುತ್ತದೆ. ಅದು ಅಲ್ಲಲ್ಲಿ ಚಿತ್ರಗಳನ್ನು ಕೊರೆಯುತ್ತದೆ. ಪಾತ್ರಗಳನ್ನು ಅರಳಿಸುತ್ತದೆ. ಧರ್ಮವನ್ನು ಮನದಲ್ಲಿ ಅಚ್ಚೊತ್ತುವಂತೆ ಸಾರುತ್ತದೆ. ಈ ಎಲ್ಲಾ ಅಂಶಗಳು ವಡ್ಡಾರಾಧನೆಯಲ್ಲಿನ ಸಾಹಿತ್ಯದಲ್ಲಿ ಕಂಡುಬರುತ್ತವೆ. ಆದುದರಿಂದ 'ವಡ್ಡಾರಾಧನೆ' ಕೃತಿಯು ತನ್ನ ಯುಗದಲ್ಲಿಯ ಮೇಲಾದ ಗದ್ಯ ಗ್ರಂಥವಲ್ಲದೆ ಇಡಿಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಚಿರಂತನವಾಗಿ ನೆನೆಯತಕ್ಕ ವೈಶಿಷ್ಟ್ಯ ಪೂರ್ಣವಾದ ಕೃತಿಯಾಗಿದೆ. ಶಿವಕೋಟ್ಯಾಚಾರ್ಯನು ಕನ್ನಡಕ್ಕೆ ನೀಡಿದ ಅಮೂಲ್ಯ ಕೃತಿಯಾಗಿದೆ. ಹಾಗೂ ಮಾದರಿ ಕೃತಿಯಾಗಿದೆ. ಕನ್ನಡ ನುಡಿಯ ಬೆಳವಣಿಗೆಗೆ ಮುಂದೆಯೂ ನೆರವಾಗಬಲ್ಲದಾಗಿದೆ.

ಶಿವಕೋಟ್ಯಾಚಾರ್ಯನಿಂದ ಪ್ರಾರಂಭವಾದ 'ಗದ್ಯ ಸಾಹಿತ್ಯ ಬರಹ' ಮುಂದಿನ ಮುದ್ದಣನ ಕಾಲದವರೆಗೂ ಮುಂದುವರೆಯಿತು. ಹತ್ತನೆಯ ಶತಮಾನದ ಪಂಪಯುಗದಲ್ಲಿಯ 'ಚಂಪೂ' ಸಾಹಿತ್ಯ ಪ್ರಕಾರದಲ್ಲಿಯೂ ಗದ್ಯದ ಬಳಕೆ ತುಂಬಾ ಬಳಕೆಯಾಗಿದೆ. ನಿರ್ದಿಷ್ಟವಾದ ಗದ್ಯದಲ್ಲಿಯೇ ಹಲವಾರು ಕೃತಿಗಳು ರಚನೆಯಾಗಿವೆ. ಕ್ರಿ.ಶ. ೯೭೫ರಲ್ಲಿ ರಚಿತವಾಗಿರುವ ಚಾವುಂಡರಾಯನಿಂದ ರಚಿತವಾದ 'ಚಾವುಂಡರಾಯ ಪುರಾಣ' ಕ್ರಿ.ಶ. ೧೩೦೦ ಕಾಲಘಟ್ಟದಲ್ಲಿ ಹಸ್ತಿಮಲ್ಲನು ರಚಿಸಿರುವ ಪೂರ್ವ ಪುರಾಣ, ಕ್ರಿ.ಶ.ಸು. ಮೂರು ೧೫೦೦ರ ಕಾಲಘಟ್ಟದಲ್ಲಿ ನಿಜಗುಣ ಶಿವಯೋಗಿ ವಿರಚಿತ 'ಪರಮಾರ್ಥ ಪ್ರಕಾಶಿಕೆ' ಮತ್ತು 'ವಿವೇಕ ಚಿಂತಾಮಣಿ', ಕ್ರಿ.ಶ. ೧೭೦೦ ಕಾಲಘಟ್ಟದಲ್ಲಿ ಚಿಕ್ಕದೇವರಾಜ ರಚಿಸಿರುವ 'ಚಿಕ್ಕದೇವರಾಜ ಭಿನ್ನಪ' ಕ್ರಿ.ಶ. ೧೭೦೦ (ಬ್ರಾಹ್ಮಣ) ಚಿಕ್ಕದೇವರಾಯನ ಆಸ್ಥಾನದ ಕವಿ 'ತಿರುಮಲಾರ್ಯನು' ರಚಿಸಿರುವ 'ಚಿಕ್ಕದೇವರಾಯನ ವಂಶಾವಳಿ' ಕ್ರಿ.ಶ. ೧೮೦೦ರ ಕಾಲಘಟ್ಟದ ೩ನೇ ಕೃಷ್ಣರಾಜನು ರಚಿಸಿರುವ "ರಾಜಾವಳಿಕಥೆ" ಕ್ರಿ.ಶ. ೧೮೫೦ರಲ್ಲಿ ಮುಮ್ಮಡಿ ಕೃಷ್ಣ(ದೇವ)ರಾಜ ರಚಿತವಾದ ಅಖಂಡ ಕಾವೇರಿ ಮಹಾತ್ಮ, ೧೮೫೦ರಲ್ಲಿ ರಚಿತವಾದ ಕೆಂಪುನಾರಾಯಣರು ರಚಿಸಿರುವ ಮುದ್ರಾಮಂಜೂಟ, ೧೯೦೦ರಲ್ಲಿ ನಂದಳಿಕೆ ಲಕ್ಷ್ಮೀನಾರಾಣಪ್ಪ ರಚಿಸಿರುವ ಅದ್ಭುತ ರಾಮಾಯಣ ರಾಮಾಶ್ವಮೇಧ ಇವುಗಳಲ್ಲದೆ

ಇನ್ನೂ ಹಲವಾರು ಕೃತಿಗಳು ಟೀಕಾ ಗದ್ಯ, ಶಾಸ್ತ್ರ ಗದ್ಯ, ವಚನ ಗದ್ಯ ಮುಂತಾದ ಸಾಹಿತ್ಯ ಪ್ರಕಾರಗಳು ರಚಿತವಾಗಿವೆ. ಈ ಸಾಹಿತ್ಯ ಬೆಳವಣಿಗೆಗೆ ಗದ್ಯ ಪ್ರಕಾರವು ಅಪಾರ ಕೊಡುಗೆ ನೀಡಿದೆ. ಹೀಗೆ ಒಂಬತ್ತನೆಯ ಶತಮಾನದಲ್ಲಿ ಕಂಡುಬರುವ ಗದ್ಯ ಪ್ರಕಾರದ ಸಾಹಿತ್ಯ ಬರವಣಿಗೆ ಕನ್ನಡ ಭಾಷೆ ಮತ್ತು ಸಾಹಿತ್ಯದ ಇತಿಹಾಸ ಮೇಲೆ ಬೆಳಕು ಚೆಲ್ಲುತ್ತದೆ. ಈ ಗದ್ಯವು ಸಾಹಿತ್ಯ ಬರಹ ಬದಲಾವಣೆಯ ಎರಡನೆ ಘಟ್ಟವಾಗಿದೆ. ಹಾಗೂ ಸಾಹಿತ್ಯ ಬೆಳವಣಿಗೆಗೆ ಪೂರಕವಾದ ತಾಂತ್ರಿಕ ಬರಹಕ್ರಿಯೆಯ ಘಟ್ಟವಾಗಿದೆ.

ಒಂಬತ್ತನೇ ಶತಮಾನದಲ್ಲಿ ಕಂದಪದ್ಯ ಹಾಗೂ ಗದ್ಯ ಪ್ರಕಾರದಲ್ಲಿ ರೂಪುಗೊಂಡ ಸಾಹಿತ್ಯ ಬರವಣಿಗೆಯ ಪ್ರಕ್ರಿಯೆ ಮುಂದೆ ಚಂಪೂ ಪ್ರಕಾರವಾಗಿ ೧೦ನೇ ಶತಮಾನದಲ್ಲಿ ರೂಪುಗೊಂಡು ಸಾಹಿತ್ಯದ ಬೆಳವಣಿಗೆಗೆ ಕಾರಣವಾಯಿತು. 'ಚಂಪೂ' ಎಂಬ ಶಬ್ದವೂ ಯಾವ ಬಗೆಯ ಭಾಷೆಯ ಪದ ಎಂಬ ಬಗ್ಗೆಯೇ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಇದರ ಮೂಲವನ್ನು ಕೆಲವರು ಸಂಸ್ಕೃತದಲ್ಲಿ ಹುಡುಕಿ ಇದು ಸಂಸ್ಕೃತ ಶಬ್ದವೆಂದು ಹೇಳಿದರೆ "ಇದು 'ಚೆನ್' (ಸುಂದರವಾದುದು) ಎಂಬ ಕನ್ನಡ ಪದದಿಂದ ಬಂದಿದೆಯೆಂದು ಮತ್ತೆ ಕೆಲವರು ವಾದಿಸುತ್ತಾರೆ. ಹಾಗೆಯೇ ಮತ್ತೆ ಕೆಲವರು ಸಂಸ್ಕೃತದಲ್ಲಿ ಮೊದಲು ಕಾಣಿಸಿಕೊಂಡಿತೆಂದು ಕೆಲವು ವಿದ್ವಾಂಸರು ಹೇಳಿದರೆ ಮತ್ತೆ ಕೆಲವರು ಇದು ಕನ್ನಡದಲ್ಲಿಯೇ ಮೊದಲು ಹುಟ್ಟಿತೆಂದು ಹೇಳುತ್ತಾರೆ."[೨೪] ಏನೇ ವಾದವಿವಾದಗಳು ಇದ್ದರೂ 'ಚಂಪೂ' ಎಂಬುದು ಒಂದು ವಿಶಿಷ್ಟವಾದ ಕಾವ್ಯ ಪ್ರಕಾರದ ಹೆಸರು. ಅದಕ್ಕೆ ಅನೇಕ ಲಕ್ಷಣಗಳಿವೆಯೆಂದೂ ಅಲಂಕಾರ ಶಾಸ್ತ್ರಜ್ಞರು ಹೇಳುತ್ತಾರೆ. ಚಂಪೂವಿನ ಮುಖ್ಯ ಲಕ್ಷಣವೆಂದರೆ ಅದು ಗದ್ಯ ಪದ್ಯಗಳೆರಡನ್ನೂ ಒಳಗೊಂಡ ದೀರ್ಘವಾದ ಕಾವ್ಯ ಅದರಲ್ಲಿಯೂ ಗದ್ಯಕ್ಕಿಂತ ಪದ್ಯವೇ ಅಲ್ಲಿ ಹೆಚ್ಚಾಗಿರುತ್ತದೆ. ಈ ಪದ್ಯ ಭಾಗದಲ್ಲಿ ಅನೇಕ ಬಗೆಯ ಪದ್ಯ ಜಾತಿಗಳನ್ನು ಕವಿಗಳು ಬಳಸಿದ್ದಾರೆ. ಸಂಸ್ಕೃತದ ಬಗೆ ಬಗೆಯ ವೃತ್ತಗಳು ಬಳಕೆಯಾಗಿವೆ. ಅವುಗಳಲ್ಲಿ ಖ್ಯಾತ ಕರ್ನಾಟಕವೆಂಬ ೬ ವೃತ್ತಗಳು ಮುಖ್ಯವಾಗಿವೆ. ಚಂಪಕಮಾಲೆ, ಉತ್ಪಲಮಾಲೆ, ಮತ್ತೇಭ ವಿಕ್ರೀಡಿತ, ಶಾರ್ದೂಲ, ವಿಕ್ರೀಡಿತ, ಸ್ರಗ್ಧರೆ ಮತ್ತು ಮಹಾಸ್ರಗ್ಧರೆ ಎಂಬ ಹೆಸರಿನ ವೃತ್ತಗಳು ಇವುಗಳಲ್ಲದೆ ತ್ರಿಪದಿ, ಅಕ್ಕರ ಮುಂತಾದ ಕನ್ನಡ ಪದ್ಯ ಜಾತಿಗಳು ರಗಳೆ ಎಂಬ ಪದ್ಯ ಭೆಯೂ ಚಂಪೂ ಕಾವ್ಯಗಳಲ್ಲಿ ಬಂದಿದೆ. ಚಂಪೂ ಸಾಹಿತ್ಯ ಬರಹದ ಮಾದರಿ ಸಾಹಿತ್ಯ ರಚನೆಗೆ ಮೊದಲು 'ಚಂಪು'ವನ್ನು ಬಳಸಿದ ಕವಿ ಪಂಪ. ಪಂಪನ ವಿಕ್ರಮಾರ್ಜುನ ಕೃತಿಯಲ್ಲಿನ ಚಂಪೂವಿನ ಶೈಲಿ.

"ವ॥ ಮತ್ತಿತ್ತ ಬೀಸುವ ಚಾಮರಂಗಳ ಪೊಳಪಿನೊಳಮೆತ್ತಿದ ಬೆಳ್ಗೊಡೆಗಳ ಬೆಳ್ಪಿನೊಳಂ ದೆಸೆಗಳೆಲ್ಲಂ ಧವಳಿಸಿದನ್ನವಾಗೆ ಪೊಗಳುತೆ ವರ್ಷವರಸ ರಂಗಳೊಳಂ ಪಾಡುವ ಪಾಠಕಾಜಿರಿಂ ಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ತೀವೆ ಮಣಿಮಯ ಪೀಠದ ಮೇಲೆ ಕಾಲನವಷ್ಟಂಭದಿಂ ನೀಡಿ–

ಮ॥ ಅಲರಂಬಿಂದುಜಿದೆನ್ನ ಮೆಲ್ಲೆರ್ದೆಯನಿಂತುರ್ಚಿತ್ತಿದೆಂಬಂತೆ
ನೆಯ್ದಿಲ ಕಾವಂ ತಿರುಪುತ್ತು (ವೊಂ) ಮೊಂದನನಿಬರ್ ತಮ್ಮಂದಿರುಂ ತನ್ನೆರ।
ಟ್ಕೆಲದೊಳ್ ಬಂದಿರೆ ನೋಡಿ ಸೋಲ್ತು ನಿನಗಾ ಗೇಯಕ್ಕೆ ಸೋಲ್ತಂತೆವೊಲ್
ತಲೆಯಂ ತೂಗುವವಂ ಸುಯೋಧನನೃಪಂ ನೀನಾತನಂ ನೋಡುಗೇ ॥
ಕಂ॥ ಆಯತ ಯದುವಂಶ ಕುಲ
ಶ್ರೀಯಂ ತಟ್ಕೆಸಿದದಟರತಿರಥರವರ ।
ತ್ಯಾಯತಭುಜಪರಿಷರ್ ನಾ
ರಾಯಣ ಬಲದೇವರೆಂಬಂಬುಜವದನೇ ॥
ರಗಳೆ॥ ಅಲ್ಲಿ ಸೊಗಯಿಸುವ ಕೃತಕ ಗಿರಿಗಳಿಂ
ಕಲ್ಪತರುಗಳನೆ ಪೋಲ್ವ ಮರಗಳಿಂ...."[೨೫]

ಚಂಪುವಿನಲ್ಲಿ ಈ ರೀತಿಯಾದ ರಚನೆಯು ಬಂದಿರುವುದಕ್ಕೆ ಏನು ಕಾರಣವಿರಬಹುದು ಎಂಬುದನ್ನು ಕುರಿತು ಸ್ವಲ್ಪ ಆಲೋಚಿಸಬಹುದು. ಇಲ್ಲಿ ಅನೇಕ ಬಗೆಯ ಪದ್ಯ ಜಾತಿಗಳನ್ನು ಕವಿಗಳು ಬಳಸಿದ್ದಾರೆಂಬುದನ್ನು ಮೇಲೆ ಹೇಳಿದ್ದಾನೆ. ಒಂದೇ ರೀತಿಯ ಕಾವ್ಯವನ್ನು ಬರೆದರೆ ಕೇಳುವವರಿಗೆ ಬೇಸರವಾಗುತ್ತದೆ(ಯಲ್ಲವೇ?) (ಹಿಂದಿನ ಕಾಲದಲ್ಲಿ ಕಾವ್ಯಗಳನ್ನು ವಾಚನ ಮಾಡುತ್ತಿದ್ದರು ಎಂಬುದನ್ನು ನೆನಪಿಸಿಕೊಳ್ಳಬೇಕು) ಅದಕ್ಕಾಗಿಯೇ ಬೇರೆ ಬೇರೆ ಬಗೆಯ ವೃತ್ತಗಳನ್ನು ಬಳಸಿರಬಹುದೆಂಬುದನ್ನು ಸುಲಭವಾಗಿ ಊಹಿಸಬಹುದು. ಅಲ್ಲದೆ ಪ್ರಾಯಶಃ ಕವಿಗೆ ಅದರಿಂದ ಇನ್ನೊಂದು ಪ್ರಯೋಜನವನ್ನು ಇದ್ದಿರಬೇಕು. ಅದೆಂದರೆ ಕವಿಯು ಹೇಳಬೇಕಾದ ಭಾವನೆಗಳು ಒಂದೇ ರೀತಿಯಾಗಿರದೆ ಬೇರೆ ಬೇರೆಯಾಗಿರುತ್ತವೆ. ಅಥವಾ ಕತೆಯ ಬೇರೆ ಬೇರೆಯ ಸಂದರ್ಭಗಳಲ್ಲಿ ಬೇರೆ ಬೇರೆ ಬಗೆಯ ಭಾವನೆಗಳನ್ನು ಕವಿಯು ವರ್ಣಿಸಬೇಕಾಗುತ್ತದೆ. ಆಗ ಈ ಎಲ್ಲಾ ಭಾವನೆಗಳನ್ನು ಒಂದೇ ಬಗೆಯ ಪದ್ಯದಲ್ಲಿ ಸಮರ್ಪಕವಾಗಿ ಹೇಳಲು ಹೊರಟರೆ ಅರ್ಧಕ್ಕೆ ಅವನ ಭಾವನೆಯು ಮುಗಿದು ಹೋಗಬಹುದು. ಆದರೆ ಪದ್ಯದ ನಿಯಮವನ್ನು ಪಾಲಿಸುವುದಕ್ಕಾಗಿ ಮಿಕ್ಕ ಪದ್ಯ ಭಾಗದಲ್ಲಿ ಏನನ್ನೋ ಹೇಳಬೇಕಾಗಬಹುದು. ಆಗ ಪದ್ಯದ ಸೌಂದರ್ಯವೇ ಕೆಡಬಹುದು. ಹಾಗೆಯೇ ದೀರ್ಘವಾದ ಭಾಗವನ್ನು ಹೇಳಲು ಸಣ್ಣದಾದ ಪದ್ಯ ಜಾತಿಯನ್ನು ಆರಿಸಿಕೊಂಡಾಗಲೂ ಕವಿಗೆ ಕಷ್ಟವೆನಿಸುತ್ತದೆ. ಚಿಕ್ಕ ಪದ್ಯದಲ್ಲಿ ತನ್ನ ಭಾವನೆಯೆಲ್ಲವನ್ನೂ ಸರಿಯಾಗಿ ಹೇಳಲಾಗದೆ ಸಂಕ್ಷಿಪ್ತವಾಗಿಯೇ ಹೇಳಬೇಕಾಗುತ್ತದೆ. ಆಗ ಪದ್ಯದಲ್ಲಿನ ಭಾವನೆಯನ್ನು ಹೇಳಲು ಚಿಕ್ಕ ಪದ್ಯ ದೊಡ್ಡ ಭಾವನೆಯನ್ನು ದೊಡ್ಡ ಪದ್ಯ ಎಂಬುದು ಸರಿಯಾದ ಕ್ರಮ. ಎಲ್ಲಾ ಭಾವನೆಗಳು ಒಂದೇಯಾಗಿರುವುದಿಲ್ಲ. ಕೋಪವು ಭಯಕ್ಕಿಂತ ಬೇರೆಯಾದುದ್ದು ಪೌರುಷವು ಪ್ರೀತಿಗಿಂತ ಭಿನ್ನವಾದದ್ದು. ಅಂತಹ ಭಾವನೆಗಳು ಉಂಟಾದಾಗ ನಾವು ನಮ್ಮ ನಿತ್ಯ ಜೀವನದಲ್ಲಿ ಅವುಗಳನ್ನು ಹೇಳಿಕೊಳ್ಳುವ ರೀತಿಯಲ್ಲಿ

ವ್ಯತ್ಯಾಸಗಳಿರುವುದನ್ನು ಗಮನಿಸಬಹುದು. ಎಂದರೆ ಭಾವನೆಗೆ ತಕ್ಕ ಓಟವನ್ನುಳ್ಳ ಪದ್ಯ ಜಾತಿಯನ್ನು ಬಳಸಿದರೆ ಅವನ ರಚನೆಯು ಸುಂದರವಾಗಿರು(ಬೇಕು)ತ್ತದೆ. ಆದ್ದರಿಂದಲೇ ಚಂಪೂವಿನಲ್ಲಿ ಬೇರೆ ಬೇರೆ ಬಗೆಯ ವೃತ್ತಗಳನ್ನು ಬಳಸುವ ರೂಢಿ ಬಂದಿರಬೇಕು. ಇನ್ನು ಗದ್ಯ, ಚಂಪು. ಚಂಪುವಿನಲ್ಲಿ ಬರುವ ಗದ್ಯವು ಸಾಧಾರಣವಾದ ವಿಷಯಗಳನ್ನು ನಿರೂಪಿಸುವುದಕ್ಕೆ ಮಾತ್ರ ಕವಿಗಳು ಬಳಸಿಕೊಳ್ಳುತ್ತಾರೆ. ಏನಾದರೂ ವಿವರಣೆಯನ್ನು ನೀಡಬೇಕಾಗಲೋ ಯಾವುದಾದರೂ ಸಾಧಾರಣ ಸಂಗತಿಯನ್ನು ನಿರೂಪಿಸುವಾಗಲೋ ಯಾವುದಾದರೂ ಸಂದರ್ಭದಲ್ಲಿ ಗದ್ಯವನ್ನು ಬಳಸುವುದೇ ಹೆಚ್ಚು. ಈ ರೀತಿ ಚಂಪುವಿನ ಗದ್ಯ-ಪದ್ಯ ಮಿಶ್ರಣ ಮತ್ತು ಪದ್ಯ ಭಾಗದಲ್ಲಿ ವಿವಿಧ ವೃತ್ತಗಳ ಬಳಕೆ ಇವುಗಳಿಂದ ಕವಿಯು ತನ್ನ ಭಾವನೆಗಳನ್ನು ಹೇಳಿಕೊಳ್ಳುವುದಕ್ಕೆ ಸುಲಭವಾಗುತ್ತದೆ. ಕಾವ್ಯವು ವೈವಿಧ್ಯದಿಂದ ಕೂಡಿ ಕೇಳುವವನಿಗೆ ಬೇಸರವಾಗುವುದು ಕಡಿಮೆಯಾಗುತ್ತದೆ.

ಚಂಪೂ ಪ್ರಕಾರವು ಕನ್ನಡ ಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದೆ. ಪಂಪನಂತಹ ಕವಿಯು ಚಂಪೂ ಪ್ರಕಾರವನ್ನು ಕಾವ್ಯ ಮಾಧ್ಯಮಕ್ಕೆ ಆರಿಸಿಕೊಂಡು ಅತ್ಯಂತ ಯಶಸ್ವಿಯಾಗಿ ಅದರ ನಿರ್ವಹಣೆ ಮಾಡಿರುವುದು ಸತ್ಯ ಸಂಗತಿ. ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಕೃತಿಗಳು ಚಂಪೂ ಸಾಹಿತ್ಯ ಪ್ರಕಾರದಲ್ಲಿ ರಚನೆಯಾಗಿರುವ ಕನ್ನಡ ಸಂದರ್ಭಕ್ಕೆ ಲಭ್ಯವಾಗಿರುವಂತಹ ಪ್ರಾರಂಭಿಕ ಕೃತಿಗಳು. ಪಂಪನ ಕಾಲದ ಸಾಹಿತ್ಯ ರಚನೆಯ ಮತ್ತೊಂದು ವಿಶೇಷತೆಯೆಂದರೆ ಲೌಕಿಕ ಮತ್ತು ಆಗಮಿಕ ಕಾವ್ಯಗಳನ್ನು ರಚಿಸಿದುದು. ಪಂಪನೇ ಹೇಳುವ ಹಾಗೆ ಪುಲಿಗೆರೆಯ ತಿರುಳ್ಗನ್ನಡದಲ್ಲಿ ಕಾವ್ಯಗಳನ್ನು ರಚಿಸಿದ್ದಾನೆ. ಪಂಪನಿಗೆ ಆಶ್ರಯ ನೀಡಿದವರು ಚಾಲುಕ್ಯ ದೊರೆ ೨ನೇ ಅರಿಕೇಸರಿ. ಪಂಪನ ಕಾಲಕ್ಕಾಗಲೇ ಕಾವ್ಯವನ್ನು ಪ್ರೋತ್ಸಾಹಿಸುವ ಅದನ್ನು ಆಸ್ವಾದಿಸುವ ಸಹೃದಯ ಪರಂಪರೆ ಬೆಳೆದಿತ್ತು. (ಅರಿಕೇ) ಪಂಪನು ಕಾವ್ಯದ ಕರ್ತೃ ಆದರೆ ಅರಿಕೇಸರಿಯು ಕಾವ್ಯರಚನೆ ಪ್ರೋತ್ಸಾಹಿಸುವ ಕಾವ್ಯ ಆಸ್ವಾದನೆ ಮಾಡುವಂತಹ ಸಹೃದಯನಾಗಿ ಕಂಡುಬರುತ್ತಾನೆ. ಕಾವ್ಯ ರಚನೆಗೆ ರಾಜಕೀಯ ಬೆಂಬಲ ಒಂದು ಕಡೆಯಾದರೆ ಧರ್ಮ ಮತ್ತೊಂದು ಕಡೆ ಕಾರಣವಾಗುತ್ತದೆ. ಪಂಪನಂತರ ಕನ್ನಡ ಸಾಹಿತ್ಯಕ್ಕೆ ಕೊಡುಗೆ ಪೊನ್ನನದು. ಪಂಪನ ಹಾಗೆ ಚಂಪೂ ಮಾರ್ಗವನ್ನನುಸರಿಸಿ ಭುವನೈಕರಾಮಾಭ್ಯುದಯ ಎಂಬ ಲೌಕಿಕ ಕಾವ್ಯವನ್ನು ಶಾಂತಿಪುರಾಣ ಎಂಬ ಆಗಮಿಕ ಕಾವ್ಯವನ್ನು ರಚಿಸಿದ್ದಾನೆ. ಕ್ರಿ.ಶ. ೯೫೦ ಇವನ ರಚನೆಯ ಕಾಲ. ಚಕ್ರವರ್ತಿಯಾದ ಮೂರನೇ ಕೃಷ್ಣನು ಪೊನ್ನನಿಗೆ ಕವಿ ಚಕ್ರವರ್ತಿ ಎಂಬ (ಹೆಸರು) ಬಿರುದನ್ನು ನೀಡಿ ಗೌರವಿಸಿದ್ದಾನೆ.

ಪೊನ್ನನ ನಂತರ ಚಂಪೂ ಮಾರ್ಗವನ್ನು ಅನುಸರಿಸಿ ಬರೆದವರು ರನ್ನ. ಇವನು ಚಾಲುಕ್ಯ ಚಕ್ರವರ್ತಿಯಾದ ಸತ್ಯಾಶ್ರಯ ಇರಿವಬೆಡಂಗದ ಆಸ್ಥಾನದಲ್ಲಿದ್ದನು. ಪಂಪನಂತೆ ತನಗೆ ಆಶ್ರಯ ನೀಡಿದ ದೊರೆಯನ್ನು ಕಥಾನಾಯಕ ಅಥವಾ ಕಾವ್ಯದ ನಾಯಕನನ್ನಾಗಿ ಮಾಡಿಕೊಂಡು ಕಾವ್ಯ ರಚನೆ ಮಾಡಿದವನು. ಕಾವ್ಯ ರಚನೆಗೆ ಪಂಪ ಅನುಸರಿಸಿದ ಮಾರ್ಗವನ್ನು

ರನ್ನನು ಕೂಡ ಅನುಸರಿಸಿದನು. ರನ್ನನು 'ಸಾಹಸಭೀಮ ವಿಜಯ' ಎಂಬ ಲೌಕಿಕ ಕೃತಿ ಹಾಗೂ 'ಅಜಿತನಾಥ ಪುರಾಣ' ಎಂಬ ಆಗಮಿಕ ಕಾವ್ಯವನ್ನು ಬರೆದಿದ್ದಾನೆ. ತನ್ನ ಆಶ್ರಯದಾತನಾದ ಇರಿವಬೆಡಂಗನನ್ನು ಮಹಾಭಾರತದ ಭೀಮನಿಗೆ ಹೋಲಿಸಿ ಗದಾಯುದ್ಧ ರಚನೆ ಮಾಡಿದರೆ ಜೈನ ಧರ್ಮದ ೨ನೇ ತೀರ್ಥಂಕರನಾದ ಅಜಿತಸ್ವಾಮಿಯ ಚರಿತೆಯನ್ನು ಕಿರುತು ಅಜಿತ ಪುರಾಣ ಎಂದು ರಚಿಸಿದ್ದಾನೆ. ಸತ್ಯಾಶ್ರಯ ಇರಿವ ಬೆಡಂಗನು ರನ್ನನಿಗೆ ಇರಿವ ಬೆಡಂಗನು ಕವಿಚಕ್ರವರ್ತಿ ಎಂಬ ಬಿರುದನ್ನು ನೀಡಿ ಗೌರವಿಸಿದ್ದಾನೆ. ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ರನ್ನನಿಗೆ ವಿಶಿಷ್ಟವಾದ ಸ್ಥಾನವಿದೆ. ರನ್ನನ ಕೃತಿ ರಚನೆಯ ಕಾಲ ೯೯೦. ರನ್ನನು ಗುಡಾರದ ಕವಿ ಎಂದು ಹೆಸರು ಪಡೆದಿದ್ದಾನೆ. ವಾಗ್ದೇವಿಯ ಶಬ್ದ ಭಂಡಾರವನ್ನು ಹೊಡೆದ ಕವಿ ಎಂದು ಹೆಸರು ಪಡೆದಿದ್ದಾನೆ. ರನ್ನನು ತನ್ನ ಕಾವ್ಯ ರಚನೆಯಲ್ಲಿ ನಾಟಕೀಯ ಗುಣವನ್ನು ತಂದಿದ್ದಾನೆ. ಹಾಗೂ ಸಿಂಹಾವಲೋಕನ ಕ್ರಮವನ್ನು ಕೃತಿ ರಚನೆಯಲ್ಲಿ ತಂದಿದ್ದಾನೆ. ರನ್ನನ ಕಾವ್ಯರಚನಾ ಶೈಲಿ ರನ್ನನ ಭಾಷೆ, ರನ್ನನ ಪ್ರತಿಭಾಶಕ್ತಿಯನ್ನು ಕಂಡು ಕವಿ ಕುವೆಂಪುರವರು "ರನ್ನ ವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿದ್ದಾನೆ"[೨೬] ಎಂದು ಹೇಳಿದ್ದಾರೆ.

ರನ್ನನ ಕಾಲದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆ ತುಂಬಾ ವಿಸ್ತಾರವಾಗಿ ಆಯಿತು ಎನ್ನಬಹುದು. ಈ ಸಂದರ್ಭದಲ್ಲಿ ಸಾಹಿತ್ಯ ಬೆಳವಣಿಗೆಗೆ ಸಂಬಂಧಪಟ್ಟಂತೆ ಎರಡು ಮುಖ್ಯವಾದ ಅಂಶಗಳು ಕಂಡುಬರುತ್ತವೆ. ೧. ರಾಜಕೀಯ ಹಾಗೂ ಧರ್ಮದ ಬೆಂಬಲ ಅಥವಾ ಪ್ರೋತ್ಸಾಹ. ೨. ಸಾಹಿತ್ಯ ಕೃತಿಗಳನ್ನು ಪ್ರತಿಗಳಾಗಿ ಮಾಡುವ ತಾಂತ್ರಿಕ ಕಾರ್ಯ. ಮೊದಲನೆಯದಾಗಿ ಕವಿಗಳಿಗೆ ರಾಜರು ತಮ್ಮ ಆಸ್ಥಾನದಲ್ಲಿ ಆಶ್ರಯ ನೀಡಿ ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಿದುದು. ಸತ್ಯಾಶ್ರಯ ಇರಿವಬೆಡಂಗ, ರನ್ನನಿಗೆ ಆಶ್ರಯ ನೀಡಿದುದು. ಹಾಗೆಯೇ ಅತ್ತಿಮಬ್ಬೆಯು ಕೂಡ ರನ್ನನಿಗೆ ಆಶ್ರಯ ಮತ್ತು ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಿದ್ದಳು. ರನ್ನನು ರಚಿಸಿರುವ 'ಅಜಿತಪುರಾಣ'ದಲ್ಲಿ ೨ನೇ ತೀರ್ಥಂಕರನಾದ ಅಜಿತಸ್ವಾಮಿಯ ಮತ್ತು ೨ನೇ ಚಕ್ರವರ್ತಿಯಾದ ಸಗರನ ಚರಿತ್ರೆಯುಳ್ಳ ಜೈನ ಪುರಾಣವನ್ನು 'ದಾನಚಿಂತಾಮಣಿ'ಯಾದ ಅತ್ತಿಮಬ್ಬೆಯು ಹೇಳಿಸಿದಳೆಂದು ರನ್ನನು ಹೇಳಿದ್ದಾನೆ. ಎರಡನೆಯದಾಗಿ ರನ್ನನಿಗೆ ಕೃಪಾಶ್ರಯ ನೀಡಿದ ಅತ್ತಿಮಬ್ಬೆಯು ಪೊನ್ನನ 'ಶಾಂತಿಪುರಾಣ'ವನ್ನು ಸಾವಿರ ಪ್ರತಿಗಳಾಗಿ ಮಾಡಿಹಂಚಿದುದು. ಇದು ಒಂದು ಕೃತಿಯನ್ನು ಮರುಲಿಪಿಕರಣಗೊಳಿಸಿ ಸಾವಿರ ಪ್ರತಿಗಳಾಗಿ ಮಾಡಿದ ತಾಂತ್ರಿಕ ಕಾರ್ಯವು ಕನ್ನಡ ಸಾಹಿತ್ಯ ಬೆಳವಣಿಗೆಯ ಹಾದಿಯಲ್ಲಿನ ಮುಖ್ಯವಾದ ಘಟ್ಟವಾಗಿದೆ. ಒಂದು ಸಾಹಿತ್ಯ ಕೃತಿಯು ಅಧ್ಯಯನ ಮಾಡುವುದಕ್ಕೆ ಹಲವರಿಗೆ ಲಭ್ಯವಾಗುವಂತೆ ಮಾಡಿದುದು ಒಂದು ಮಹತ್ಕಾರ್ಯ. ಸಾವಿರ ಪ್ರತಿಗಳನ್ನು ಮಾಡುವುದಕ್ಕೆ ಹಲವಾರು ಲಿಪಿಕಾರರನ್ನು ಈ ಕಾರ್ಯಕ್ಕೆ ಬಳಸಿಕೊಳ್ಳಲಾಗಿದೆ. ಇದು ಇಂದಿನ ಮುದ್ರಣ ತಂತ್ರಜ್ಞಾನವು ಒಂದು ಕೃತಿಯ

ಹಲವು ಪ್ರತಿಗಳನ್ನು ಮರುಲಿಪಿಕರಣಗೊಳಿಸಿದುದು ರನ್ನನ ಕಾಲದಲ್ಲಿ ಸಾಹಿತ್ಯ ಬೆಳವಣಿಗೆಯಲ್ಲಿ ಆದ ತಂತ್ರಜ್ಞಾನದ ಕೆಲಸ ಎಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ಚಂಪೂ ಪ್ರಕಾರದಲ್ಲಿ ಕನ್ನಡ ಸಾಹಿತ್ಯದ ಮೊಟ್ಟ ಮೊದಲ ಕಾವ್ಯವಾದ 'ಆದಿಪುರಾಣ'ದಿಂದ ಹಿಡಿದು ಪಂಪನ ಮತ್ತೊಂದು ಕೃತಿಯಾದ ವಿಕ್ರಮಾರ್ಜುನ ವಿಜಯ ಹಾಗೆಯೇ ಆನಂತರದಲ್ಲಿ ರಚಿತವಾದ ಪೊನ್ನನ ಶಾಂತಿಪುರಾಣ, ರನ್ನನ ಗದಾಯುದ್ಧ, ಅಜಿತನಾಥ ಪುರಾಣ ಕಾವ್ಯಗಳು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಗಳು. ಈ ಮೂರು ಜನ ಕವಿಗಳು ಕನ್ನಡ ರತ್ನತ್ರಯರೆಂದು ಹೆಸರಾದರು. ಹಾಗೆಯೇ ನಿಲ್ಲದೇ (ಸಾಹಿತ್ಯ) ಸಾಗಿದ ಚಂಪೂ ಸಾಹಿತ್ಯ ಬರಹ ಹಲವಾರು ಕಾವ್ಯಗಳನ್ನು ಸೃಷ್ಟಿಸಿತು. ನಾಗವರ್ಮ ವಿರಚಿತ ಕರ್ಣಾಟಕ ಕಾದಂಬರಿ, ದುರ್ಗಸಿಂಹನ ಪಂಚತಂತ್ರ, ಚಂದ್ರರಾಜನ ಮದನತಿಲಕ, ಶ್ರೀಧರಚಾರ್ಯನ ಚಂದ್ರಪ್ರಭಚರಿತ, ಸುಕುಮಾರ ಚರಿತ, ನಾಗಚಂದ್ರನ ಮಲ್ಲಿನಾಥಪುರಾಣ ಮತ್ತು ರಾಮಚಂದ್ರ ಚರಿತ ಪುರಾಣ, ನಯಸೇನನ ಧರ್ಮಾಮೃತ, ಕರ್ಣಪಾರ್ಯನ ನೇಮಿನಾಥ ಪುರಾಣ, ಎರಡನೇ ನಾಗವರ್ಮನ ಅಭಿದಾನ ವಸ್ತುಕೋಶ ಪಂಪಯುಗದಲ್ಲಿ ರಚನೆಯಾದವು. ಈ ಯುಗದ ನಂತರ ಕೆಲವೊಂದು ಕೃತಿಗಳು ಚಂಪೂವಿನಲ್ಲಿ ರಚನೆಯಾದವು. ಉತ್ತಮ ಕಾವ್ಯಗಳ ಸೃಷ್ಟಿ ಹಾಗೂ ಕಾವ್ಯಗಳ ಲಿಪೀಕರಣ, ಪ್ರತಿಕರಣ ಈ ಯುಗದಲ್ಲಾದ ಪ್ರಮುಖ ಕಾರ್ಯಗಳು.

ಸಾಹಿತ್ಯದ ಬರಹ ಚಂಪೂವಿನ ನಂತರ 'ವಚನ' ಎಂಬ ರೂಪದಿಂದ ಮರು ಸೃಷ್ಟಿಯಾಯಿತು. ಬಸವಣ್ಣನವರ ಸಾಮಾಜಿಕ, ಧಾರ್ಮಿಕ ಹೋರಾಟದ ಫಲವಾಗಿ ೧೨ನೇ ಶತಮಾನದಲ್ಲಿ 'ವಚನ' ಸಾಹಿತ್ಯ ಮೂಡಿ ಬಂದಿತು. ಈ ವಚನ ಸಾಹಿತ್ಯವು ಮೂಡಿ ಬಂದ ಕಾಲವನ್ನು 'ಬಡವರಿಗೆ ಬಾಯಿ ಬಂದ ಕಾಲ' ಎಂದು ಕರೆಯಲಾಗಿದೆ. ಭಾರತ ದೇಶದಲ್ಲಿಯೇ ಒಂದು ವಿಶೇಷವಾದ ಕೊಡುಗೆ ಈ ಕಾಲದಲ್ಲಾಯಿತು. ಅದು ಬಸವಣ್ಣನವರಿಂದ ವಚನ ವೆಂದರೆ ಗದ್ಯ ಪದ್ಯ ಮಿಶ್ರಿತವಾದ ಸಾಹಿತ್ಯ ಪ್ರಕಾರ, ಶತ ಶತಮಾನಗಳಿಂದ ಕೇವಲ ಮೇಲ್‌ವರ್ಗದವರಲ್ಲಿ ಇದ್ದ ವಿದ್ವತ್ತು, ಮೇಲ್‌ವರ್ಗದವರಲ್ಲಿಯೇ ನಲಿದಾಡುತ್ತಿದ್ದ ಕಾವ್ಯ ಅಥವಾ ಸಾಹಿತ್ಯ ಬಸವಣ್ಣನವರ ಸಾಮಾಜಿಕ, ಧಾರ್ಮಿಕ ಹೋರಾಟದಿಂದ ಸಮಾಜದಲ್ಲಿ ಶೋಷಣೆಗೆ ಒಳಗಾಗಿದ್ದ ಶೂದ್ರಾತಿಶೂದ್ರ ವರ್ಗದ ಜನರು ಕೂಡ ಬರೆಯುವ, ಓದುವ, ಆಲಿಸುವ ಹಾಗೂ ಹೊಸ ಸಾಹಿತ್ಯ ಸೃಷ್ಟಿಸುವಂತ ಅವಕಾಶ ಬಂದಿತು. ದಿನನಿತ್ಯದ ಬದುಕಿನ ಅನುಭವವನ್ನು 'ವಚನ'ದ ಮೂಲಕ ಹೇಳುವಂತಹ ಸಂದರ್ಭ ಬಂದಿತು. ಬಸವಣ್ಣನವರು ಸಮಾಜದಲ್ಲಿದ್ದ ಜಾತಿ ಪದ್ಧತಿ, ಅಸಮಾನತೆ, ಅಸ್ಪೃಶ್ಯತೆ ಮುಂತಾದ ಅನಿಷ್ಟ ಪದ್ಧತಿಗಳನ್ನು ತೊಲಗಿಸಲು ಸಾಮಾಜಿಕ, ಧಾರ್ಮಿಕ ಚಳುವಳಿ ಪ್ರಾರಂಭಿಸಿದರು. ಇದು ರಾಜ ಬಿಜ್ಜಳನಿಗೆ (ವಿರುದ್ಧ) ಇಷ್ಟವಿರಲಿಲ್ಲ. ಆದರೂ ಹೆದರದೆ ಹೋರಾಟ ಮುಂದುವರೆಸಿದರು. ಕಲ್ಯಾಣದಲ್ಲಿ ಅನುಭವ ಮಂಟಪ ಮಾಡಿ ಅಲ್ಲಿ ಲಿಂಗದೀಕ್ಷೆಯನ್ನು ಜನರಿಗೆ ನೀಡುವುದರ ಮೂಲಕ ಶರಣ ಪರಂಪರೆ ಬೆಳೆಸಿದರು. ಎಲ್ಲಾರು ಒಂದೇ ಎನ್ನುವ ಸಮಾನತೆಯ ತತ್ವವನ್ನು ಸಾರಿದರು. ಈ

ಸಮಾನತೆ ಎಂಬ ಬಸವಣ್ಣನ ತಾತ್ವಿಕ ಪ್ರಭಾವ ಶೂದ್ರಾತಿಶೂದ್ರರು ಸಹ ಅಕ್ಷರ ಜ್ಞಾನವನ್ನು ಪಡೆಯುವಂತಹ ಅವಕಾಶ ಬಂದಿತು. ಹಾಗೂ ಸಮಾಜದಲ್ಲಿ ಶ್ರೀಸಾಮಾನ್ಯರೂ ಕೂಡ ಅಕ್ಷರ ಕಲಿಯುವ ಹಾಗೂ ಸಾಹಿತ್ಯ ರಚಿಸುವ ಸ್ವಾತಂತ್ರ್ಯ ಪಡೆದರು. ಇದರಿಂದ ಕನ್ನಡ ಭಾಷೆಯು ಸಾಹಿತ್ಯ ಶ್ರೀಸಾಮಾನ್ಯನ ನಾಲಿಗೆಯ ಮೇಲೆ ಹರಿದಾಡತೊಡಗಿತು. ಮನುವಿನ ವರ್ಣಾಶ್ರಮದ ಕಟ್ಟಳೆಗಳನ್ನು ಮುರಿಯಲು ಬಸವಣ್ಣನವರ ಹೋರಾಟ ಪ್ರಥಮ ಬುನಾದಿಯಾಯಿತು. ಈ ವಚನವು ದಿನನಿತ್ಯದ ಬದುಕಿನಿಂದ ಬಂದಂತಹ ಅನುಭವ ಕುರಿತು ಸಾಹಿತ್ಯ ರಚನೆಯಾಯಿತು. ಮನುಷ್ಯ ಬದುಕಿನ ಅಂಶಗಳಾದ ಆಹಾರ, ಕೆಲಸ, ಅನ್ನ, ಸೇವೆ, ನಡತೆ, ಮೌಲ್ಯ, ಜ್ಞಾನ, ಭಕ್ತಿ ಮುಂತಾದ ವಿಚಾರಗಳನ್ನು ಕುರಿತು ತಮ್ಮ ಇಷ್ಟದೈವದ ಅಂಕಿತನಾಮದೊಂದಿಗೆ ವಚನಗಳನ್ನು ವಚನಕಾರರು ಬರೆದರು. ವಚನವು ಮೊದಲಿಗೆ ಜೇಡರ ದಾಸಿಮಯ್ಯನಿಂದ ಮೊದಲಾದರೂ ಬಸವಣ್ಣನ ಕಾಲದಲ್ಲಿ ಉತ್ತುಂಗ ಶಿಖರಕ್ಕೆ ಏರಿತು. ಉದಾ.

"ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯನೊಂದರೆಗಳಿಗೆಯಿತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥ"[೨೭]

ಜೇಡರ ದಾಸಿಮಯ್ಯನ ನಂತರ ಬಸವಣ್ಣನವರು ತಾವು ಕೂಡಲ ಸಂಗಮದೇವ ಎಂಬ ಅಂಕಿತದೊಂದಿಗೆ ಸಾವಿರಾರು ವಚನಗಳನ್ನು ಬರೆದರು. ಹಾಗೆಯೇ ತಮ್ಮ ಅನುಭವ ಮಂಟಪದಲ್ಲಿದ್ದ ಎಲ್ಲಾ ವರ್ಗದ ಶರಣರಿಗೂ ವಚನ ರಚಿಸಲು ಪ್ರೇರೇಪಿಸಿದರು.

"ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ
ಬಡತನವೆಂಬ ಮಂತ್ರವಾದಿ ಹೋಗಲು
ಒಡನೆ ನುಡಿವರು ಕೂಡಲಸಂಗಮದೇವಾ"[೨೮]

ಬಸವಣ್ಣನ ಕಾಲದಲ್ಲಿ ಶೂದ್ರಾತಿಶೂದ್ರ ಶರಣರು ಕೂಡ ವಚನ ರಚಿಸಲು ಸ್ವಾತಂತ್ರ್ಯ ಮತ್ತು ಮುಕ್ತ ಅವಕಾಶವಿತ್ತು ಎನ್ನುವುದಕ್ಕೆ ಶ್ರೇಷ್ಠ ಶಿವಭಕ್ತ ಹಾಗೂ ಶರಣನಾದ ಮಾದಾರ ಚನ್ನಯ್ಯನು ರಚಿಸಿರುವ ವಚನಗಳೇ ಸಾಕ್ಷಿಯಾಗಿವೆ.

"ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆಯಿಲ್ಲ
ನುಡಿ ಲೇಸು ನಡೆಯಧಮವಾದಲ್ಲಿ ಅದೇ ಬಿಡುಗಡೆ
ಇಲ್ಲದ ಹೊಲೆ ಕಳವು ಪರದಾಂಗಳದಲ್ಲಿ ಹೊಲಬನರಿಯದೆ
ಕೆಟ್ಟು ನಡೆಯುತ್ತ ಮತ್ತೆ ಕುಲಜರೆಂಬ ಒಡಲುಂಟೆ?

ಆಚಾರವೆ ಕುಲ, ಅನಾಚಾರವೇ ಹೊಲೆ
ಇಂತೀ ಉಭಯವ ತಿಳಿದು ಅರಿಯಬೇಕು
ಕಯ್ಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ ಅರಿ ನಿಜಾತ್ಮರಾಮ ರಾಮನ"[೨೯]

ಪುರುಷರಂತೆ ಸ್ತ್ರೀಯರೂ ಕೂಡ 'ವಚನ' ರಚನೆಯಲ್ಲಿ ತೊಡಗಿದ್ದುದು ಆ ಕಾಲದ ಒಂದು ದೊಡ್ಡ ಬದಲಾವಣೆಯೇ ಸರಿ. ಅದರಲ್ಲೂ ಸಮಾಜದಲ್ಲಿ ಅತ್ಯಂತ ಕೀಳು ಎನ್ನುವ ವೇಶ್ಯಾವೃತ್ತಿಯಲ್ಲಿದ್ದವರು ಸಹ ವಚನ ರಚಿಸಲು ಮುಂದಾಗಿದ್ದು ಒಂದು ಪರಿವರ್ತನೆಯ ಸರಿ. ಅಕ್ಕಮಹಾದೇವಿ, ಮುಕ್ತಾಯಕ್ಕ, ಅಮುಗೆರಾಯಮ್ಮ, ಗಂಗಾಂಬಿಕೆ, ನೀಲಾಂಬಿಕೆ ಮುಂತಾದ ವಚನಕಾರರಂತೆ ವೇಶ್ಯಾವೃತ್ತಿಯನ್ನು ಅವಲಂಬಿಸಿದ್ದ ಸಳೆ ಸಂಕವ್ವೆಯು ವಚನ ರಚಿಸಿದ್ದಾಳೆ.

"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನರಿದು ಬೆರೆದಡೆ
ಕಾದಕತ್ತಿಯಲ್ಲಿ ಕೈ, ಕಿವಿ, ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ"[೩೦]

ಬಸವಣ್ಣನ ತತ್ವ 'ಕಾಯಕವೇ ಕೈಲಾಸ'ವೆಂಬ ತತ್ವದ ಪ್ರಭಾವರಂತೆ ಅನೇಕ ಶರಣರು ಅವರವರ ವೃತ್ತಿಯನ್ನು ಪ್ರಾಮಾಣಿಕವಾಗಿ ಮಾಡುತ್ತಾ ತಮ್ಮ ವೃತ್ತಿಯ ಸೇವೆಯಲ್ಲಿಯೇ ಶಿವನನ್ನು ಆರಾಧಿಸಿದರು, ಬದುಕಿನಲ್ಲಿ ಆಧ್ಯಾತ್ಮ ಸುಖ ಕಂಡರು ಶಿವನನ್ನು ಕಂಡರು. ಇಂತಹ ಮಹನೀಯ ವಚನಕಾರರಲ್ಲಿ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಸಿದ್ಧರಾಮ ಚೆನ್ನಬಸವಣ್ಣ ಮುಂತಾದ ಶರಣರು ತಮ್ಮ ಇಷ್ಟದೈವದ ಅಂಕಿತದೊಂದಿಗೆ ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಎಲ್ಲಾ ವಚನಗಳು ಭಕ್ತಿ, ಕಾಯಕ, ನಡತೆ, ಸೇವೆ, ನೀತಿ ಈ ವಿಚಾರಗಳ ಕುರಿತು ಇವೆ. ಈ ಪರಂಪರೆ ಮುಂದುವರಿದು ಮುಂದಿನ ಕಾಲಘಟ್ಟದಲ್ಲಿಯೂ ವಚನ ಸಾಹಿತ್ಯ ರಚನೆಗೂ ಮಾದರಿಯಾಯಿತು.

ಹನ್ನೆರಡನೆಯ ಶತಮಾನ ಅಥವಾ ಬಸವಣ್ಣನ ಕಾಲಘಟ್ಟ ಕನ್ನಡ ಸಾಹಿತ್ಯ ಬರಹದ ಅತ್ಯಂತ ಉತ್ಕೃಷ್ಟ ಕಾಲವೆನ್ನಬಹುದು. ಸಾಮಾಜಿಕ, ಧಾರ್ಮಿಕ ಹೋರಾಟ ಮಾಡಿದ ಬಸವಣ್ಣನ ಪ್ರೇರಣೆ ಹಾಗೂ ಸರಳವೂ ಸುಲಭವೂ ಹಾಗೂ ಯಾವುದೇ ನಿರ್ಬಂಧವಿಲ್ಲದ 'ವಚನ ಸಾಹಿತ್ಯ' ಪ್ರಕಾರ ಕನ್ನಡ ಸಾಹಿತ್ಯವು ವಿಶ್ವಮಾನ್ಯತೆಯ ಮಟ್ಟಕ್ಕೆ ತಲುಪುವಂತೆ ಮಾಡಿತು.

"ವಚನ ಸಾಹಿತ್ಯ ಮೇಲ್ತರಗತಿಯ ಸಾಹಿತ್ಯ ಪಾಂಡಿತ್ಯ ಪ್ರತಿಭೆಗಳ ಸಂಯೋಗದಿಂದ ಉಂಟಾದ ಗ್ರಥನ ಸಾಹಿತ್ಯವಲ್ಲ, ಅನುಭಾವಿಗಳ ಆತ್ಮ ಮಥನದಿಂದ ಹೊರಹೊಮ್ಮಿದ ಮಥನ ಸಾಹಿತ್ಯ."[೩೧] ಈ ವಚನಗಳು ಕನ್ನಡ ಸಾಹಿತ್ಯದ ಅಪೂರ್ವ ಸಂಪತ್ತು. ಇಂತಹ ವಚನಗಳು

ಸಮಾಜದ ಎಲ್ಲಾ ವರ್ಗದ ಜನರಿಂದ ರಚಿತವಾಗಿದ್ದು ಒಂದು ಮಹತ್ವದ ಸಂಗತಿ. ಈ ವಚನಗಳನ್ನು ಓಲೆಗರಿಗಳಲ್ಲಿ ಬರೆದಿಟ್ಟಿದ್ದರಿಂದ ಎಲ್ಲಾರಿಗೂ ದೊರೆಯುವಂತಾಯಿತು.

ವಚನ ಸಾಹಿತ್ಯದ ನಂತರ 'ಸಾಹಿತ್ಯ ಬರಹ' ರಗಳೆ ಪ್ರಕಾರವಾಗಿ ಸೃಷ್ಟಿಯಾಯಿತು. ರಗಳೆ ಎಂದರೆ ತ್ರಿಪದಿಯ ರೀತಿಯಲ್ಲಿಯೇ ಕನ್ನಡ ನಾಡಿನ ಮಟ್ಟು, ರಗಳೆ ಪ್ರಾಕೃತದ ಪ್ರಭಾವದಿಂದ ರೂಪಗೊಂಡ ಛಂದೋಪ್ರಕಾರ ಇದನ್ನು "ಜಯಕೀರ್ತಿಯು ತನ್ನ ಛಂದೋನು ಶಾಸನದಲ್ಲಿ ರಗಟಬಂಧವೆಂದೂ ಕರೆದಿದ್ದಾನೆ."[೩೨] ಬಹುಶಃ ಕನ್ನಡ ರಗಳೆ 'ರಗಬಾ' ಎಂದಾಗಿರಬೇಕು. ರಗಳೆ ಮೂಲತಃ ಮಾತ್ರಾ ಛಂದಸ್ಸು. ಹೀಗಾಗಿ ಇದನ್ನು ಅಚ್ಚಗನ್ನಡ ಛಂದಸ್ಸು ಎಂದು ಕರೆಯಲು ಸಾಧ್ಯವಿಲ್ಲವೆಂದು ಡಿ.ಎಸ್. ಕರ್ಕಿಯವರು ಅಭಿಪ್ರಾಯ ಪಡುತ್ತಾರೆ. ಇದನ್ನು ಕನ್ನಡ ವಿಷಯ ಜಾತಿಗೆ ಸೇರಿಸಿದ್ದಾರೆ. ಇದರಲ್ಲಿ ಇಷ್ಟೇ ಸಾಲುಗಳು ಇರಬೇಕೆಂಬ ನಿಯಮವೇನು ಇಲ್ಲ. ಆದರೆ ಯಾವಾಗಲೂ ಎರಡರಡೇ ಸಾಲುಗಳು ಒಟ್ಟಾಗಿಯೇ ಇರುತ್ತವೆ. ತಾಳಲಯಗಳಿಗೆ ಅನುಗುಣವಾಗಿ ಪದಗಳ ಜೋಡಣೆಯ ಬಗೆಬಗೆಯಾಗಿ ಬರುವುದುಂಟು. ಸಾಲಿನ ಕೊನೆಯಲ್ಲಂತೂ ಪ್ರಾಸ ಇದ್ದೇ ಇರಬೇಕು. ಈ ರಗಳೆಯು ಪಂಪನ ಕಾಲದಿಂದಲೇ ಉಗಮಗೊಂಡರು ಹರಿಹರನ ಕಾಲದಲ್ಲಿ ಉತ್ತುಂಗ ಶಿಖರಕ್ಕೇರಿತು. "ಪಂಪನ ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ ಪಾಂಡವರು ಏಕಚಕ್ರ ನಗರಕ್ಕೆ ಬರುವ ಸಮಯದಲ್ಲಿ ಕಂಡುಬರುವ ನಗರ ವರ್ಣನೆಯಲ್ಲಿ 'ರಗಳೆ' ಪ್ರಯೋಗವಾಗಿದೆ.

ಅಲ್ಲಿ ಸೊಗಯಿಸುವ ಕೃತಕ ಗಿರಿಗಳಿಂ
ಕಲ್ಪತರುಗಳನೆ ಪೋಲ್ವ ಮರಗಳಿಂ"[೩೩]

ನಂತರ ನಾಗವರ್ಮನ ಛಂದೋಬುಧಿಯ ಕಾಲಕ್ಕೆ 'ರಗಳೆ' ಕನ್ನಡ ಕಾವ್ಯಗಳಲ್ಲಿ ಮೈದೋರಿದೆ. "ನಾಗವರ್ಮ, ಜಯಕೀರ್ತಿ, ಹೇಮಚಂದ್ರ ಮುಂತಾದವರು ರಗಳೆಯ ಲಕ್ಷಣವನ್ನು ಹೇಳಿದ್ದಾರೆ. ರಗಳೆಯಲ್ಲಿ ಉತ್ಸಾಹ, ಮುದಾನೀಲ ಉತ್ಸಾಹ, ಲಲಿತರಗಳೆ ಎಂಬ ಮೂರು ಬಗೆಯ ರಗಳೆಗಳು ಕಂಡುಬರುತ್ತವೆ."[೩೪] ರಗಳೆ ಸಾಹಿತ್ಯ ಪ್ರಕಾರವೂ ಹರಿಹರನನ್ನು ಕ್ರಾಂತಿಕಾರಿ ಎಂಬ ಕೀರ್ತಿಗೆ ಕೊಂಡೊಯ್ದಿತು. ರಗಳೆಯೆಂಬ ಸಾಹಿತ್ಯ ಪ್ರಕಾರವನ್ನು ಬಳಸಿ ಕಾವ್ಯಗಳನ್ನು ರಚನೆ ಮಾಡಿದ ಕೀರ್ತಿ ಹರಿಹರನಿಗೆ ಸಲ್ಲುತ್ತದೆ. ಹರಿಹರನು ರಗಳೆಯಲ್ಲಿ ಕಾವ್ಯ ರಚನೆ ಮಾಡುವ ಸಂದರ್ಭದಲ್ಲಿ ತನ್ನ ಕಾವ್ಯ ರಚನೆಗೆ ಆಯ್ಕೆ ಮಾಡಿಕೊಂಡ ವಸ್ತು ಕೂಡ ಬಹಳ ಮುಖ್ಯವಾದುದಾಗಿದೆ. ಹರಿಹರನಿಗಿಂತ ಪೂರ್ವದ ಶಿವಭಕ್ತರು ಹಾಗೂ ಶಿವಶರಣರನ್ನು ತನ್ನ ಕಾವ್ಯ ರಚನೆಯ ವಸ್ತುವಾಗಿ ಆಯ್ಕೆ ಮಾಡಿಕೊಂಡನು. ಉದಾ. ಚೋಳ ರಾಜ್ಯದ ಶಿವಭಕ್ತನಾದ ಮಾದಾರ ಚೆನ್ನಯ್ಯನ ರಗಳೆ ಬಹಳ ಪ್ರಸಿದ್ಧಿಯಾಗಿರುವಂತಹದ್ದು. ಚೋಳರಾಜನು ಚೆನ್ನಯ್ಯನ ಕಾಲಿಗೆ ಬಿದ್ದ ಸಂದರ್ಭದಲ್ಲಿ ಚೆನ್ನಯ್ಯನು

"ಏನಯ್ಯ ಚೋಳನೃಪ ನೀನಿಂತು ಬರ್ಪರೆ?
ಎನ್ನ ಕುಲಮಂ ನೋಡದಿಂತು ಬರ್ಪರೆ?
ಎನ್ನ ಜಾತಿಯನರಿಯದಿಂತು ಮಾಳ್ಪರೆ?
ಭಾನುಕುಲದರ್ಪಣನೆ ನೀನಿಂತು ಬರ್ಪರೆ?
ಪಾಲ ಬಿಡು ಚೋಳ ಎನ್ನಾಣೆ ಬಿಡು ಬಿಡು ಚೋಳ"[೨೫]

ಈ ರೀತಿ ಹೇಳಿದಾಗ ಚೋಳರಾಜನು ಇದಕ್ಕೆ

"ದೇವನೊಲ್ದನ ಕುಲಂ ಸತ್ಕುಲಂ
ಘನಮಹಿಮನೊಲ್ದನ ಜಾತಿಯೆ ನಿರ್ಮಲ ಜಾತಿ
ಶರ್ವನೊಡನುಂಡ ನಿಮ್ಮಯ ಜಾತಿಗೆ ಆಂ ಸರಿಯೆ?
ನಿಮ್ಮ ಕೆರವಿಂಗೆನ್ನ ಶಿರ ಸರಿಯೆ?
ಬಿಡೆನಯ್ಯ ನಿಮ್ಮ ಪದವಂಬಿಟ್ಟು ಬಾಳ್ವೆನೆ?"[೨೬]

ಹೀಗೆ ರಗಳೆಯಲ್ಲಿ ಅರ್ಥಪೂರ್ಣವಾಗಿ ಕಾವ್ಯವನ್ನು ಕಟ್ಟಿಕೊಟ್ಟಿದ್ದಾನೆ. ಮಾದಾರ ಚನ್ನಯ್ಯನ ರಗಳೆಯನ್ನೊಳಗೊಂಡಂತೆ ಅಲ್ಲಮಪ್ರಭುವಿನ ರಗಳೆ, ಬಸವಣ್ಣ ದೇವರ ರಗಳೆ, ಮಹಾದೇವಿಯಕ್ಕನ ರಗಳೆ, ನಂಬಿಯಣ್ಣನ ರಗಳೆ, ತಿರುನೀಲಕಂಠನ ರಗಳೆ, ಮಲುಹಣನ ರಗಳೆ, ರೇವಣ್ಣ ಸಿದ್ದೇಶ್ವರ ರಗಳೆ ಮುಂತಾದ ನೂರಕ್ಕೂ ಹೆಚ್ಚು ಶಿವಭಕ್ತರನ್ನು ಕುರಿತು ರಗಳೆ ಕಾವ್ಯವನ್ನು ರಚಿಸಿದ್ದಾನೆ. ಹಾಗೆಯೇ ಶಿವಭಕ್ತರ ಕಥೆಗಳು ಅಲ್ಲದೆ 'ಪುಷ್ಪರಗಳೆಯಂತಹ ಚರಿತ್ರವಲ್ಲದ ವರ್ಣನಾಮಯ ಭಾವಸದೃಶ್ಯದ ಅಖಂಡವಾಹಿನಿಯ ರಗಳೆಯನ್ನು ಮೊದಲು ರಚಿಸಿದನೆಂಬ ಕೀರ್ತಿಗೂ ಪಾತ್ರನಾಗಿದ್ದಾನೆ. ರಗಳೆ ಸಾಹಿತ್ಯ ಪ್ರಕಾರದ ಕಾವ್ಯ ರಚನೆಯ ಸಂದರ್ಭದಲ್ಲಿ ಕನ್ನಡ ಭಾಷೆಯಲ್ಲಿ ಒಂದು ಹೊಸ ಬದಲಾವಣೆಯ ತಿರುವು ಪಡೆಯಿತು. ಹಳಗನ್ನಡದಿಂದ ಹೊಸಗನ್ನಡಕ್ಕೆ ಸಂಕ್ರಮಣ ಹೊಂದುವ ಕಾಲದ ಪ್ರಾಯೋಗಿಕ ಶೈಲಿಯ ಸಂಕೀರ್ಣತೆ ಮತ್ತು ಹಳಗನ್ನಡದಲ್ಲಿದ್ದ ರಳ, ಕುಳ, ಕ್ಷಳಗಳ ವರ್ಜನೆ, ಪ್ರಾಸ ನಿಯಮ ತಿರಸ್ಕರಣೆ ಈತನ ಅದ್ಭುತ ಸಾಧನೆಯೆನ್ನಬಹುದು. ಹರಿಹರ ಮೂಲತಃ ಆವೇಶ ಪ್ರಧಾನವಾದ ಭಕ್ತಿ ಕವಿ. ಇಂಥ ಆವೇಶ ಮನೋ ಆಕಾಂಕ್ಷಣೆ ಪೂರ್ವಪರಂಪರೆಯ ಮಾರ್ಗ ಕಾವ್ಯ ಚಂಪೂ ರೀತಿ ಒಗ್ಗುವಿದಿಲ್ಲವೆಂದು ತಿಳಿದು ಹರಿಹರನು ರಗಳೆಯನ್ನು ತನ್ನ ಮಾಧ್ಯಮವನ್ನಾಗಿ ಮಾಡಿಕೊಂಡನು. ಶೈವಭಕ್ತಿ ಪಾರಮ್ಯವನ್ನು ಸುಲಲಿತವಾಗಿ, ನಿರಂತರವಾಗಿ, ನಾದಮಯವಾಗಿ ಪಠನೆಗೈಯಲು ಈ ಪ್ರಕಾರವು ಅತ್ಯುತ್ತಮ ಸಾಧನವಾಯಿತು.

ರಗಳೆಯ ರೂಪಗೊಂಡ ಸಾಹಿತ್ಯ ಬರಹ ಹರಿಹರನ ಕೈಯಿಂದ ಶಿವಭಕ್ತರ ಕುರಿತು ಕಾವ್ಯ ರಚನೆ ಮಾಡಿಸಿತು. ನಂತರ ಸಾಹಿತ್ಯ ಬರಹ ಷಟ್ಪದಿಯ ರೂಪ ಪಡೆಯಿತು. ೧೩ನೆಯ ಶತಮಾನದಲ್ಲಿ ಕನ್ನಡ ಭಾಷೆಯಲ್ಲಿನ ಸಾಹಿತ್ಯಯುತವಾದ ಬರಹ ಷಟ್ಪದಿ ರೂಪದಿಂದ

ಮಹಾಕಾವ್ಯ ಸೃಷ್ಟಿಸಿ ಕನ್ನಡ ಸಾಹಿತ್ಯ ಬೆಳವಣಿಗೆಗೆ ಕಾರಣವಾಯಿತು. ಷಟ್ಪದಿ ಎಂದರೆ ಆರು ಸಾಲುಗಳ ಒಂದು ಪದ್ಯ ರೂಪ. ಮೊದಲ ಮೂರು ಸಾಲುಗಳು ಉಳಿದ ಮೂರು ಸಾಲುಗಳಿಗೆ ಸಮನಾಗಿರುತ್ತದೆ. ಒಂದು, ಎರಡು, ನಾಲ್ಕು ಮತ್ತು ಐದನೆಯವು ಚಿಕ್ಕ ಸಾಲುಗಳು; ಇವುಗಳು ಪರಸ್ಪರ ಸಮನಾಗಿರುತ್ತವೆ. ಮೂರು ಮತ್ತು ಆರನೆಯ ಸಾಲುಗಳು ಇವೂ ಪರಸ್ಪರ ಸಮನಾಗಿರುತ್ತವೆ. ಮೂರು ಮತ್ತು ಆರನೆಯ ಸಾಲುಗಳು ಮಿಕ್ಕ ಸಾಲುಗಳ ಒಂದೂವರೆ ಮತ್ತು ಒಂದು ಗುರುವಷ್ಟಿರುತ್ತದೆ. ಆದಿಪ್ರಾಸಗಳು ಅನುಪ್ರಾಸಗಳು ಷಟ್ಪದಿಯಲ್ಲಿ ಕಾಣಬಹುದು. ಇದೊಂದು ಅಚ್ಚಗನ್ನಡ ಛಂದೋ ಪ್ರಕಾರ. ಅಂಕ ಛಂದಸ್ಸಿನ ಮಟ್ಟಗಳನ್ನು ಲಾಕ್ಷಣಿಕರು 'ಕರ್ನಾಟಕ ವಿಷಯ ಜಾತಿ' ಎಂದಿದ್ದಾರೆ. "ನಾಗವರ್ಮನ ಛಂದೋಬುಧಿಯಲ್ಲಿ ಮೊದಲ ಬಾರಿಗೆ 'ಷಟ್ಪದಿ'ಯ ಪ್ರಸ್ತಾಪವಿದೆ."[೩೭] ನಾಗವರ್ಮನ ಇದರ ಲಕ್ಷಣಗಳನ್ನು ತಿಳಿಸಿದ್ದಾನೆ.

ಹದಿಮೂರನೆಯ ಶತಮಾನವು ಕನ್ನಡ ಷಟ್ಪದಿಯ ವಿಕಾಸದಲ್ಲಿ ಅತ್ಯಂತ ಮಹತ್ವದ ಘಟ್ಟ. ಈ ಶತಮಾನದ ಆದಿ ಭಾಗದಲ್ಲಿದ್ದ ರಾಘವಾಂಕನೇ ಷಟ್ಪದಿಯಲ್ಲಿ ಸ್ವತಂತ್ರ ಮಹಾಕಾವ್ಯವೊಂದನ್ನು ಮೊತ್ತ ಮೊದಲು ರಚಿಸಿದ ಕವಿ. ರಾಘವಾಂಕನು ಕನ್ನಡದಲ್ಲಿ ಮೊದಲು ಸಮರ್ಥವಾಗಿ ತನ್ನ ಕಾವ್ಯಗಳಾದ 'ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚರಿತೆ, ಸೋಮನಾಥ ಚರಿತೆಗಳಲ್ಲಿ ಷಟ್ಪದಿಯನ್ನು ಬಳಸಿದ್ದಾನೆ. ಹರಿಶ್ಚಂದ್ರ ಕಾವ್ಯದಲ್ಲಿ ಬಳಕೆಯಾಗಿರುವ ಷಟ್ಪದಿ

"ತಿಳಿಗೊಳನ ಬಳಸಿ ನಳನಳಸಿ ಬೆಳೆದಳಮಾವು
ಗಳತಳದ ಮಲ್ಲಿಕಾ ಮಂಟಪದ ತಣ್ಣೆಳಲ
ತೆಲುಗಾಳಿಯೊಳು ಪುಣ್ಯವಪ್ಪು ಪುಳಿನ ಸ್ಥಳದ ಮೇಲಶೋಕೆಯ ತರುವಿನ॥
ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿ ಹಿಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿದ ಪಶುಪತಿಯಂತಿರ್ದ ಮುನಿನಾಥ ಕಣ್ಣೆಸೆದಿರ್ದನು॥"[೩೮]

ರಾಘವಾಂಕನ ನಂತರ ಹಲವು ಕವಿಗಳು ಷಟ್ಪದಿಯಲ್ಲಿ ಕಾವ್ಯ ರಚನೆ ಮಾಡಿದ್ದಾರೆ. ಷಟ್ಪದಿಯಲ್ಲಿಯೇ ಆರು ವಿಧಗಳನ್ನು ಕಾಣಬಹುದು. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ದಕ. ಈ ಬಗೆಯ ಷಟ್ಪದಿ ಸಾಹಿತ್ಯ ಪ್ರಕಾರಗಳಲ್ಲಿ ಕಾವ್ಯ ರಚನೆ ಮಾಡಿರುವುದನ್ನು ಕಾಣಬಹುದಾಗಿದೆ. ಭೀಮ ಕವಿಯು ಕ್ರಿ.ಶ.ಸು. ೧೪೦೦ರಲ್ಲಿ ಬಸವಪುರಾಣ ಭಾಮಿನಿ ಷಟ್ಪದಿಯಲ್ಲಿದೆ. ಸು. ೧೪೦೦ರ ಸಂದರ್ಭದ ಪದ್ಮಣಾಂಕನ ಪದ್ಮರಾಜ ಪುರಾಣ ವಾರ್ಧಕ ಷಟ್ಪದಿಯಲ್ಲಿದೆ. ಸು. ೧೪೦೦ರಲ್ಲಿ ಕುಮಾರವ್ಯಾಸ (ಕಾಲಘಟ್ಟದ)ನಿಂದ ರಚಿತವಾದ ಕರ್ಣಾಟಕ ಭಾರತ ಕಥಾಮಂಜರಿ ಭಾಮಿನೀ ಷಟ್ಪದಿಯಲ್ಲಿದೆ. ಸು. ೧೪೨೫ರಲ್ಲಿ ರಚಿತವಾಗಿರುವ

ಭಾಸ್ಕರನ 'ಜೀವಂಧರ ಚರಿತೆ' ಭಾಮಿನಿ ಷಟ್ಪದಿಯಲ್ಲಿದೆ. ಇದೇ ಅವಧಿಯಲ್ಲಿ ರಚಿತವಾದ ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ' ವಾರ್ಧಕ ಷಟ್ಪದಿಯಲ್ಲಿದೆ. ೧೪೩೦ರಲ್ಲಿ ರಚಿತವಾದ ಚಾಮರಸನ 'ಪ್ರಭುಲಿಂಗಲೀಲೆ' ಭಾಮಿನಿ ಷಟ್ಪದಿಯಲ್ಲಿದೆ. ಇದೇ ಕಾಲಘಟ್ಟದಲ್ಲಿ ಗುರುಬಸವನಿಂದ ಶಿವಯೋಗಾಂಗಭೂಷಣ ಪರಿವರ್ಧಿನೀ ಷಟ್ಪದಿ, ಸದ್ಗುರು ರಹಸ್ಯ ಭಾಮಿನಿ ಷಟ್ಪದಿ, ಕಲ್ಯಾಣೇಶ್ವರ ಪರಿವರ್ಧಿನೀ ಷಟ್ಪದಿ, ಸ್ವರೂಪಾಮೃತ ಭಾಮಿನೀ ಷಟ್ಪದಿ, ವೃಷಭಗೀತೆ ಭೋಗ ಷಟ್ಪದಿ, ಮನೋವಿಜಯ ಕಾವ್ಯ ಕುಸುಮಷಟ್ಪದಿ ಇಷ್ಟು ಕಾವ್ಯಗಳು ರಚನೆಯಾದವು. ಇವಲ್ಲದೆ ಮುಂದೆ ೧೯೦೦ರಲ್ಲಿ ರಚಿತವಾದ ನಂದಳಿಕೆ ಲಕ್ಷ್ಮೀನಾರಾಯಣಪ್ಪ (ಮುದ್ದಣ) ರಚಿಸಿರುವ ರಾಮಪಟ್ಟಾಭಿಷೇಕ ವಾರ್ಧಕ ಷಟ್ಪದಿಯವರೆಗೂ ಷಟ್ಪದಿ ಸಾಹಿತ್ಯ ಪ್ರಕಾರದಲ್ಲಿ ಹಲವಾರು ಕಾವ್ಯ ಪ್ರಕಾರಗಳು ರಚನೆಯಾದವು. ಷಟ್ಪದಿ ಸಾಹಿತ್ಯ ಪ್ರಕಾರದಲ್ಲಿ ಇಷ್ಟೊಂದು ಕಾವ್ಯಗಳು ರಚನೆಯಾಗಲು ಹಲವು ಕಾರಣಗಳಿವೆ. ಷಟ್ಪದಿ ದೇಸಿ ಸಂಪ್ರದಾಯಕ್ಕೆ ಸೇರಿದ ಹಾಡುಗಬ್ಬ ಹಾಡಲು ಬರುವಂತಹುದಾದುದರಿಂದ ಷಟ್ಪದಿ ಹೆಚ್ಚು ಜನಪ್ರಿಯ ಹೊಂದಿತು. ಆಧುನಿಕ ನಾಗರೀಕತೆ ನಮ್ಮ ಹಳ್ಳಿಗಳನ್ನು ಪ್ರವೇಶಿಸದೆ ಇದ್ದ ಕಾಲವೊಂದಿತ್ತು. ಈಗಿನ 'ಸಮುದಾಯ ರೇಡಿಯೋಗಳು ಅಥವಾ ಟೆಂಟ್ ಸಿನಿಮಾಗಳು ಹಳ್ಳಿಯ ಜನಗಳನ್ನು ಇನ್ನೂ ಮುಟ್ಟಿರಲಿಲ್ಲ. ಅಂದಿನ ಜನಗಳ ಬದುಕು ಪ್ರಶಾಂತವಾಗಿತ್ತು. ಸಂಜೆಯಲ್ಲಿ ಬೆಳುದಿಂಗಳ ರಾತ್ರಿಯಲ್ಲಿ ಕೋಲಾಟ, ವೀರಗಾಸೆ, ಬಯಲಾಟ, ಭಜನೆ ಮುಂತಾದವುಗಳಲ್ಲಿ ತೊಡಗಿ ವೇಳೆಯನ್ನು ಕಳೆಯುತ್ತಿದ್ದರು. ಸ್ವಲ್ಪ ವಿದ್ಯಾವಂತರಾದವರು, ಮಧ್ಯ ವಯಸ್ಸಿನವರು ಮತ್ತು ಹಿರಿಯರು ಸಂಜೆಯಾದ ಕೂಡಲೆ ಊರಿನ ಮಠದ ಕಟ್ಟೆಯ ಮೇಲೆ ದೇವಸ್ಥಾನದ ಪ್ರಾಂಗಣದಲ್ಲಿ ಅಥವಾ ಚಾವಡಿಯಲ್ಲಿ ಕುಳಿತು ಪುರಾಣ ಪ್ರವಚನಗಳನ್ನು ಕೇಳುತ್ತಿದ್ದರು. ಕನ್ನಡದ ಷಟ್ಪದಿ ಕಾವ್ಯಗಳಾದ ಹರಿಶ್ಚಂದ್ರ ಕಾವ್ಯ, ಗದುಗಿನ ಭಾರತ, ಪ್ರಭುಲಿಂಗ, ತೊರವೆ ರಾಮಾಯಣ, ಜೈಮಿನಿ ಭಾರತ, ಬಸವ ಪುರಾಣ, ಚೆನ್ನ ಬಸವ ಪುರಾಣ, ನಳಚರಿತ್ರೆಗಳನ್ನು ರಾಗವಾಗಿ ಓದಿ ವ್ಯಾಖ್ಯಾನಿಸುತ್ತಿದ್ದ ಚತುರ ಪ್ರವಚನಕಾರರನ್ನು ವಯಸ್ಸಾದವರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಪಂಡಿತ ಮಾನ್ಯ ಕವಿಗಳ ಹೆಸರನ್ನು ಹಳ್ಳಿಗರು ಸಾಕಷ್ಟಿದ್ದಾರೆ. ಆದರೆ ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶನ ಹೆಸರು ಕೇಳದವರು ವಿರಳ. ಷಟ್ಪದಿಕಾರರು ಯಾವ ರಾಜಾಶ್ರಯದಲ್ಲಿಯೂ ಇದ್ದವರಲ್ಲ. ಜನತೆಗಾಗಿ ಅವರು ಕಾವ್ಯ ಬರೆದರು. ಜನತೆಯೇ ಅವರನ್ನು ಮೆಚ್ಚಿ ಪುರಸ್ಕರಿಸಿತು.

ನಮ್ಮ ಹಳಗನ್ನಡ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಮೂರು ಕಾವ್ಯ ಸಂಪ್ರದಾಯಗಳನ್ನು ಗುರುತಿಸಬಹುದಾಗಿದೆ. ವಿದ್ವತ್ ಸಂಪ್ರದಾಯ, ದೇಸಿ ಸಂಪ್ರದಾಯ ಮತ್ತು ವಾಕ್ ಸಂಪ್ರದಾಯ ಎಂದು ಅವುಗಳನ್ನು ಹೆಸರಿಸಬಹುದು. ಮೊದಲನೆಯದು ಸಂಸ್ಕೃತದಿಂದ ಕನ್ನಡಕ್ಕೆ ಬಂದ ಛಂದಸ್ಸನ್ನು ಆಶ್ರಯಿಸಿ ಬೆಳೆಯಿತು. ಚಂಪೂ ಕಾವ್ಯಗಳು ಈ ಸಂಪ್ರದಾಯವನ್ನು ಪ್ರತಿನಿಧಿಸುತ್ತವೆ. ಕನ್ನಡದಲ್ಲಿಯೇ ಹುಟ್ಟಿ ಬೆಳೆದ ದೇಸಿ ಛಂದಸ್ಸನ್ನು ಆಶ್ರಯಿಸಿ ವಿಕಾಸ ಹೊಂದಿದ ಸಂಪ್ರದಾಯ ಎರಡನೆಯದು. ಈ ಸಂಪ್ರದಾಯಕ್ಕೆ ಸೇರಿದ ತ್ರಿಪದಿ ಅಕ್ಕರ, ರಗಳೆ, ಷಟ್ಪದಿ, ಸಾಂಗತ್ಯಗಳು

ದ್ರಾವಿಡ ಭಾಷೆಗಳಿಗೆ ಸಹಜವಾದ ಕನ್ನಡ ಪದ್ಯರೂಪಗಳು. ಈ ಸಂಪ್ರದಾಯಕ್ಕೆ ಶಿವಶರಣರ ವಚನಗಳನ್ನೂ, ಹರಿದಾಸರ ಕೀರ್ತನೆಗಳನ್ನೂ ಸೇರಿಸಬಹುದು. ಮೂರನೆಯದಾದ ವಾಕ್ ಸಂಪ್ರದಾಯ ಜಾನಪದೀಯವಾದುದು. ದೇಸಿ ಸಂಪ್ರದಾಯಕ್ಕೆ ಸೇರಿದ ಷಟ್ಪದಿಯು ಹುಟ್ಟಿದ್ದು ಕನ್ನಡ ನಾಡಿನ ಸಾಮಾನ್ಯ ಜನತೆಯ ಅಗತ್ಯ ಮತ್ತು ಹಾರೈಕೆಯಿಂದ ಬೆಳೆದಿದ್ದು ಕವಿಗಳು, ಗಮಕಿಗಳು ಮತ್ತು ಪ್ರವಚನದಿಂದ. ಮಠ, ಚಾವಡಿ, ದೇವಸ್ಥಾನ ಮತ್ತು ಅರಳಿಕಟ್ಟೆಗಳೇ ಇದರ ಆಶ್ರಯ ಸ್ಥಾನಗಳು.

ಚಂಪೂ ಸಾಹಿತ್ಯ ಪ್ರಕಾರದಲ್ಲಿ ಪಂಪ, ಪೊನ್ನ, ರನ್ನರು ಹೇಗೆ ಮುಖ್ಯರೋ ಹಾಗೆಯೇ ಷಟ್ಪದಿ ಸಾಹಿತ್ಯ ಪ್ರಕಾರದಲ್ಲಿ ಕಾವ್ಯ ರಚನೆ ಮಾಡಿ ಪ್ರಸಿದ್ಧಿ ಪಡೆದವರಲ್ಲಿ ರಾಘವಾಂಕ, ಕುಮಾರವ್ಯಾಸ ಅಷ್ಟೇ ಪ್ರಮುಖರು. ಕುಮಾರವ್ಯಾಸ ಯುಗ ಪ್ರವರ್ತಕ ಮಹಾಕವಿಯಾಗಿದ್ದಾನೆ. ಕುಮಾರವ್ಯಾಸ ಭಾರತ ಕಲಿಯದವರಿಗೆ ಕಾಮಧೇನುವಾಗಿ ಕನ್ನಡ ಜನಮನವನ್ನು ಸೂರೆಗೊಂಡಿದೆ. ಕುಮಾರವ್ಯಾಸ ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು ಎಂದು ಕುವೆಂಪುರವರು ಹೇಳಿದ್ದಾರೆ. ಷಟ್ಪದಿಯಲ್ಲಿ ರಚಿತವಾದ ರಾಘವಾಂಕ ಮತ್ತು ಕುಮಾರವ್ಯಾಸರ ಕಾವ್ಯಗಳ ಸರಳವಾದ ಭಾಷೆಯಲ್ಲಿ ಜನಭಾಷೆಯಲ್ಲಿ ಇದ್ದು ಹಾಗೂ ಹಾಡುಗಬ್ಬವಾಗಿದ್ದುದರಿಂದಲೂ ಈ ಕಾವ್ಯಗಳು ಹೆಚ್ಚು ಪ್ರಸಿದ್ಧಿಯಾದವು ಹಾಗೂ ಸಾಮಾನ್ಯರಿಗೆ ತಲುಪಿದವು. ಈ ಕವಿಗಳು ತಮ್ಮ ಕಾವ್ಯಗಳನ್ನು ಜನರು ದಿನ ಬದುಕಿನಲ್ಲಿ ಬಳಸುವ ಭಾಷೆಯಲ್ಲಿ ಬರೆದು ಸಾಮಾನ್ಯ ಜನರ ಭಾವನೆಯನ್ನು ತುಂಬಿದರು. ಆದುದರಿಂದ ಇವರ ಕಾವ್ಯಗಳು ವಿದ್ವತ್ ವರ್ಗದವರಿಂದ ಮರುಲಿಪಿಕರಣಗೊಂಡು ಹಲವಾರು ಪ್ರತಿಗಳಾಗಿ ಕಾಲದಿಂದ ಕಾಲಕ್ಕೆ ಹೊರಹೊಮ್ಮಿದರೆ ಅಕ್ಷರಜ್ಞಾನ ಪಡೆಯದ ಶ್ರಮಿಕ ವರ್ಗ ಅಥವಾ ಸಾಮಾನ್ಯರಿಂದ ಜನಪದ ಸಾಹಿತ್ಯದ ರೀತಿಯಲ್ಲಿ ಮೌಖಿಕವಾಗಿ ಬಾಯಿಂದ ಬಾಯಿಗೆ ಹರಿದಾಡುತ್ತಾ ಕಾಲದಿಂದ ಕಾಲಕ್ಕೆ ಉಳಿಯುತ್ತಾ ಸಾಗಿತು. ಇಂತಹ ಪ್ರಮುಖ ಕಾರಣಗಳು ಷಟ್ಪದಿಯಲ್ಲಿ ರಚಿತವಾದ ಸಾಹಿತ್ಯದ ಬೆಳವಣಿಗೆಗೆ ಕಾರಣವಾಯಿತು. ದೇಸಿ ಛಂದೋಪ್ರಕಾರ ಹಾಗೂ ಹಾಡುಗಬ್ಬವಾಗಿ ರೂಪುಗೊಂಡ 'ಷಟ್ಪದಿ' ರೂಪದ ಸಾಹಿತ್ಯ ಬರಹ ಕನ್ನಡ ಸಾಹಿತ್ಯ ವಿಸ್ತಾರವಾಗಿ ಬೆಳೆಯುವುದಕ್ಕೆ ಕಾರಣವಾಗಿದೆ ಎನ್ನಬಹುದು.

ಷಟ್ಪದಿ ರೂಪದಿಂದ ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆ ನೀಡಿದ 'ಕನ್ನಡ ಸಾಹಿತ್ಯದ ಬರಹ' ಕ್ರಿ.ಶ. ಸುಮಾರು ೧೩-೧೪ನೇ ಶತಮಾನದಲ್ಲಿ 'ಕೀರ್ತನೆ' ಎಂಬ ಹೊಸ ಸೃಷ್ಟಿಯಾಯಿತು. ಈ ಕೀರ್ತನ ಸಾಹಿತ್ಯ ೧೫, ೧೬, ೧೭ನೇ ಶತಮಾನದವರೆಗೆ ಅಂದರೆ ಮೂರು ಶತಮಾನಗಳ ಕಾಲ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದೆ. "ಕೀರ್ತನೆ ಎಂದರೆ ಭಾಗವತದಲ್ಲಿ ಸ್ತುತಿ, ಸ್ತೋತ್ರ ಎಂಬರ್ಥಗಳಿವೆ."[೫] ಕೀರ್ತನೆ ಎಂಬುದು ಕನ್ನಡ ಸಂವಾದಿ ಪದ. ಆದಿ ದೈವವನ್ನು ಕುರಿತು ದಾಸರು ಕಟ್ಟಿದ 'ಹಾಡುಗಬ್ಬವೇ' ಕೀರ್ತನೆಗಳು. ಕೀರ್ತನೆಗಳು ಪಲ್ಲವಿ, ಅನುಪಲ್ಲವಿ, ನಂತರ ನಾಲ್ಕು ಪಾದಗಳ ಕೆಲವು

ಪದ್ಯಗಳು ಇರುವುದು ಇದರ ರೂಪವಾಗಿದೆ. ಮಾಧ್ಯಮತೆ ತತ್ವಜ್ಞಾನ ತಾರತಮ್ಯಗಳನ್ನು ಅನುಸರಿಸಿ ದೇವತಾಸ್ತುತಿ, ಭಗವಂತನ ವಿವಿಧ ಅವತಾರ ಲೀಲೆಗಳ ಉಲ್ಲೇಖ, ಸ್ವಾಭಾವಿಕ ಒಲವು-ನಿಲುವು, ಮಾನಸಿಕ ತೊಳಲಾಟ, ಬಳಲಾಟ, ಸಮಾಜ ವಿಡಂಬನೆ ಮತ್ತು ವಿಮರ್ಶೆ, ಈ ಕೀರ್ತನೆಗಳು ವಸ್ತುವಾಗಿದೆ. ಹದಿಮೂರನೇ ಶತಮಾನ ಕೊನೆಯ ಭಾಗದಲ್ಲಿದ್ದ ನರಹರಿತೀರ್ಥರು ಪ್ರಥಮ ಕೀರ್ತನಕಾರರು. ಕೀರ್ತನೆಗಳು ಸಹ ವಚನಗಳಂತೆಯೇ ತಮ್ಮ ಇಷ್ಟದೈವದ ಅಂಕಿತದೊಂದಿಗೆ ರಚನೆಯಾಗಿವೆ. ಉದಾ. ನರಹರಿತೀರ್ಥರು ರಘುಪತಿ ಅಥವಾ ರಘುತಿಲಕ ಎಂಬ ಅಂಕತದೊಂದಿಗೆ

"ಹರಿಯೇ ಇದು ಸರಿಯೇ।
ಚರಣ ಸೇವಕದಲ್ಲಿ ಕರುಣ ಬಾರದ್ಯಾಕೆ"[೪೦]

ಈ ರೀತಿಯ ಕೀರ್ತನೆಗಳನ್ನು ರಚಿಸಿದ್ದಾರೆ. ನರಹರಿತೀರ್ಥರ ನಂತರ ದಾಸ ಸಾಹಿತ್ಯವನ್ನು ಮುಂದುವರೆಸಿದ ಕೀರ್ತಿ ಶ್ರೀಪಾದರಾಜರದು. ಇವರ ಕಾಲಘಟ್ಟ ಕ್ರಿ.ಶ. ೧೫೦೦ ಇವರು ರಂಗವಿಠಲ ಎಂಬ ಅಂಕಿತದೊಂದಿಗೆ ಕೀರ್ತನೆಗಳನ್ನು ರಚಿಸಿದರು. ಶ್ರೀಪಾದರಾಜರು ರಚಿಸಿರುವ ಒಂದು ಕೀರ್ತನೆ.

"ಒಲ್ಲೆ ನವ್ವ ನಮ್ಮನಲ್ಲ ಬಾರದಿರೆ
ತನು ಹೊರೆಯನೊಲ್ಲೆನವ್ವ ॥ಪ॥
ಹಾರ ಕೊರಳಿಗೆ ಭಾರ ಹುವ್ವಿನ
ಭಾರ ಸೈರಿಸಲಾರೆನೆ
ಮಾರನಯ್ಯನು ಬಾರದಿದ್ದರೆ
ಮಾರನಂಬಿಗೆ ಗುರಿಯ ಮಾಡಿ
ಎಲ್ಲ ದೇವರ ವಲ್ಲಭನೆಂದು
ಒಲಿದೆ ಮನ ನಿಲದೆ
ನಿಲ್ಲದೆ ಹರಿ ಪೋದ ಮಧುರೆಗೆ
ಬಿಲ್ಲ ಹಬ್ಬದ ನೆಪವ ಮಾಡಿ
ಮಂದಾನಿಲದ ಸಹಿಸಲಾಗದು
ನೊಂದೆ ಶುಕಪಿಕರವಗಳಿಂದ
ಚಂತ್ರಕಿರಣದಿ ಬೆಂದೆ ಇನ್ನೀ
ವೃಂದಾವನವೇಕವನನಗಲಿ?

ಮುನ್ನ ಆಡಿದ ಮಾತ ಮರೆತು
ಎನನ ವನದೊಳಗೀಡಾಡಿ
ವನ್ನಜಾಕ್ಷನುಬಾರ ಪುರದ
ವನ್ನಿತೆಯರನು ಮೆಚ್ಚಿ ಪೋದ
ಪೊಂಗೊಳಲ ಧ್ವನಿಗೆ ಸಿಲುಕಿ
ಬಂಗಬಟ್ಟೆನಂಗಜನಿಂದಲಿ
ಪೆಂಗಳಿಗುಚಿತವಲ್ಲ
ರಂಗ ವಿಠಲನ ತೋರದಿದ್ದಡೆ"[೪೧]

ಶ್ರೀಪಾದರಾಯರು ಸರಳವಾದ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿದರು. ಶ್ರೀಪಾದರಾಜರಾಜ ನಂತರ ಇವರ ಶಿಷ್ಯರಾದ ವ್ಯಾಸರಾಯರು ಶ್ರೀಕೃಷ್ಣ ಎಂಬ ಅಂಕಿತದೊಂದಿಗೆ ಕೀರ್ತನೆಗಳನ್ನು ರಚಿಸಿದರು. ನಂತರ ಇವರ ಶಿಷ್ಯಪರಂಪರೆಯಲ್ಲಿ ವಾದಿರಾಜ, ಪುರಂದರದಾಸ, ಕನಕದಾಸರು ಪ್ರಮುಖರು. ಕೀರ್ತನ ಸಾಹಿತ್ಯದಲ್ಲಿ ಪುರಂದರ ದಾಸರದು ದೊಡ್ಡ ಹೆಸರು. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸಿದರೆ ಒಂದೊಂದು ಪ್ರಕಾರಕ್ಕೂ ಒಬ್ಬೊಬ್ಬ ಪ್ರತಿನಿಧಿಗಳು ಕಂಡುಬರುತ್ತಾರೆ. ಚಂಪುಗೆ ಪಂಪ, ರಗಳೆಗೆ ಹರಿಹರ, ಷಟ್ಪದಿಗೆ ಕುಮಾರವ್ಯಾಸ, ವಚನಕ್ಕೆ ಬಸವಣ್ಣ ಹೇಗೋ ಹಾಗೇ ಕೀರ್ತನೆಗೆ ಪುರಂದರದಾಸರು ಮುಖ್ಯ ಪ್ರತಿನಿಧಿಗಳಾಗಿದ್ದಾರೆ. ಪುರಂದರದಾಸರ ಸಾಹಿತ್ಯ ಕೃತಿಗಳು ಗಾತ್ರ ಮತ್ತು ಗುಣದಲ್ಲಿ ಎರಡರಲ್ಲೂ ತೂಕವನ್ನು ಹೊಂದಿರುವಂತಹವು. ಇವರು 'ಪುರಂದರ ವಿಠಲ' ಎಂಬ ಅಂಕಿತದೊಂದಿಗೆ ಕೀರ್ತನೆಗಳನ್ನು ರಚಿಸಿದವರು. ಇವರ ಕೀರ್ತನೆಗಳು

"ಕೂಸನು ಕಂಡಿರಾ ಜ್ಞಾನಿಗಳೆಲ್ಲ
ಕೂಸನು ಕಂಡಿರಾ ಸಾಸಿರನಾಮದ
ಶತಕೋಟಿ ತೇಜವ ಸೂಸುವ
ಸುಖಮಯ ಜ್ಞಾನದ ಕೂಸು"[೪೨]

'ದಾಸನ ಮಾಡಿಕೋ', 'ಕಂಡು ನೀಯನ್ನ ಕೈ ಬಿಡುವರೆ', 'ಮಾನವ ಜನ್ಮ ದೊಡ್ಡದು ಅದನ್ನು ಹಾನಿ ಮಾಡಬೇಡಿ ಹುಚ್ಚಪ್ಪಗಳಿರ', 'ಈಸಬೇಕು ಇದ್ದು ಜೈಸಬೇಕು', 'ಉದರ ವೈರಾಗ್ಯವಿದು' ಮುಂತಾದ ಸಾವಿರಾರು ಕೀರ್ತನೆಗಳು ರಚನೆಯಾಗಿವೆ. ಇವರ ಸಾಧನೆಯನ್ನು ಮೆಚ್ಚಿಕೊಂಡ ಗುರು ವ್ಯಾಸರಾಯರು 'ದಾಸರೆಂದರೆ ಪುರಂದರದಾಸರಯ್ಯ' ಎಂದು ಹೊಗಳಿದ್ದಾರೆ. ಇವರು ತಾವು ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೀರ್ತನೆಗಳನ್ನು ರಚಿಸಿದ್ದೇನೆಂದು ಹೇಳಿಕೊಂಡಿದ್ದಾರೆ. ಆದರೆ ಈಗ ಸಿಕ್ಕಿರುವ ಕೀರ್ತನೆಗಳ ಸಂಖ್ಯೆ ಒಂದು ಸಾವಿರಕ್ಕೂ

ಅಧಿಕವಾಗಿವೆ. ಪುರಂದರದಾಸರರಂತೆ ಕೀರ್ತನಸಾಹಿತ್ಯದಲ್ಲಿ ಪ್ರಸಿದ್ಧಿಯನ್ನು ಪಡೆದವರು 'ಕನಕದಾಸರು' ಇವರು ಕೂಡ ವ್ಯಾಸರಾಯರ ಶಿಷ್ಯರು. ಇವರು ಜೀವನದ ಯಾವುದೋ ಒಂದು ಸಂದರ್ಭದಲ್ಲಿ ಜೀವನದಲ್ಲಿ ನಿರಸನ ಉಂಟಾಗಿ ವ್ಯಾಸರಾಯರಿಂದ ದೀಕ್ಷೆ ಪಡೆದು ಕನಕದಾಸರಾದರು. ಇವರು ಪುರಂದರದಾಸರ ಸಮಕಾಲೀನರಾಗಿ ಅವರಿಗೆ ಸಮತೂಕದವರೂ ಸ್ವತಂತ್ರ ಕ್ರಾಂತಿಯುಳ್ಳವರೂ, ವೈಚಾರಿಕ ಮನೋಧರ್ಮದವರಾಗಿದ್ದವರು. ಇವರ ಕೀರ್ತನೆಗಳಲ್ಲಿ ಸಾಮಾಜಿಕ ಕಳಾಕಳಿ ಕಂಡುಬರುತ್ತದೆ. ಹಾಗೂ ಬಂಡಾಯದ ದನಿಯನ್ನು ಹೊಂದಿವೆ. ಹಾಗೂ ವಿಡಂಬನೆ ಮತ್ತು ಸಾಮಾಜಿಕ ವಿಮರ್ಶೆಯಿದೆ. ಕನಕದಾಸರು ಜನಪದ ಭಾಷೆಯಲ್ಲಿ ರಚಿತವಾಗಿರುವ ಕೀರ್ತನೆಗಳು ಜನಮನದಲ್ಲಿ ತುಂಬಿವೆ. ತನು ನಿನ್ನದು ಜೀವನ ನಿನ್ನದು, ತಲ್ಲಣಿಸದಿರು ಕಂಡ್ಯ ತಾಳುಮನವೆ, ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ, ನನ್ನಿಂದ ನಾನೆ ಜನಿಸಿ ಬಂದೆನು ದೇವ?, ನೀ ಮಾಯೆಯೊಳಗೋ ನಿನ್ನೆರಳು ಮಾಯೆಯೋ, ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ ಮುಂತಾದ ಅನೇಕ ಕೀರ್ತನೆಗಳನ್ನು 'ಕಾಗಿನೆಲೆ ಆದಿಕೇಶವ' ಎಂಬ ಅಂಕಿತದಿಂದ ರಚಿಸಿದ್ದಾರೆ. ಕನ್ನಡ ಸಾಹಿತ್ಯ ಲೋಕಕ್ಕೆ ಕೀರ್ತನ ಸಾಹಿತ್ಯದ ಕೊಡುಗೆ ಅಪಾರವಾದುದಾಗಿದೆ. ಕನಕದಾಸರ ನಂತರ ದಾಸ ಪರಂಪರೆ ಮುಂದುವರೆದು ವಿಜಯದಾಸರು, ಜನಗನ್ನಾಥದಾಸರು, ಗೋಪಾಲದಾಸ, ಮೋಹನದಾಸ, ಪ್ರಸನ್ನ ವೆಂಕಟದಾಸ, ಹೆಳವನಕಟ್ಟೆ ಗಿರಿಯಮ್ಮ ಇವರುಗಳು ಕೀರ್ತನೆಯನ್ನು ರಚಿಸಿದ್ದಾರೆ. ಸಾಹಿತ್ಯ ಬರಹವಾದ ಕೀರ್ತನ ಪ್ರಕಾರದಲ್ಲಿ ಸಾವಿರಾರು ಕೀರ್ತನೆಗಳು ರಚನೆಯಾಗಿದ್ದು ಇವುಗಳು ಸಂಗೀತದ ಸಂಯೋಜನೆಯಿಂದಲೂ ಹಾಡಲು ಸುಲಭವಾಗಿದ್ದರಿಂದ ಜನರ ನಾಲಗೆಯ ಮೇಲೆ ಹರಿದಾಡಿದವು. ಇಂದಿಗೂ ಕೂಡ ದಾಸರ ಕೀರ್ತನೆಗಳು ಬಹಳ ಜನಪ್ರಿಯತೆಯನ್ನು ಪಡೆದಿವೆ.

ಕೀರ್ತನಾ ಸಾಹಿತ್ಯದ ನಂತರ ಸಾಹಿತ್ಯದ ಬೆಳವಣಿಗೆ 'ಸಾಂಗತ್ಯ'ವೆಂಬ ಸಾಹಿತ್ಯ ಪ್ರಕಾರದಿಂದ ಆಯಿತು. ಸಾಂಗತ್ಯವು ಅಂಶಗಣಾನ್ವಿತ ಛಂದೋರೂಪ. ಸಾಂಗತ್ಯ ಎಂಬ ಹೆಸರಿನ ಅರ್ಥವನ್ನು ನೋಡುವುದಾದರೆ ಡಿ.ಎಸ್. ಕರ್ಕಿಯವರು ತಮ್ಮ ಕೃತಿಯಾದ ಛಂದೋವಿಕಾಸದಲ್ಲಿ "ಸಾಂಗತ್ಯವು ಹಾಡುಗಬ್ಬಕ್ಕೆ ತುಂಬಾ ಆಳವಡುವಯಟ್ಟು"[೪೩] ಎಂದಿದ್ದಾರೆ. ಹಾಗೆಯೇ "ಸಾಂಗತ್ಯದ ಮೂಲ ಶಬ್ದ ಸಂಗತಿ ಒಂದು ಸಂಗತಿಯ ನಿರೂಪಣೆಗೆ ಸಾಂಗತ್ಯವೆನ್ನುವುದುಂಟು. ಹಾಡಿನ ರೂಪದಲ್ಲಿ ಒಂದು ಸಂಗತಿಯನ್ನು ನಿರೂಪಿಸುವುದೇ ಸಾಂಗತ್ಯ."[೪೪] ಸಾಂಗತ್ಯದ ಕುರಿತಂತೆ ಲಾಕ್ಷಣಿಕರಾದ ನಾಗವರ್ಮನಾಗಲಿ ಜಯಕೀರ್ತಿಯಾಗಲಿ ಸಾಂಗತ್ಯದ ಕುರಿತು ಏನು ಹೇಳಿಲ್ಲ. ಆದರೂ ಇದು ಅಚ್ಚಗನ್ನಡ ಮಟ್ಟು ಎಂಬುದರಲ್ಲಿ ಸಂದೇಹವೇ ಇಲ್ಲ. ಉದಾ.

"ಎಳೆಮಿಂಚಿನಂದದ ಬೊಂಬೆಯೋ ತಿಂಗಳ
ತಿಳಿವೆಳಗಿನೊಳಾದ ರೂಪೋ
ಪಳಕಿನ ಪುತ್ತಳಿಯೋ ಎನೆ ಕ್ರಮದಿಂದ
ಹೊಳೆವುದೊಳಗೆ ತನ್ನ ರೂಪು"[೪೫]

"ರತ್ನಾಕರವರ್ಣಿ ವಿರಚಿತ 'ಭರತೇಶ ವೈಭವ' ಕೃತಿಯಲ್ಲಿನ ಒಂದು ಪದ್ಯ. ಸಾಂಗತ್ಯವು ಅರ್ಧಸಮ ವೃತ್ತ. ಅದರ ನಾಲ್ಕು ಚರಣಗಳಲ್ಲಿ ಒಂದನೆಯ ಮತ್ತು ಮೂರನೆಯ ಚರಣವು ದೊಡ್ಡದಾಗಿದ್ದು ಎರಡು ಮತ್ತು ಮೂರನೇ ಚರಣ ಕಿರಿದಾಗಿರುತ್ತದೆ. ಹಿರಿ ಚರಣದಲ್ಲಿ ನಾಲ್ಕು ವಿಷ್ಣುಗಣಗಳು, ಕಿರಿ ಚರಣದಲ್ಲಿ ಎರಡು ವಿಷ್ಣುಗಣ ಮತ್ತು ಒಂದು ಬ್ರಹ್ಮಗಣ ಬರುತ್ತದೆ. ಏಳು ಮತ್ತು ಹದಿನಾಲ್ಕನೆಯ ಗಣಗಳು ಬ್ರಹ್ಮಗಣ ಬರಲೇಬೇಕು."[೪೬] ಸಾಂಗತ್ಯವು ವರ್ಣಕವಾಗಿರುವುದರಿಂದ ಇದು ಜನಮನಕ್ಕೆ ಹತ್ತಿರವಾದುದು. ಆದುದರಿಂದ ಸಾಂಗತ್ಯದ ಕಾವ್ಯಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದವು ಎನ್ನಬಹುದು. ಸಾಂಗತ್ಯದ ಪ್ರಕಾರದಲ್ಲಿಯೂ ಹಲವಾರು ಕಾವ್ಯಗಳು ರಚನೆಯಾದವು. ಸಾಂಗತ್ಯದ ಮೊದಲ ಪ್ರಯೋಗ ಶಿಶುಮಾಯಣನಿಂದ ಆಯಿತು. ಅಂಜನಾ ಚರಿತೆ, ತ್ರಿಪುರದಹನ ಕಾವ್ಯಗಳು ಸಾಂಗತ್ಯದಲ್ಲಿಯೇ ರಚಿತವಾದವು. ಇವನ ನಂತರ ೧೫ನೇ ಶತಮಾನದಲ್ಲಿ ಕೆಲವು ಕವಿಗಳು ಸಾಂಗತ್ಯ ಪ್ರಕಾರದಲ್ಲಿ ಕಾವ್ಯಗಳನ್ನು ಬರೆದರು. ದೇಪರಾಜ ಸೊಬಗಿನ ಸೋನೆ (ಸು. ೧೪೦೦), ಕಲ್ಯಾಣ ಕೀರ್ತಿ ಕಾಮನ ಕತೆ ಸುಮಾರು ೧೪೪೦ ಹಾಗೂ ಚಿನ್ಮಯ ಚಿಂತಾಮಣಿ, ವಿಜಯಣ್ಣ-ದ್ವಾದಾನುಪ್ರೇಕ್ಷೆ ಸು. ೧೪೫೦, ತೆಂಕಣಾಂಬಿ ಬೊಮ್ಮರಸ-ಜೀವಂಧರ ಸಾಂಗತ್ಯ ಸು. ೧೪೫೪, ನಿಜಗುಣ ಶಿವಯೋಗಿ ಪರಾಮಾನುಭವ ಬೋಧೆ ಸು. ೧೫೦೦, ೩ನೇ ಮಂಗರಸನ-ಪ್ರಭಂಜನ ಚರಿತೆ, ಶ್ರೀಪಾಲ ಚರಿತೆ, ನೇಮಿಜಿನೇಶ ಸಂಗತಿ ಸುಮಾರು ಕ್ರಿ.ಶ. ೧೫೧೧, ನಂಜುಂಡ ಕವಿ – ಕುಮಾರರಾಮನ ಕಥೆ, ಸು. ಕ್ರಿ.ಶ. ೧೫೨೫, ರತ್ನಾಕರವರ್ಣಿಯ– ಭರತೇಶ ವೈಭವ ಕ್ರಿ.ಶ. ೧೫೬೦, ಗೋವಿಂದ ವೈದ್ಯನ– ಕಂಠೀರವ ನರಸರಾಜ ವಿಜಯ, ಸು.ಕ್ರಿ.ಶ. ೧೬೫೦, ಸಂಚಿಯ ಹೊನ್ನಮ್ಮನ-ಹದಿಬದೆಯ ಧರ್ಮ ಸು. ಕ್ರಿ.ಶ. ೧೭೦೦, ಹೆಳವನಕಟ್ಟೆ ಗಿರಿಯಮ್ಮ- ಚಂದ್ರಹಾಸನ ಕಥೆ ಸು. ಕ್ರಿ.ಶ. ೧೭೫೦, ಕನ್ನಡ ಸಾಹಿತ್ಯದ ಬೆಳವಣಿಗೆಗೆ ಸಾಂಗತ್ಯ ಕವಿಗಳ ಕೊಡುಗೆ ಅಪಾರವಾಗಿದೆ. ಸಾಂಗತ್ಯವು ಹಾಡುಗಬ್ಬವಾದ್ದರಿಂದ ಜನತೆಯ ಬಾಯಲ್ಲಿ ಹರಿದಾಡತೊಡಗಿತು. ಕವಿಗಳಿಂದ ರಚಿತವಾದ ಕಾವ್ಯ ಅದನ್ನು ಪಾರಾಯಣ ಮಾಡಿ ಜನತೆಗೆ ತಲುಪಿಸುವಂತಹ ಕಾರ್ಯ ಪಾರಾಯಣ ಮಾಡುವವರಿಂದ ಆಯಿತು. ಈ ಸಾಂಗತ್ಯ ಕಾವ್ಯಗಳನ್ನು ಸಹ ಆಯಾ ಕಾಲಘಟ್ಟದಲ್ಲಿ ಹಬ್ಬ ಹರಿದಿನ ಅಥವಾ ಯಾವುದಾದರೂ ಶುಭ ಕಾರ್ಯದಲ್ಲಿ ಹಲವು ಮಂದಿ ಒಂದು ಕಡೆ ಇರುವಂತಹ ಸಂದರ್ಭದಲ್ಲಿ ರಾಗಬದ್ಧವಾಗಿ ತಾಳ ಲಯದೊಂದಿಗೆ ಸಂಗೀತ ವಾದ್ಯ ಪರಿಕರಗಳನ್ನು ಬಳಸಿ ಸಾಹಿತ್ಯ ಇಂಪಾಗಿ ಜನರ ಮನಸ್ಸಿಗೆ ಮುಟ್ಟುವಂತೆ ಹೇಳುವುದು ಅಥವಾ ಪಾರಾಯಣ ಮಾಡುವುದರಿಂದ ಜನರಿಗೆ

ತಲುಪುತ್ತಿತ್ತು. ಹಾಗೂ ಜನಮನದಲ್ಲಿ ಉಳಿದು ಬಿಡುತ್ತಿತ್ತು. ಒಂದು ಕಡೆ ಲಿಖಿತವಾಗಿ ಸಾಗಿದರೆ ಮತ್ತೊಂದು ಕಡೆ ಮೌಖಿಕವಾಗಿ ಕಾಲದಿಂದ ಕಾಲಕ್ಕೆ ಸಾಗತೊಡಗಿತು. ಅಚ್ಚಗನ್ನಡದ ದೇಸಿ ಛಂದಸ್ಸಿನ ಕಾವ್ಯಗಳೆಲ್ಲವೂ ಜನಮನಕ್ಕೆ ಹತ್ತಿರವಾಗಿವೆ ಎಂದು ಹೇಳಬಹುದು.

ಸಾಂಗತ್ಯದ ನಂತರ ಸಾಹಿತ್ಯ ಬರಹ ತ್ರಿಪದಿಯ ರೂಪದಲ್ಲಿ ರಚನೆಯಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಗೆ ಪ್ರಮುಖ ಪಾತ್ರ ವಹಿಸಿತು ಎನ್ನಬಹುದಾಗಿದೆ. ತ್ರಿಪದಿಯೆಂದರೆ ಮೂರು ಸಾಲಿನ ಪದ್ಯ. ಇದು ಅಚ್ಚಗನ್ನಡದ ಅಂಶಗಣದಿಂದ ಕೂಡಿದ ಸಾಹಿತ್ಯ ಪ್ರಕಾರ ಇದರ ಉಗಮ ಕನ್ನಡ ಸಾಹಿತ್ಯದಲ್ಲಿ ಅಧಿಕೃತವಾಗಿ ೭ನೇ ಶತಮಾನದ ಕಪ್ಪೆ ಅರಭಟ್ಟನ ಶಾಸನದಿಂದಲೇ ಗುರುತಿಸಬಹುದು. ಇದು ಕೂಡ ಹಾಡುಗಬ್ಬ ಸಾವಿರಾರು ವರ್ಷದಿಂದ ಮೌಖಿಕವಾಗಿ ಸಾಗಿಬಂದಿರುವಂತಹ ಜನಪದ ಸಾಹಿತ್ಯ ತ್ರಿಪದಿ ರೂಪದಲ್ಲಿಯೂ ಸಹ ಇರುವುದನ್ನು ಕಾಣಬಹುದಾಗಿದೆ. ತ್ರಿಪದಿ ರೂಪದ ಸಾಹಿತ್ಯ ಬರಹ

"ಅನ್ನದೇವರ ಮುಂದೆ ಇನ್ನು ದೇವರು ಉಂಟೆ?
ಅನ್ನವಿರುವ ತನಕ ಪ್ರಾಣವು ಜಗದೊಳ
ಗನ್ನವೇ ದೈವ ಸರ್ವಜ್ಞ"[೪೭]

"ಮಡದೀಯ ಬಡಿದಾನ ಮನದಾಗ ಮರುಗ್ಯಾನ
ಒಳಗ್ಹೋಗಿ ಸೆರಗ ಹಿಡಿಯೂತ ಕೇಳ್ಯಾನ
ನಾ ಹೆಚ್ಚೋ ನಿನ್ನ ತವರ್ಹೆಚ್ಚೋ"[೪೮]

ಈ ಸಾಹಿತ್ಯ ಬರಹ ಕಾವ್ಯಕ್ಕಿಂತಲೂ ಅಂದರೆ ಲಿಖಿತ ರೂಪಕ್ಕಿಂತಲೂ ಮೌಖಿಕವಾಗಿ ಹೆಚ್ಚು ರಚನೆಯಾಗಿದೆ ಎಂದು ಹೇಳಬಹುದು. ಜನಪದರ ದಿನನಿತ್ಯದ ಬದುಕಿನಲ್ಲಿ ಪಟ್ಟ ಪಾಡೆ ಹಾಡಾಗಿ ಅಸಂಖ್ಯಾತವಾಗಿ ತ್ರಿಪದಿ ರೂಪದಲ್ಲಿ ಬಂದಿವೆ. ಲಿಖಿತ ರೂಪದಲ್ಲಿಯೂ ತ್ರಿಪದಿಯೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ ಎನ್ನಬಹುದು. ಪಂಪ, ರನ್ನ, ಪೊನ್ನ ಮುಂತಾದ ಕವಿಗಳು ತಮ್ಮ ಕಾವ್ಯಗಳಲ್ಲಿ ಕೆಲವು ತ್ರಿಪದಿ ಮಾತ್ರ ಬಳಸಿದ್ದಾರೆ. ೧೨ನೇ ಶತಮಾನದಲ್ಲಿ ಅಕ್ಕಮಹಾದೇವಿಯು 'ಯೋಗಾಂಗ ತ್ರಿವಿಧಿ' ಎಂಬ ಗ್ರಂಥವನ್ನು ರಚಿಸಿದ್ದಾಳೆ. ಅಕ್ಕಮಹಾದೇವಿಯರ ನಂತರ ನಿಜಗುಣ ಶಿವಯೋಗಿ ಬರೆದ 'ಅರವತ್ತು ಮೂವರ ತ್ರಿಪದಿ' ಕ್ರಿ.ಶ. ೧೫೦ರಲ್ಲಿ ರಚಿತವಾಗಿರುವ 'ಚಂದನೆಯ ಕಥೆ' ರಾಮೇಂದ್ರ ಕವಿಯಿಂದ ರಚಿತವಾಗಿರುವ 'ಸೌಂದರ್ಯ ಕಥಾರತ್ನ' ಇವುಗಳು ರಚಿತವಾಗಿವೆ. ತ್ರಿಪದಿಯನ್ನು ತನ್ನ ಸಾಹಿತ್ಯದ ಮಾಧ್ಯಮವಾಗಿ ಆರಿಸಿಕೊಂಡು ಸಾಹಿತ್ಯ ರಚಿಸಿದವನು. ಹಾಗೂ ತುಂಬಾ ಪ್ರಸಿದ್ಧನಾದವನೆಂದರೆ ಸರ್ವಜ್ಞ, ತ್ರಿಪದಿಯಲ್ಲಿ ರಚಿತವಾಗಿರುವ ಇವನ ಸಾಹಿತ್ಯ ಸರ್ವಜ್ಞನ ವಚನೆಗಳೆಂದೆ ಪ್ರಸಿದ್ಧವಾಗಿದೆ. ಕನ್ನಡ ಸಾಹಿತ್ಯದಲ್ಲಿ ಮರೆಯಲಾಗದ ಕವಿಯಾಗಿ ಸರ್ವಜ್ಞ ಉಳಿದುಕೊಂಡಿದ್ದಾನೆ. ಸರ್ವಜ್ಞನ ವಚನಗಳು ಲೋಕಾನುಭವದಿಂದ ಕೂಡಿರುವುವುದರಿಂದ ಹಾಗೂ ವಚನಗಳ ಅರ್ಥವು

ಜನಮನಕ್ಕೆ ತುಂಬಾ ಬೇಗನೆ ಮುಟ್ಟುತ್ತದೆ. ಇಂದಿಗೂ ಜನರು ದಿನನಿತ್ಯದ ಯಾವುದಾದರೂ ಒಂದು ಸಂದರ್ಭದಲ್ಲಿ ಸರ್ವಜ್ಞನ ವಚನವನ್ನು ಹೇಳುತ್ತಾರೆ. ಅಷ್ಟರಮಟ್ಟಿಗೆ ವಚನಗಳು ಪ್ರಭಾವಿಸಿವೆ. ಇವನಿಂದ ರಚನೆಯಾದ ಇವನ ವಚನಗಳು ಲಿಪಿಕರಣದ ಮೂಲಕ ಕಾಲದಿಂದ ಕಾಲಕ್ಕೆ ಸಾಗಿದರೆ ಮತ್ತೊಂದೆಡೆ ಮೌಖಿಕವಾಗಿಯೂ ಸಾಗಿದವು. ಈ ತ್ರಿಪದಿರೂಪದ ಸಾಹಿತ್ಯ ಬರಹ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಪ್ರಮುಖ ಕಾರಣವಾಗಿದೆ ಎಂದು ಹೇಳಬಹುದು.

ಭಾಷೆಯು ಬರಹ ರೂಪಗೊಂಡ ನಂತರ ಸಾಹಿತ್ಯವಾಗಿ ಬೆಳೆಯತೊಡಗಿದ್ದು ಭಾಷಾ ಬೆಳವಣಿಗೆಯ ಪ್ರಮುಖ ಹಾದಿ ಎನ್ನಬಹುದು. ಬರಹದ ರೂಪ ಕಾಲದಿಂದ ಕಾಲಕ್ಕೆ ಬದಲಾವಣೆಗೊಂಡು ಸಾಹಿತ್ಯ ಬೆಳವಣಿಗೆಗೆ ಕಾರಣವಾಯಿತು.

### ೩.೩. ಬರಹ ತಂತ್ರಜ್ಞಾನ ಮತ್ತು ಬಹು ಮಾಧ್ಯಮಗಳು

ಪ್ರಾರಂಭದಲ್ಲಿ ಮಾನವನು ಸಂಕೇತಗಳ ಮೂಲಕ ತನ್ನ ಸುತ್ತಮುತ್ತಲಿನಲ್ಲಿ ದೊರೆಯುವಂತಹ ಪರಿಕರಗಳ ಮೇಲೆ ಬರೆಯುತ್ತಿದ್ದನು. ಕಲ್ಲಿನ ಮೇಲೆ ಬರೆಯುತ್ತಿದ್ದಚಿತ್ರರೂಪದ ಲಿಪಿ ಸಂಕೇತದಿಂದ ಹಿಡಿದು ಭಾಷಾ ಲಿಪಿಯ ಸ್ಪಷ್ಟ ರೂಪದವರೆಗೂ ಲೇಖನ ಸಾಮಾಗ್ರಿಗಳ ಪಾತ್ರ ಮುಖ್ಯವಾದುದಾಗಿದೆ.

ಡಾ.ಎಂ.ಎಂ. ಕಲ್ಬುರ್ಗಿಯವರು ಲೇಖನ ಸಾಮಾಗ್ರಿಗಳನ್ನು ಆಧಾರ, ಅಧೇಯ, ಲೇಪನವಸ್ತು ಎಂದು ಮೂರು ಬಗೆಯಾಗಿ ವಿಂಗಡಿಸಿದ್ದಾರೆ. "ಬರೆಯಲು ಆಧಾರವಾಗಿರುವ ತಾಳೆಗರಿ, ಕಾಗದ, ಅರಿವೆ, ಹಲಗೆ, ಚರ್ಮಗಳು ಆಧಾರ. ಬರೆಯುವ ಸಾಧನಗಳಾದ ಕಂಟ, ಲೇಖನಿ ಇತ್ಯಾದಿಗಳು ಅಧೇಯ. ಕಪ್ಪು, ಮಸಿ, ಬಳಪಗಳು ಲೇಪನವಸ್ತುಗಳೆನಿಸುತ್ತವೆ. ಈ ಲೇಖನ ಸಾಮಾಗ್ರಿಗಳನ್ನು ಬರಹಗಾರರು ಹಂತಹಂತವಾಗಿ ತಾಂತ್ರಿಕವಾಗಿ ಬಳಸಿಕೊಂಡರೆಂಬುದನ್ನು ನೋಡಬಹುದಾಗಿದೆ."[೪೯]

**ಶಿಲೆ ಅಥವಾ ಕಲ್ಲು:** ನಾಗರೀಕನಾಗಿ ಬೆಳೆದ ಮನುಷ್ಯ ತನ್ನ ಭಾವನೆಗಳನ್ನು ಮೊದ-ಮೊದಲು ಚಿತ್ರಗಳ ಮೂಲಕ ಬರೆದು ತೋರ್ಪಡಿಸುತ್ತಿದ್ದ. ನಂತರ ತನಗೆ ಭಾಷೆಯೊಂದು ಮೂಡಿದಾಗ ಭಾಷೆಯನ್ನು ಉಳಿಸಲು ಹಾಗೂ ಭಾಷೆಯ ಮೂರ್ತರೂಪವಾಗಿ ಲಿಪಿಯನ್ನು ಬಳಸಿದ. ಈ ಲಿಪಿಯು ಕಣ್ಣಿಗೆ ಕಾಣಬೇಕಾದರೆ ಹಾಗೂ ನಿರ್ದಿಷ್ಟವಾಗಿ ಕೆಲವು ಕಾಲ ಅದು ಹಾಗೆ ಉಳಿಯಬೇಕಾದರೆ ಪರಿಕರಗಳು ಮುಖ್ಯವಾಗಿ ಬೇಕಾಗಿತ್ತು. ಹಾಗಾಗಿ ಶಿಲೆಯನ್ನು ತನ್ನ ಲೇಖನ ಸಾಮಾಗ್ರಿಯನ್ನಾಗಿ ಮಾಡಿಕೊಂಡ.[೫೦]

ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಶಿಲೆಯಲ್ಲಿ ಬರೆದಿರುವಂತಹ ಶಾಸನ ಅಥವಾ ಇನ್ನಿತರ ಬರಹಕ್ಕೆ ಸಂಬಂಧಪಟ್ಟಂತೆ ಲಭ್ಯವಿರುವ ಪ್ರಾಚೀನ ಬರಹದ ದಾಖಲೆಯೆಂದರೆ ಕ್ರಿ.ಶ. ೪೫೦ ಕಾಲಘಟ್ಟಕ್ಕೆ ಸಂಬಂಧಿಸಿದ ಹಲ್ಮಿಡಿ ಶಾಸನ. ಕರ್ನಾಟಕದಲ್ಲಿ ಬ್ರಹ್ಮಗಿರಿ, ಜಟಿಂಗರಾಮೇಶ್ವರ, ಮಸ್ಕಿ ಈ ಸ್ಥಳಗಳಲ್ಲಿ ದೊರೆತಿರುವ ಬ್ರಹ್ಮಲಿಪಿಯ ಅಶೋಕನ ಕಾಲದ

ಶಿಲಾಶಾಸನಗಳು ನಂತರದ ಕಾಲದಲ್ಲಿ ಲಭ್ಯವಾಗಿರುವಂತಹದು. ಹಲ್ಮಿಡಿ ಶಾಸನದ ನಂತರ ಸುಮಾರು ೭ನೇ ಶತಮಾನಕ್ಕೆ ಸೇರಿದ ಬಾದಾಮಿಯ ಕಪ್ಪೆ ಆರಭಟ್ಟನ ಶಾಸನವು ಮುಖವಾದದ್ದು. ಈ ಶಾಸನವು ತ್ರಿಪದಿ ಛಂದೋ ಪ್ರಕಾರದಲ್ಲಿದೆ. ಈ ರೀತಿಯ ಶಿಲಾಶಾಸನಗಳು ಕರ್ನಾಟಕದಲ್ಲಿ ಅಲ್ಲದೆ ಕನ್ನಡ ಅರಸುಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದಂತಹ ಮಹಾರಾಷ್ಟ್ರ ಮತ್ತು ಆಂಧ್ರದ ಕೆಲವು ಭಾಗಗಳಲ್ಲಿಯೂ ದೊರೆತಿವೆ. ಕಲ್ಲಿನ ಮೇಲೆ ಕೆತ್ತುವ ಬರಹಗಳು ಇತರ ಎಲ್ಲಾ ಲಿಖಿತ ಪರಿಕರಗಳಿಗಿಂತ ದೀರ್ಘಕಾಲ ಬಾಳುವುದರಿಂದ ಇಂದಿಗೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಪ್ರಾಚೀನತೆಯನ್ನು ಉಲ್ಲೇಖಿಸುವ ಪ್ರಮುಖ ಪಾತ್ರ ಶಿಲಾಶಾಸನಗಳದ್ದಾಗಿದೆ. ಶಾಸನಗಳನ್ನು ಕಲ್ಲಿನ ಮೇಲೆ ರಚಿಸುವಾಗ ಲಿಪಿಕಾರರು ಮಾಡಿರುವಂತಹ ಯೋಜನೆ, ಅವರ ಕಾರ್ಯಕೌಶಲ್ಯ, ಅವರ ತಾಂತ್ರಿಕ ಜ್ಞಾನ ಪ್ರಶಂಸನೀಯವಾಗಿರುವಂತಹದು. ಕಲ್ಲು ಒಂದು ಬರವಣಿಗೆಯ ಸಾಧನವಾದರೂ ಪ್ರಕೃತಿಯಲ್ಲಿ ದೊರೆಯುವ ಎಲ್ಲಾ ಕಲ್ಲುಗಳು ಬರವಣಿಗೆಗೆ ಯೋಗ್ಯವಾಗಿರುವುದಿಲ್ಲ. ಆಯಾ ಪ್ರದೇಶದಲ್ಲಿ ಬರಹಕ್ಕೆ ಯೋಗ್ಯವಾದ ಕಲ್ಲನ್ನು ಆಯ್ಕೆ ಮಾಡಿ ಬರಹವನ್ನು ಅಂದವಾಗಿ ಕಲ್ಲಿನ ಮೇಲೆ ಮೂಡಿಸಿರುವುದರಲ್ಲಿ ಲಿಪಿಕಾರರ, ರೂವಾರಿಗಳ, ಕಂಡರಣೆಕಾರರ ಕೌಶಲ್ಯ ಮತ್ತು ಜ್ಞಾನವು ತಂತ್ರಜ್ಞಾನ ಅಥವಾ ತಾಂತ್ರಿಕತೆಯ ಬುನಾದಿಯೆಂದು ತಿಳಿಯಬಹುದಾಗಿದೆ.

**ತಾಳೆಗರಿ ಅಥವಾ ತಾಳಪತ್ರ:** ಪ್ರಾಚೀನ ಕಾಲದಿಂದಲೂ ಜನರು ಬರವಣಿಗೆಗೆ ಬಳಸುತ್ತಿದ್ದಂತಹ ಪ್ರಮುಖ ಬರಹದ ಸಾಮಾಗ್ರಿಯಾಗಿ ತಾಳೆಗರಿ ಅಥವಾ ತಾಳಪತ್ರವು ಕಂಡುಬಂದಿದೆ. "ತಾಳೆಮರವು ದಕ್ಷಿಣ ಭಾರತದಲ್ಲೆಲ್ಲ ಕಂಡುಬಂದಿದೆ. ಈ ತಾಳಪತ್ರವು ೧ ಅಂಗುಲದಿಂದ ೪ ಅಂಗುಲದವರೆಗೂ ಅಗಲವಾಗಿದ್ದು ೩ ರಿಂದ ೪ ಅಡಿಗಳವರೆಗೆ ಉದ್ದವಿರುತ್ತದೆ. ಈ ತಾಳೆಯ ಗರಿಗಳನ್ನು ಹಸಿದಾಗಿರುವಾಗ ಕುದಿ ನೀರಿನಲ್ಲಿ ಬೇಯಿಸಿ ನೆರಳಲ್ಲಿ ಒಣಗಿಸಿ ನುಣುಪಾದ ಗಾರೆಯ ಕಲ್ಲಿನಿಂದ ಉಜ್ಜಿ ಮೃದುವಾಗಿ ಮಾಡಿ ಅದರ ಎರಡು ಪಕ್ಕಗಳೂ ಸಮತಲವಾಗಿ ಮಾಡಿ ಬರಹಕ್ಕೆ ಯೋಗ್ಯವಾಗುವಂತೆ ಮಾಡುತ್ತಿದ್ದರು. ಈ ತಾಳಪತ್ರದಲ್ಲಿ ತಾಳ ಮತ್ತು ಶ್ರೀತಾಳ ಎಂಬ ಎರಡು ವಿಧಗಳನ್ನು ಕಾಣಬಹುದಾಗಿದೆ. ತಾಳಮರದ ಬಗ್ಗೆ ಸಾಹಿತ್ಯ ಕೃತಿಗಳಲ್ಲೂ, ವಿದೇಶಿ ಯಾಂತ್ರಿಕರ ಬರವಣಿಗೆಗಳಲ್ಲೂ ಕಾಣಬಹುದು. ಕವಿರಾಜಮಾರ್ಗ ಕಾಲದಿಂದಲೂ ತಾಳಮರದ ಉಲ್ಲೇಖ ಕಂಡುಬರುತ್ತದೆ. ೭ನೇ ಶತಮಾನದಲ್ಲಿ ಕನ್ನಡ ನಾಡಿಗೆ ಆಗಮಿಸಿದ್ದ ಚೀನಿ ಯಾತ್ರಿಕ ಹ್ಯೂಯೆನ್‌ತ್ಸಾಂಗನು ತಾಳಪತ್ರಗಳ ಮೇಲೆ ಬರೆಯುವುದು ಭರತಖಂಡದಲ್ಲಿ ಸರ್ವತ್ರ ರೂಢಿಯಾಗಿತ್ತೆಂದು ಹೇಳುತ್ತಾನೆ."[೫೧]

"ಅರಬ್ ಪ್ರವಾಸಿ ಅಲ್ಬೆರುನಿ ನಿಕಾಲೋ ಕೊಂಟಿ ಅಬ್ದುಲ್ ರಜಾಕ್, ಬಾರ್ಬೋಸಾ, ಪೀಟರ್ ಮಂಡಿ, ನಿಕಾಲೋ ಮನೂಚಿ ಇವರು ತಾಳೆಗರಿಯ ಉಲ್ಲೇಖ ಮಾಡಿದ್ದಾರೆ."[೫೨] ಬರವಣಿಗೆಯ ಆಧಾರ ಸಾಮಾಗ್ರಿಯಾಗಿ ತಾಳೆಗರಿಯನ್ನು ಬಳಸಿ ಅದರ ಮೇಲೆ ಕಂಟ, ಲೇಖನಿ, ಲಾಳದ ಕಡ್ಡಿ, ಮುಳ್ಳುಹಂದಿಯ ಮುಳ್ಳು, ಬಿದಿರಿನ ಸೀಳು, ನವಿಲು ಗರಿಯ ಕಾಂಡ

ಮುಂತಾದ ಅಧೇಯ ಸಾಧನಗಳಿಂದ ಬರೆಯುತ್ತಿದ್ದರು. ಹೀಗೆ ತಾಳೆಗರಿಯ ಮೇಲೆ ಬರೆದ ಅಕ್ಷರಗಳು ಸ್ಪುಟವಾಗಿ ಕಾಣಲು ಕಪ್ಪು ಮಸಿ, ಬಳಪಗಳನ್ನು ಲೇಪಿಸುತ್ತಿದ್ದರು. ಹೀಗೆ ಪ್ರಾಚೀನರು ಸಾಹಿತ್ಯವನ್ನು ಬರೆಯಲು ತಾಳೆಗರಿಯನ್ನು ಬಳಸಿ ಅವುಗಳನ್ನು ದೀರ್ಘ ಕಾಲ ಸಂರಕ್ಷಿಸುತ್ತಿದ್ದರು.

ಬಹುಮುಖ್ಯವಾಗಿ ಹಸ್ತಪ್ರತಿಗಳ ನಿರ್ಮಾಣದ ಹಿಂದೆ ಶ್ರಮ ಸಂಸ್ಕೃತಿಯ ತಾಂತ್ರಿಕ ಶ್ರಮ ಅಡಗಿರುವುದನ್ನು ನಾವು ಸರಿಯಾಗಿ ಅಧ್ಯಯನ ಮಾಡಿಲ್ಲ. ಬರಹ ಪೂರ್ವದಲ್ಲಿ ತಾಳಪತ್ರಗಳನ್ನು ಮರದಿಂದ ಕಡಿದು ತಂದು ಹದಗೊಳಿಸಿ ನಿಶ್ಚಿತ ಆಕಾರಕ್ಕೆ ಕತ್ತರಿಸಿ ಔಲೆಕಟ್ಟು ಅಥವಾ ಸಿವುಡುಗಳನ್ನಾಗಿ ಮಾಡುವುದು, ರಂಧ್ರ ಕೊರೆಯುವುದು, ಹಲಗೆ ಜೋಡಿಸುವುದು, ಅಲಗೆಗಳನ್ನು ನುಣುಪುಗೊಳಿಸುವುದು, ಚಿತ್ರರಚನೆ ಮಾಡುವುದು ಇಷ್ಟು ಪ್ರಕ್ರಿಯೆಗಳು ಬರುತ್ತವೆ. ಇದರಲ್ಲಿ ಕ್ರಮವಾಗಿ ಔಲೆಯುವರು ಬಡಿಗ, ಕಮ್ಮಾರ, ಚಿತ್ರಕಾರ, ವಸ್ತದವರಂತಹ ಶ್ರಮ ಸಮುದಾಯ ಪಾಲ್ಗೊಳ್ಳುತ್ತಿದ್ದವು. ಇದು ಬರಹ ಪೂರ್ವದ ಹಂತ.

ಬರಹದ ಹಂತಕ್ಕೆ ಬಂದರೆ ಕಂಟಗಳಿಂದ ಲೇಖನಗೊಳಿಸುವುದು. ಇದರಲ್ಲಿ ಲಿಪಿಕಾರ, ಬರೆಪಕಾರ ಹಾಗೂ ಲೋಹಕಾರರ (ಕಮ್ಮಾರ ಅಥವಾ ಕಂಚುಗಾರ) ಪಾಲ್ಗೊಳ್ಳುತ್ತಾರೆ. ನಂತರ ಬರುವುದು ಗ್ರಥನ ಹಂತ. ಬರೆಪಕಾರ ಗೀರಿ ಬರೆದ ಓಲೆಗಳಿಗೆ ಕಪ್ಪಿಗಿಡುವು ಅಥವಾ ಅಕ್ಷರಗಳಿಗೆ ಸ್ಫುಟತ್ವ ಕೊಡುವ ಮತ್ತು ಹೊತ್ತಿಗೆಗೇರಿಸುವ ಪಠಣಯೋಗ್ಯ ಮಾಡುವ ಕೆಲಸ ಇಲ್ಲಿನದು. ಇದರಲ್ಲಿ ಲಿಪಿಕಾರರು (ಕಪ್ಪಗಿಡು ವನರು) ಕೆಲಸ ಮಾಡುತ್ತಾರೆ. ಒಂದು ತಾಳೆಗರಿ ಬರಹಪೂರ್ವದಿಂದ ಬರಹಕ್ಕೆ ಬಂದು ಹೊತ್ತಿಗೇರಿಸುವ ಗ್ರಂಥಾಲಯದಲ್ಲಿಡುವುದು ಹಂತದಲ್ಲಿ ಕರ್ನಾಟಕದ ಶ್ರಮ ಸಮುದಾಯಗಳ ತಾಂತ್ರಿಕ ನೈಪುಣ್ಯತೆ ಇರುವುದನ್ನು ಸ್ಪಷ್ಟವಾಗಿ ಗುರುತಿದ್ದೇನೆ. ಈ ಶ್ರಮ ಸಂಸ್ಕೃತಿಯ ತಾಂತ್ರಿಕ ಪರಿಶ್ರಮವನ್ನು ಮುಂದಿನ ವಿವಿಧ ಲೇಖನ ಸಾಮಗ್ರಿಗಳ ಹುಟ್ಟು ಮತ್ತು ಬಳಕೆ ಕ್ರಮದಲ್ಲಿಯೂ ಕಾಣಬಹುದಾಗಿದೆ.

**ಭೂರ್ಜಪತ್ರ:** "ಬಹಳ ಹಿಂದಿನ ಕಾಲದಿಂದಲೂ ಬರವಣಿಗೆಗೆ ಉಪಯೋಗಿಸುತ್ತಿದ್ದ ಲೇಖನ ಸಾಮಾಗ್ರಿಯಲ್ಲಿ ಭೂರ್ಜಪತ್ರವು ಒಂದು. ಭೂರ್ಜ ವೃಕ್ಷವು ಉತ್ತರ ಭಾರತದ ಕೆಲವು ಪ್ರದೇಶಗಳಲ್ಲೂ ಹಿಮಾಲಯ ಪರ್ವತ ಶ್ರೇಣಿಯಲ್ಲೂ ವಿಪುಲವಾಗಿ ಬೆಳೆಯುತ್ತಿದ್ದು, ಇದರ ತೊಗಟೆಯನ್ನು ಸಂಸ್ಕರಿಸಿ ಬರವಣಿಗೆಗೆ ಉಪಯೋಗಿಸುತ್ತಿದ್ದರು. ಇವುಗಳನ್ನು ಹದಮಾಡಿ ಚತುರಶ್ರಕವಾಗಿ ಕತ್ತರಿಸಿ ಲೇಖನಿಯಿಂದ ಮಸಿಯಲ್ಲಿ ಅದ್ದಿ ಇವುಗಳ ಮೇಲೆ ಬರೆಯುತ್ತಿದ್ದರು. ಇಂಥ ಹಸ್ತಪ್ರತಿಗಳು ಕಾಶ್ಮೀರದ ದೇಶದಲ್ಲಿ ಅಧಿಕವಾಗಿ ದೊರೆಯುತ್ತವೆ. ಶಾರದಾ ಲಿಪಿಯಲ್ಲಿ ಭೂರ್ಜ ಪತ್ರದ ಮೇಲೆ ಬರೆದಿರುವ ಮಹಾಭಾರತದ ಆದಿಪರ್ವದ ಒಂದು ಪ್ರತಿ ತುಂಬಾ ಪ್ರಸಿದ್ಧವಾಗಿದೆ. ಪುಣೆಯ ಭಂಡಾರ್ಕರ್ ಸಂಶೋಧನ ಸಂಸ್ಥೆಯ ಪುಸ್ತಕ ಭಂಡಾರದಲ್ಲಿ ಕೆಲವೊಂದು ಭೂರ್ಜಪತ್ರಗಳ ಪ್ರತಿಗಳು ಉತ್ತರ (ಪ್ರದೇಶದಲ್ಲಿ) ದೇಶಗಳಿಂದ ಸಂಗ್ರಹಿತ ವಾದುದಾಗಿವೆ."[೫೩]

**ಹಲಗೆ:** "ಮರದಿಂದ ಮಾಡಿದ ತೆಳುವಾದ ನುಣುಪಾದ ಹಲಗೆಗಳಿಗೆ ಕಪ್ಪು ಬಣ್ಣವನ್ನು ಬಳಿದು ಅದರ ಮೇಲೆ ಬಳಪದಿಂದ ಲೇಖನವನ್ನು ಬರೆಯುತ್ತಿದ್ದರು. ಆದರೆ ಇಂಥ ಲೇಖನ ಬಹುಕಾಲ ಇರುವಂತದಲ್ಲ. ಲಿಪಿಯನ್ನು ಅಳಿಸಿಬಿಡಬಹುದು. ಇಡೀ ಗ್ರಂಥಗಳ ಬರವಣಿಗೆಗೆ ಇದನ್ನು ಬಳಸುತ್ತಿರಲಿಲ್ಲವೆಂದು ತೋರುತ್ತದೆ. ಒಂದು ಗ್ರಂಥವನ್ನು ಭಾಗಶಃ ಕವಿ ಇದರ ಮೇಲೆ ಬರೆದು ತಾನೋ ತನ್ನ ಲಿಪಿಕಾರನೋ ಅದನ್ನು ಓಲೆಯಲ್ಲಿ ಬರೆದುಕೊಂಡ ಮೇಲೆ ಅಳಿಸಿಹಾಕಿ ಮುಂದಿನ ಭಾಗವನ್ನು ಬರೆಯುತ್ತಿದ್ದಂತೆ ಊಹಿಸಬಹುದು. "ಬರೆಪಕಾರರ ಕೈಗಳ ಕೇಡು ನುಣ್ಣನಪ್ಪಳಕದ ಕೇಡು" ಎಂಬ ಪಂಪನ ಮಾತುಗಳಿಂದಲೂ "ಹಲಗೆ ಬಳಪದ ಹಿಡಿಯದೊಂದಗ್ಗಳಿಕೆ" ಎಂಬ ಕುಮಾರವ್ಯಾಸನ ಉಕ್ತಿಯಿಂದಲೂ ಇದು ಸ್ಪಷ್ಟವಾಗುತ್ತದೆ. ಮರದ ಹಲಗೆಗಳ ಮೇಲೆಯೇ ಬರೆದ ಯಾವ ಗ್ರಂಥವೂ ಸಿಕ್ಕಿಲ್ಲ. ಆದರೆ ಲಂಡನ್ನಿನ ಬಾಡ್ಲಿಯನ್ ಪುಸ್ತಕ ಭಂಡಾರದಲ್ಲಿ ಇಂಥ ಒಂದು ಹಸ್ತಪ್ರತಿಯಿದೆಯೆಂದೂ ಅದು ಅಸ್ಸಾಮ ಪ್ರದೇಶಕ್ಕೆ ಸೇರಿದ್ದೆಂದೂ ಡಾ. ವಿಂಟರ್ನಿಟ್ಸ್ ಅವರು ಹೇಳುತ್ತಾರೆ. ತಾಮ್ರಪಟಗಳ ಮೇಲೆ ಅಕ್ಷರಗಳನ್ನು ಉತ್ಕೀರ್ಣಿಸುವ ಹಾಗೆ ಮರದ ಪಟ್ಟಿಗಳ ಮೇಲೂ ಕೊರೆಯಬಹುದು. ಆದರೆ ಮರ ಸುಲಭವಾಗಿ ಒಡೆದು ಹೋಗುವುದರಿಂದಲೂ ದೀರ್ಘ ಕಾಲ ಇರಬೇಕಾದ ಯಾವ ಲೇಖನಕ್ಕೂ ಅದನ್ನು ಭಾರತೀಯರು ಉಪಯೋಗಿಸಲಿಲ್ಲವೆಂದು ತೋರುತ್ತದೆ. ಎಂದಿದ್ದಾರೆ.[೫೪]

**ಮಣ್ಣು:** ಪ್ರಾಚೀನರು ಬರಹಕ್ಕಾಗಿ ಬಳಸುತ್ತಿದ್ದ ಸಾಮಾಗ್ರಿಗಳಲ್ಲಿ ಮಣ್ಣು ಕೂಡ ಒಂದಾಗಿದ್ದು ಒಣಗಿಸಿದ ಅಥವಾ ಸುಟ್ಟ ಮಣ್ಣಿನ ಚದರ ಬಿಲ್ಲೆಗಳನ್ನು ಬರಹಕ್ಕಾಗಿ ಬಳಸುವಂತಹ ಪದ್ಧತಿ ಇತ್ತು. ಮಣ್ಣಿನಿಂದ ಮಾಡಿದ ಇತರ ಪರಿಕರಗಳಾದ ಮಡಿಕೆ ಜಾಡಿಗಳ ಮೇಲೂ ಲಿಪಿಗಳನ್ನು ಬರೆಯುತ್ತಿದ್ದರು. ಮಣ್ಣು ಹಸಿಯಾಗಿದ್ದಾಗ ಅದನ್ನು ಬೇಕಾದ ಆಕಾರ ಮಾಡಿ ಮೊಳೆ ಅಥವಾ ದಿಬ್ಬಳದಿಂದ ಅಕ್ಷರಗಳನ್ನು ಅದರ ಮೇಲೆ ಕೊರೆದು ಅಥವಾ ಬರೆದು ಅನಂತರ ಇವುಗಳನ್ನು ಒಣಗಿಸುತ್ತಲೋ ಸುಡುತ್ತಲೋ ಇದ್ದರು. ಸಿಂಧೂ ನಾಗರೀಕತೆಯಲ್ಲಿಯೇ ಮಣ್ಣಿನ ಮುದ್ರೆಗಳ ಮೇಲೆ ಬರೆದಿರುವಂತಹ ಲಿಪಿಯನ್ನು ಕಾಣಬಹುದಾಗಿದೆ. ಭಾರತದಲ್ಲಿ ಕ್ರಿ.ಶ. ಒಂದನೆಯ ಶತಮಾನದಲ್ಲಿ ಇಟ್ಟಿಗೆಗಳ ಮೇಲೆ ಬರೆದಿರುವ ಬರವಣಿಗೆಗಳು ಕಂಡುಬಂದಿವೆ. ಗೋರಖ್‌ಪುರ ಜಿಲ್ಲೆಯ ಗೋಪಾಲಪುರದಲ್ಲಿ ದೊರೆತ ಕೆಲವು ಇಟ್ಟಿಗೆಗಳ ಮೇಲೆ ಬೌದ್ಧಸೂತ್ರ ಗ್ರಂಥವನ್ನು ಬರೆದಿದೆ. ಸಾಂಚಿಯಲ್ಲಿ ದೊರೆತ ಕೆಲವು (ಇಟ್ಟಿಗೆಗಳ) ಮಣ್ಣಿನ ಮುಚ್ಚಳದ ಮೇಲೆ ಲಿಪಿ ಇದೆಯಾದರೂ ಅದನ್ನು ಓದುವುದಕ್ಕೆ ಸಾಧ್ಯವಾಗಿಲ್ಲ. ಈ ಲಿಪಿಯನ್ನು ಮಸಿಯಲ್ಲಿ ಬರೆದಿದೆ. ಕ್ರಿ.ಶ. ೫೬೬-೬೭ರಲ್ಲಿ ಆಳ್ವಿಕೆ ಮಾಡುತ್ತಿದ್ದ ವಲ್ಲಭಿರಾಜ ಮನೆತನದ ಗುಹಸೇನನ ಆಳ್ವಿಕೆಯ ಸಂದರ್ಭದಲ್ಲಿ ಮಸಿಯಿಂದ ಲಿಖಿತವಾದ ಮಡಕೆಯ ಚೂರು ಲಬ್ಧವಾಗಿದೆ. ಬರಹದ ಸಾಮಾಗ್ರಿಯಾಗಿ ಮಣ್ಣನ್ನು ಬಳಸಿ ಅದನ್ನು ಬರಹಕ್ಕೆ ಬಳಕೆ ಮಾಡಿಕೊಂಡಿರುವಂತ ಪ್ರಾಚೀನರ ತಾಂತ್ರಿಕ ಜ್ಞಾನ ಮೆಚ್ಚಬೇಕಾದುದು ಹಾಗೂ ಮುಂದಿನ ತಾಂತ್ರಿಕ ಜ್ಞಾನಕ್ಕೆ ಬುನಾದಿಯಾಗಿರುವಂತದ್ದು.

**ಸ್ಫಟಿಕ:** "ಆಂಧ್ರ ಪ್ರದೇಶದ ಕೃಷ್ಣ ಜಿಲ್ಲೆಯ ಭಟ್ಟಿಪ್ರೋಲು ಎಂಬಲ್ಲಿ ದೊರೆತಿರುವ ಸ್ಫಟಿಕದ ಮೇಲೆ ಲಿಪಿಯನ್ನು ಕೊರೆದಿದೆ. ಇದು ಒಂದೇ ಒಂದು ದೊರೆತಿದ್ದು ಈ ಸ್ಫಟಿಕದ ಮೇಲೆ ನಂದಪುರ ಎಂಬ ಊರಿನ ಹೆಸರನ್ನು ಹೇಳಿದೆ. ಆದರೆ ಸ್ಫಟಿಕದ ಮೇಲೆ ಇರುವ ಲೇಖನದ ಅಭಿಪ್ರಾಯ ಇನ್ನೂ ಸ್ಪಷ್ಟವಾಗಿಲ್ಲ."[೫೫]

**ಚರ್ಮ:** ಚರ್ಮವು ಹಿಂದಿನಿಂದಲೂ ಒಂದು ಉತ್ಪಾದಕ ವಸ್ತು ಆಗಿತ್ತು. ಇದರಿಂದ ಕೆಲವೊಂದು ವಾದ್ಯಗಳನ್ನು ತಯಾರಿಸುತ್ತಿದ್ದರು. ಚರ್ಮವನ್ನು ಹದ ಮಾಡಿದ ನಂತರ ತಮಟೆ, ದಮಡಿ ಮುಂತಾದ ವಾದ್ಯ ಪರಿಕರಗಳನ್ನು ತಯಾರಿಸುತ್ತಿದ್ದರು. ಹಾಗೆಯೇ ತಮ್ಮ ಅನಿಸಿಕೆಗಳನ್ನು ಬರೆಯಲು ಇದೊಂದು ಬರಹದ ಸಾಮಾಗ್ರಿಯಾಗಿ ಬಳಸುತ್ತಿದ್ದರು. ಆದರೆ ಸಮಾಜದಲ್ಲಿದ್ದಂತಹ ಮಡಿ–ಮೈಲಿಗೆ, ಸಂಪ್ರದಾಯ ಇತ್ಯಾದಿ ಆಚರಣೆ ಹಾಗೂ ಪವಿತ್ರ–ಅಪವಿತ್ರವೆಂಬ ನಂಬಿಕೆಗಳಿಂದ ಇದನ್ನು ಅಪವಿತ್ರ ವಸ್ತು ಎಂದು ಬರೆಯುವುದಕ್ಕೆ ಸಾಧಾರಣವಾಗಿ ಉಪಯೋಗಿಸುತ್ತಿರಲಿಲ್ಲವೆಂದು ತಿಳಿಯಬಹುದು. "ಆದರೆ ಸುಬಂಧಾವಿನ 'ವಾಸವದತ್ತಾ' ಗ್ರಂಥದಲ್ಲಿ ನಕ್ಷತ್ರಗಳನ್ನು ವರ್ಣಿಸುವಾಗ "ಪಿಶ್ಚಂಗಣಯತೋ ಧಾತುಶ್ಯಿಶಿಕಠಿನೀ ಖಂಡೇನ ತಮೋಮಷೀ ಶ್ಯಾಮೇ ಅಜಿನ ಇವ ವಿಯಂತಿ ಸಂಸಾರಸ್ಯಾತಿ ಶೂನ್ಯತ್ವಾತ್ ಶೂನ್ಯಬಿಂದವ ಇವವಿಲಿಖಿತಾಃ ತಾರಾ ವ್ಯರಾಜನ್ತ" ಎಂದು ಹೇಳಿದೆ. ಈ ಶ್ಲೋಕವನ್ನು ಗಮನಿಸಿದಾಗ ಅಜಿನ ಅಥವಾ ಚರ್ಮ ಒಂದು ಲೇಖ್ಯ ವಸ್ತುವಾಗಿತ್ತೆಂದು ಹೇಳಬಹುದು. ಪುಸ್ತ, ಪುಸ್ತಕ, ಪುಸ್ತಿಕಾ ಈ ಶಬ್ದಗಳ ಮೂಲ ಸಂಸ್ಕೃತವಲ್ಲವೆಂದೂ ಇರಾನಿಯಾ (ಪಹ್ಲವಿ) ಭಾಷೆಯಲ್ಲಿರುವ ಪೋಸ್ತ್ ಎಂಬುದು ಮೂಲವೆಂದೂ ಅದಕ್ಕೆ ಚರ್ಮ "ಚರ್ಮಕಾಗದ" ಎಂಬರ್ಥವಿದ್ದು ಪೋಸ್ತ್ ಎಂಬುದರ ಸಂಸ್ಕೃತೀಕರಣದ ರೂಪಸಿ ಪುಸ್ತಕ ಎಂದೂ ಡಾ.ಎಸ್.ಕೆ. ಚಟರ್ಜಿಯವರು ಹೇಳುತ್ತಾರೆ. ಚರ್ಮದ ಮೇಲೆ ಬರೆದಿರುವ ಯಾವ ಲೇಖನವೂ ಇದುವರೆಗೂ ಭರತಖಂಡದಲ್ಲಿ ಸಿಕ್ಕಿಲ್ಲ. ಆದರೆ ಭಾರತೀಯ ಲಿಪಿಯನ್ನುಳ್ಳ ಕೆಲವು ಚರ್ಮದ ತುಣುಕುಗಳು ಕಾಷ್‌ಗರ್‌ನಲ್ಲಿ ದೊರೆತವು. ಈಗ ಪೀಟರ್ಸ್ ಬರ್ಗ್‌ನಲ್ಲಿ ಇವೆಯೆಂದು ಜಿ. ಬೂಲರ್‌ರವರು ಹೇಳಿದ್ದಾರೆ."[೫೬]

ಪ್ರಕೃತಿಯಲ್ಲಿಯೇ ದೊರೆಯುವ ವಸ್ತುಗಳನ್ನು ಬರಹದ ಸಾಮಾಗ್ರಿಗಳಾಗಿ ಬಳಸುತ್ತಿದ್ದ ಪ್ರಾಚೀನರು ದಿನಕಳೆದಂತೆ ಲೋಹದ ಆವಿಷ್ಕಾರವಾದ ನಂತರ ಲೋಹದ ವಸ್ತುಗಳ ಮೇಲೆ ಬರೆಯುವಂತಹ ತಾಂತ್ರಿಕ ಪರಿಣಿತಿಯನ್ನು ಕಂಡುಕೊಂಡರು. ಬರಹಗಾರರು ಅಥವಾ ಲಿಪಿಕಾರರು ಲೋಹದ ವಸ್ತುಗಳಾದ ಚಿನ್ನ, ಕಬ್ಬಿಣ, ಬೆಳ್ಳಿ, ಹಿತ್ತಾಳೆ, ಕಂಚು, ತಾಮ್ರ ಈ ವಸ್ತುಗಳ ಮೇಲೆ ಬರೆಯಲು ಮಾಡಿದ ಪ್ರಯತ್ನ ಅಂದಿನ ತಾಂತ್ರಿಕ ಕೌಶಲ್ಯ ಮತ್ತು ಜ್ಞಾನಕ್ಕೆ ಉತ್ತಮ ಕೊಡುಗೆಯಾಗಿದೆ.

**ಕಬ್ಬಿಣ:** ಕಬ್ಬಿಣವನ್ನು ಹೆಚ್ಚಾಗಿ ಶಾಸನ ಬರೆಯಲು ಉಪಯೋಗಿಸುತ್ತಿರಲಿಲ್ಲ. ಕಾರಣ ಅದು ಬೇಗನೆ ತುಕ್ಕು ಹಿಡಿಯುವುದರಿಂದ ಕೆಟ್ಟು ಹೋಗುತ್ತಿತ್ತು. ಹಾಗಾಗಿ ಹೆಚ್ಚಾಗಿ ಬಳಸದೆ

ಇರುವುದು ಕಂಡುಬರುತ್ತದೆ. "ಡಿಲ್ಲಿ ಬಳಿ ಇರುವಂತಹ ೬ ಟನ್ನುಗಳಷ್ಟು ತೂಕವಿರುವಂತಹ ಒಂದು ಕಬ್ಬಿಣದ ಕಂಬದಲ್ಲಿ"[೫೭] ಗುಪ್ತವಂಶದ ಎರಡನೇ ಚಂದ್ರಗುಪ್ತನ ಶಾಸನವನ್ನು ಕಾಣಬಹುದಾಗಿದೆ.

**ಚಿನ್ನ ಮತ್ತು ಬೆಳ್ಳಿ:** ಅಂದಿನಿಂದ ಇಂದಿನವರೆಗೂ ಈ ಲೋಹಗಳ ತೆಳ್ಳನೆಯ ತಗಡುಗಳನ್ನು ಬರವಣಿಗೆಯ ಸಾಮಾಗ್ರಿಯಾಗಿ ಉಪಯೋಗಿಸುತ್ತಿರುವುದು ಕಾಣಬಹುದಾಗಿದೆ. ಈ ಆಧುನಿಕ ಯುಗದಲ್ಲೂ ಯಂತ್ರ-ಮಂತ್ರಗಳಲ್ಲಿ ನಂಬಿಕೆಯಿರುವಂತಹ ಸಂದರ್ಭದಲ್ಲಿ ಯಂತ್ರ ಬರೆಯುವುದಕ್ಕೆ ಬೆಳ್ಳಿಯ ತಗಡನ್ನು ಬಳಸುವಂತಹ ಪದ್ಧತಿಯಿದೆ. "ಪಂಜಾಬಿನ ಸಿರ್‌ಸುಕ್ ಪ್ರದೇಶದಲ್ಲಿ 'ಗಂಗು' ಎಂಬಲ್ಲಿರುವಂತಹ ಬೌದ್ಧಸ್ತೂಪವೊಂದರಲ್ಲಿ ಚಿನ್ನದ ತಗಡಿನ ಮೇಲೆ ಬರೆದ ಲಿಪಿ ದೊರೆತಿದೆ. ಆಂಧ್ರಪ್ರದೇಶದ ಕೃಷ್ಣ ಜಿಲ್ಲೆಯ ಭಟ್ಟಿಪ್ರೊಲು ಎಂಬಲ್ಲಿ ಬೆಳ್ಳಿಯ ಮೇಲೆ ಬರೆದ ಒಂದು ಲೇಖನ ಸಿಕ್ಕಿದೆ. ಇದನ್ನು ಪೂರ್ತಿಯಾಗಿ ಓದಲು ಸಾಧ್ಯವಾಗಿಲ್ಲ. ಹಾಗೆಯೇ ರಾವಲ್ಪಿಂಡಿ ಜಿಲ್ಲೆಯ ಮಾಣಿಕಿಯಾಲದಲ್ಲಿ ಬೌದ್ಧಸ್ತೂಪವೊಂದರಲ್ಲಿ ಲಿಪಿಯುಳ್ಳ ಒಂದು ಬೆಳ್ಳಿಯ ಬಟ್ಲು ದೊರೆತಿದೆ."[೫೮]

**ಹಿತ್ತಾಳೆ:** "ಅಪ್ಘಾನಿಸ್ತಾನದ 'ವರ್ದಕ್' ಎಂಬಲ್ಲಿರುವ ಸ್ತೂಪವೊಂದರಲ್ಲಿ ಬುದ್ಧನ ಅವಶೇಷವನ್ನಿಟ್ಟ ಪಾತ್ರೆಯೊಂದರ ಮೇಲೆ (ಕ್ರಿ.ಪೂ. ೬ನೆಯ ಶತಮಾನ) ಶಾಸನವಿದೆ. ಅಲಹಬಾದಿನ ಬಳಿ ಇರುವ ಕೋಶ ಎಂಬಲ್ಲಿ ಗುಪ್ತರ ಕಾಲದ ಹಿತ್ತಾಳೆಯ ಮುದ್ರೆಯುಂಗರ ದೊರೆತಿದೆ. ಈ ಹಿತ್ತಾಳೆಯ ಮುದ್ರೆಯುಂಗರದ ಮೇಲೆ ಲಿಪಿಯಿರುವುದನ್ನು ಕಾಣಬಹುದು. 'ಗಯೆ'ಯ ಬಳಿ ದೊರೆತಿರುವ ಹಿತ್ತಾಳೆ ಬುದ್ಧ ವಿಗ್ರಹದ ಪೀಠದ ಸುತ್ತಲೂ ಬರವಣಿಗೆಯಿದೆ. ಚಂಬ ಎಂಬಲ್ಲಿ ಅನೇಕ ಹಿತ್ತಾಳೆಯ ವಿಗ್ರಹಗಳಲ್ಲಿ ಬರಹವನ್ನೊಳಗೊಂಡಿರುವಂತಹದ್ದು ಲಭ್ಯವಾಗಿರುವಂತಹದ್ದನ್ನು ಕಾಣಬಹುದು."[೫೯]

**ಕಂಚು:** "ಇದು ಎರಕಹೊಯ್ಯಲು ಅನುಕೂಲವಾಗಿರುವ ಮಿಶ್ರಲೋಹ. ಮಿಶ್ರಲೋಹ. ಮುದ್ರೆಗಳನ್ನು ಮಾಡುವುದಕ್ಕಾಗಿ ಬೇಕಾದ ಅಚ್ಚುಗಳನ್ನು ಇದರಲ್ಲಿ ಮಾಡುತ್ತಿದ್ದರು. ಇಂಥ ಒಂದು ಅಚ್ಚಿನಲ್ಲಿ ಬ್ರಾಹ್ಮಿ ಖರೋಷ್ಟಿ ಮತ್ತು ಗ್ರೀಕ್ ಲಿಪಿಗಳು ದೊರೆತಿವೆ. ಪೆಷಾವರ್‌ನಲ್ಲಿ ದೊರೆತ ಒಂದು ಕಂಚಿನ ವಿಗ್ರಹದ ತಲೆಯ ಸುತ್ತ ಲಿಪಿಯಿದೆ. ಇದನ್ನು ಪೂರ್ಣವಾಗಿ ಓದಲಾಗಿಲ್ಲ. ಇವುಗಳಲ್ಲದೆ ತಾಮ್ರಪಟ್ಟಿಕೆಗಳನ್ನು ಪೋಣಿಸುವ ಉಂಗುರದ ಇಕ್ಕೆಡಗಳನ್ನು ಜೋಡಿಸಿ ಬೆಸೆದಿರುವ ಹಲವು ರಾಜಲಾಂಛನ ಮುದ್ರೆಗಳು ದೊರೆಯುತ್ತವೆ."[೬೦]

**ತಾಮ್ರ:** ಪ್ರಾಚೀನರು ಬರವಣಿಗೆಯ ಸಾಮಾಗ್ರಿಯಾಗಿ ತಾಮ್ರವನ್ನು ಹೆಚ್ಚಿನದಾಗಿ ಬಳಸಿಕೊಂಡಿದ್ದಾರೆ. ಹಲವಾರು ಶಾಸನಗಳು ತಾಮ್ರದಲ್ಲಿಯೇ ಇರುವುದನ್ನು ಕಾಣಬಹುದಾಗಿದೆ. "ತಾಮ್ರದ ದಪ್ಪನಾದ ತಗಡುಗಳ ಮೆಲೆ ಬರೆಯುವ ರೂಢಿಯಿದ್ದು ಈ ತಾಮ್ರ ಪಟ್ಟಿಗೆಗಳ ಅಗಲ ೨೧ ಅಂಗುಲಗಳಿಂದ ಹಿಡಿದು ೨೧ ಅಡಿಗಳವರೆಗೂ ಉದ್ದ ೧ ಅಡಿಯಿಂದ

ಹಿಡಿದು ೨೧ ಅಡಿಗಳವರೆಗೂ ಇರುತ್ತದೆ. ಕ್ರಿಪೂ. ೪೬ಕ್ಕೆ ಸೇರಿದ ಅತಿ ಪ್ರಾಚೀನವಾದ ತಾಮ್ರಪಟ್ಟಿಕೆ ಪಂಜಾಬಿನ ಭಾವಲ್ಪುರ ಪ್ರದೇಶದ ಶ್ರೀವಿಹಾರದಲ್ಲಿ ದೊರೆತಿರುವಂತಹದು. ಚಿನ್ನ, ಬೆಳ್ಳಿ, ಕಂಚು, ಹಿತ್ತಾಳೆ, ತಾಮ್ರ ಇವುಗಳಿಂದ ಮಾಡಿದ ಪೂಜಾ ಪಾತ್ರೆಗಳೂ ಗಂಟೆ ಜಾಗಟೆಗಳೂ ಹಲವು ದೇವಾಲಯಗಳಲ್ಲಿ ಇಂದಿಗೂ ದೊರೆಯುವುದನ್ನು ಕಾಣಬಹುದಾಗಿದೆ.[೮]

**ಕಾಗದ:** ಬರೆಯಲು ತಾಳೆಗರಿಯಂತೆ ಉಪಯೋಗಿಸಲ್ಪಡುತ್ತಿದ್ದಂತಹ ಮತ್ತೊಂದು ಬರಹದ ಸಾಧನವೆಂದರೆ ಕಾಗದ. "ಈ ಕಾಗದ ಎಂಬ ವಸ್ತು ಮತ್ತು ಶಬ್ದವೂ ಭಾರತ ದೇಶಕ್ಕೆ ಬಂದದ್ದು ಮಹಮ್ಮದಿಯರ ಮೂಲಕ. ಇದರ ಹಿಂದೂಸ್ತಾನಿ ರೂಪ 'ಕಾಗಜ್' ಗುಜರಾತಿನಲ್ಲಿ ದೊರೆತಿರುವ ಒಂದು ಕಾಗದ ಹಸ್ತಪ್ರತಿ ಕ್ರಿ.ಶ. ೧೨೨೦-೨೪ರ ಕಾಲಕ್ಕೆ ಸೇರಿದ್ದೆಂದು ತಿಳಿಯಲಾಗುತ್ತದೆ. ಕನ್ನಡ ನಾಡಿನಲ್ಲಿ ಕಾಗದವನ್ನು ಲೇಖ್ಯವಸ್ತುವನ್ನಾಗಿ ಉಪಯೋಗಿಸುವಂತಹ ರೂಢಿ ಸುಮಾರು ಕ್ರಿ.ಶ. ೧೪೫೦ರ ಸುಮಾರಿನಲ್ಲಿ ಆರಂಭವಾಗಿತ್ತೆನ್ನಬಹುದು. ಅಭಿನವ ಮಂಗರಾಜನು "ಪುತ್ತಳಿಕೆಯೆನಲು ಕಾಗದ ಮಕ್ಕು ದೌತಿ ಮಸಿಪಾತ್ರೆಯಕ್ಕು ಕಲಮ ಲೇಖನಿಯಕ್ಕು" ಎಂದು ಹೇಳಿದ್ದಾನೆ. ಗೋವಿಂದ ವೈದ್ಯನು ೧೬೪೮ರಲ್ಲಿ ರಚಿತವಾದ ತನ್ನ "ಕಂಠೀರವ ನರಸರಾಜ ವಿಜಯ"ದಲ್ಲಿ ಕಾಗಜ ಶಬ್ದವನ್ನು ಬಳಸಿದ್ದಾನೆ. ಇದು ಸ್ವಲ್ಪ ಮಂದವಾಗಿಯೂ ಒರಟಾಗಿಯೂ ಮಾಸಲು ಬಿಳುಪು ಬಣ್ಣದ್ದಾಗಿಯೂ ಇದ್ದು ಇದರ ಮೇಲೆ ಮಸಿಯಲ್ಲಿ ಬರೆಯುತ್ತಿದ್ದರು. ರಾಜರು ಅವರ ಅಧಿಕಾರಿಗಳೂ ಪಾಳೆಯಗಾರರೂ ತಂತಮ್ಮ ನಿರೂಪಗಳನ್ನು ಸನ್ನದುಗಳನ್ನು ಸಾಧಾರಣವಾಗಿ ಇಂಥ ಕಾಗದದ ಮೇಲೆ ಬರೆಯುತ್ತಿದ್ದರು. ದಕ್ಷಿಣ ಕರ್ನಾಟಕದಲ್ಲಿ ಕಾಗದದ ಹಸ್ತಪ್ರತಿಗಳು, ಸಾಹಿತ್ಯ ಕೃತಿಗಳಿಗೆ ಸಂಬಂಧಿಸಿದವು ಹೆಚ್ಚಾಗಿ ದೊರೆತಿಲ್ಲ. ಆದರೆ ಉತ್ತರ ಕರ್ನಾಟಕದಲ್ಲಿ ಇವು ಹೇರಳವಾಗಿ ಲಭ್ಯವಾಗಿವೆ. ಇದನ್ನು 'ಕೋರಿ ಕಾಗದ' ಎಂದು ಕರೆಯುವ ರೂಢಿ ಇದ್ದಿತು."[೭]

**ಅರಿವೆ:** ತಾಳೆಗರಿ, ಸ್ವದೇಶಿ ಕಾಗದ, ವಿದೇಶಿ ಕಾಗದಗಳನ್ನು ಬಿಟ್ಟರೆ ನಿರೂಪ ಮೊದಲಾದವುಗಳ ಬರವಣಿಗೆಗಾಗಿ ಕೆಲವೊಮ್ಮೆ ಅರಿವೆಯನ್ನು ಬಳಸುತ್ತಿದ್ದರೂ, ಗ್ರಂಥಲೇಖನಕ್ಕೆ ಬಳಸಿಲ್ಲವೆಂದು ತೋರುತ್ತದೆ. ಗಧಾಯುದ್ಧದ ಕಾವ್ಯದಲ್ಲಿ "ಶರಮೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ ಗಜಮದ ಮಸಿಂ ತರಿಸಿ, ಪತಾಕ ಪಟದೊಳ್ ಬರೆದಬ್ಬಿದನ್ ಎಂಬ ಉಕ್ತಿ ಅರಿವೆಯ ಕುರಿತಾದ ಮಾತನ್ನು ಸಮರ್ಥಿಸುತ್ತದೆ. ಅರಿವೆಯನ್ನು ಬರವಣಿಗೆಗೆ ಬಳಸಿರುವುದು ಕಡಿಮೆ. ಕಾರಣ ಇದರ ಎಳೆಗಳು ಲೇಖನಿಯನ್ನು ಹಿಡಿತ್ತವೆ. ಬರವಣಿಗೆ ಸುಗಮವಾಗಿ ಸಾಗುವುದಿಲ್ಲ. ಆದುದರಿಂದ ಅಂದಿನ ಬಟ್ಟೆ ಕುಂಚದಲ್ಲಿ ಬರೆಯುತ್ತಿದ್ದರು. ಆದರೂ ಭಾರತದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ಬಟ್ಟೆಯನ್ನು ಸಂಸ್ಕರಿಸಿ ಬರವಣಿಗೆಗೆ ಸಿದ್ಧಪಡಿಸಿ ಬಳಸಿರುತ್ತಾರೆ. ಇದನ್ನು ಕಡಿತವೆಂದು ಕರೆಯುವುದು. ಇದೇ ಹಿನ್ನೆಲೆಯಲ್ಲಿ ಹಾಗೂ ಸಾಹಿತ್ಯ ಕೃತಿಗಳಲ್ಲಿ 'ಕಡತ'ವೆಂದು ಉಲ್ಲೇಖವಾಗಿದೆ. ಸುಮಾರು ಒಂದು ಅಡಿ/ಅರ್ಧ ಅಡಿ ಅಗಲದ ಸುಮಾರು ೧೦ ಅಡಿ ಉದ್ದದ ಬಟ್ಟೆಯನ್ನು ತಯಾರಿಸಿ ಅದಕ್ಕೆ ಹುಣಸೆ (ಅಂಟಿಗೆ ಮೊದಲೇ)

ಬೀಜದಿಂದ ಮಾಡಿದ ಅಂಟನ್ನು ಸವರುತ್ತಿದ್ದರು. ಹುಣಸೆಯ ಅಂಟಿಗೆ ಮೊದಲೇ ಕಪ್ಪು ಮಸಿಯನ್ನು ಸೇರಿಸುತ್ತಿದ್ದುದರಿಂದ ಇದು ಕಪ್ಪಾಗಿರುತ್ತಿತ್ತು. ಇದನ್ನು ಅಳತೆಯ ಒಂದರ ಮೇಲೊಂದು ಬರುವಂತೆ ಮಡಚುತ್ತಿದ್ದರು. ಇದರ ಮೇಲೆ ಬಳಪದಿಂದ ಬರೆಯುತ್ತಿದ್ದರು. ಈ ಕಡತದಲ್ಲಿ ಎರಡು ಕಡೆ ಬರೆಯಬಹುದಾಗಿತ್ತು. ಇದರ ಎರಡು ಅಂಚುಗಳನ್ನು ಹಲಗೆಗೆ ಅಂಟಿಸಿ ಹಲಗೆಯನ್ನು ಬಣ್ಣದ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಈ ಕಡತಗಳನ್ನು ಸಾಮಾನ್ಯವಾಗಿ ಲೆಕ್ಕಪತ್ರಗಳಿಗೆ ಬಳಸಿರುವುದನ್ನು ಕಾಣಬಹುದಾಗಿದೆ. ಇದರ ಉಲ್ಲೇಖ ಕರ್ನಾಟಕದಲ್ಲಿ ಮಧ್ಯಯುಗದಷ್ಟು ಪ್ರಾಚೀನವಾಗಿದೆ.

ಅಂತು ಭರತಾವನೀವಮಂಡಳ ಷಟ್ಖಂಡಮಂ ಕಡತಕ್ಕೆ ತಂದು
ಕಡತಕ್ಕೇರಿತು ನಾಲ್ಕುಂ ಕಡಲ ಕಡೆದರಂ ಧಾತ್ರಿ
ಚೇರಮನ ಚೋಳನ ಪಾಂಡ್ಯನ ನಾಡೆ ಕೈಣಿವಂ
ದುದು ಕಡತಕ್ಕ ಮುಂಡಿಗೆಗ ಮೋಲೆಗವಿ ಶುಭತಂಗದೇವಾ

ಎಂಬ ಉಲ್ಲೇಖಗಳು ಕರ್ನಾಟಕದಲ್ಲಿ ಬಳಕೆಯಾಗುತ್ತಲಿದ್ದ ಕಡತಗಳ ಪ್ರಾಚೀನತೆಯನ್ನು ಸೂಚಿಸುತ್ತವೆ. ಶಾಸನಗಳಲ್ಲಿ ಕಡತವೆರ್ಗ್ಗಡೆ ಪದವಿದೆ. ಕಡತದ ಚಾವಡಿಯ ಉಲ್ಲೇಖವೂ ಕೆಲವೆಡೆ ಬರುತ್ತದೆ. ಕನ್ನಡ ಕವಿಗಳು ಈ ಪದವನ್ನು ಆಗಾಗ ಬಳಸಿದ್ದಾರೆ. ಮಕ್ಕಳು ಸಾಲೆಗೆ ಹೋಗುವಾಗ ಕಡತವನ್ನು ಒಯ್ಯುತ್ತಿದ್ದರೆಂದು ಪಾಯಣವರ್ಣಿ ಹೇಳಿದ್ದಾನೆ. "ಬರಹವನರಿಯೆನಾ ಪದವಿಟ್ಟು ಕಡತದೊಳು ಮಾಡಿದ ಕೃತಿಯಲ್ಲ" ಎಂಬ ಕನಕದಾಸನ ಮಾತು ಕಾವ್ಯದ ಕಚ್ಚಾ ಬರವಣಿಗೆಗೂ ಇದನ್ನು ಬಳಸುತ್ತಿರಬೇಕು ಎಂಬುದನ್ನು ಸೂಚಿಸುತ್ತದೆ. ಇಂದಿಗೂ ಮಠ–ಮಾನ್ಯಗಳಲ್ಲಿ, ದೇಶಮುಖ ಮೊದಲಾದ ಮನೆತನಗಳಲ್ಲಿ, ಪ್ರಾಚ್ಯಸಂಶೋಧನ ಸಂಸ್ಥೆಗಳಲ್ಲಿ ಕಡತಗಳನ್ನು ಕಾಣಬಹುದು."[೬೩]

ಬರಹಕ್ಕೆ ಆಧಾರ ವಸ್ತುಗಳು ಹೇಗೆ ಮುಖ್ಯವೋ ಹಾಗೆಯೇ ಅಧೇಯ ವಸ್ತುಗಳು ಮುಖ್ಯವಾಗಿವೆ. ಆಧೇಯ ಸಾಮಾಗ್ರಿಗಳನ್ನು ಈ ಕೆಳಕಂಡಂತೆ ತಿಳಿಯಬಹುದಾಗಿದೆ.

**ಕಂಠ:** "ಕಂಠವು ಲಿಪಿಕಾರರು ತಾಳೆಗರಿಯ ಮೇಲೆ ಬರೆಯಲು ಡಬ್ಬಣದಂಥ ಉಪಕರಣ(ವಾದ) ಇದರ ತುದಿಯು ಮುಳ್ಳಿನಂತೆ ಇದ್ದುದರಿಂದ ಕಂಟವೆಂದು ಕರೆಯುತ್ತಿದ್ದರು. ಕನ್ನಡ ಸಾಹಿತ್ಯದ ಕೆಲವೊಂದು ಕಾವ್ಯಗಳಲ್ಲಿ ಕಂಠ ಎಂಬ ಪದ ಪರ್ಯಾಯ ರೂಪದಲ್ಲಿಯೂ ಇರುವಂತಹದ್ದನ್ನು ಕಾಣಬಹುದಾಗಿದೆ. 'ಕಂಟಮೊನೆ ಬಾಳ್ಮೊನೆಯಾಗಿರೆ ಎಂಬ ಜನ್ನನ ಉಲ್ಲೇಖವು ಬಳಸಿ ಬರೆಯಲು ಕಂಟ ಪತ್ರದ ಉಲುಹುಗೆಡದಗ್ಗಳಿಕೆ' ಎಂಬ ಕುಮಾರವ್ಯಾಸನ ಹೇಳಿಕೆಗಳೂ ಕಂಟದ ಪ್ರಾಚೀನತೆ ಪ್ರಸಿದ್ಧಿಗೆ ಉದಾಹರಣೆಯೆನಿಸಿದೆ. ಕಂಠವನ್ನು ಕಬ್ಬಿಣ, ಕಂಚು, ಹಿತ್ತಾಳೆ ಲೋಹಗಳಿಂದ ಸಿದ್ಧಮಾಡುತ್ತಿದ್ದರೂ ತುದಿ ಮಾತ್ರ ಕಬ್ಬಿಣ ಇಲ್ಲವೆ ಉಕ್ಕಿನದಾಗಿರುತ್ತಿತ್ತು. ಈ ಕಂಠವನ್ನು ನಾವು ಹಿಡಿಯುವು(ದು) ಲೆಕ್ಕಣಿಕೆ ರೀತಿಯಲ್ಲಿಯೇ

ಹಿಡಿದು ಬರೆಯುತ್ತಿದ್ದರೆಂದು ಸೋಮನಾಥಪುರದ ದೇವಾಲಯದ ಬರಹಗಾರನ ಶಿಲ್ಪದಿಂದ ವ್ಯಕ್ತವಾಗುತ್ತದೆ. ಇಟ್ಟಿಗೆ, ದಂತ, ಚಿತ್ರ, ಶಿಲ್ಪ, ಕಮ್ಮರ ಕೆಲಸ ಮಾಡುವ ಅಯ್ಯಣ್ಣನನ್ನು ಕುರ್ತಕೋಟಿ ಶಾಸನ 'ಕಂಟದ ಬೊಮ್ಮ' ಎಂದು ಕರೆದಿದೆ. ಈ ಕಂಠಗಳಿಂದ ತಾಳೆಗರಿಗಳ ಮೇಲೆ ಅಕ್ಷರಗಳನ್ನು ಕೊರೆಯುತ್ತಿದ್ದರು."[೬೪]

**ಲೇಖನಿ:** "ಕಾಗದದ (ಮೇಲೆ) ಪ್ರತಿಯ ಮೇಲೆ ಬರೆಯಲು ಉಪಯೋಗಿಸುತ್ತಿದ್ದಂತಹ ಸಾಧನವನ್ನು ಲೇಖನಿ ಎನ್ನುತ್ತಿದ್ದರು. ಕಲಾಮ ಲೇಖನಿಯಕ್ಕುಂ ಎನ್ನುತ್ತ ಮಂಗರಾಜ ನಿಘಂಟು ಇದರ ಪರ್ಯಾಯನಾಮ 'ಕಲಾಮು' ಎಂದು ತಿಳಿಸುತ್ತದೆ. ಇದಕ್ಕೆ ಲೆಕ್ಕಣಿಕೆಯೆಂಬ ಇನ್ನೊಂದು ಹೆಸರು ಬಳಕೆಯಲ್ಲಿದ್ದಿತು. ಬಿದಿರಿನ ಗಲಗನ್ನು, ನವಿಲುಗರಿಯನ್ನು ಇಲ್ಲವೆ ಮುಳ್ಳಹಂದಿಯ ಮುಳ್ಳನ್ನು ಇದಕ್ಕಾಗಿ ಬಳಸುತ್ತಿದ್ದರು. ಮುಳ್ಳು (ಕಂಟಕ) ಕಾರಣವಾಗಿ 'ಕಂಟ' ಎಂಬ ಹೆಸರು ಇದಕ್ಕೆ ರೂಢವಾದಂತೆ ತೋರುತ್ತದೆ. ಧವಲಾ, ಜಯ, ಧವಲಾ, ಮಹಾಧವಲಾ, ತಾಳೆಗ್ರಂಥಗಳಾಗಿದ್ದರೂ ಇವುಗಳ ಮೇಲೆ ಅರಗಿನ ಮಸಿ ಬಳಸಿ, ಲೆಕ್ಕಣಿಕೆಯಿಂದ ಬರೆದಿರುವುದು ವಿಶೇಷವಾಗಿದೆ."[೬೫]

ಲೇಖನ ಸಾಮಾಗ್ರಿಗಳಾದ ಆಧಾರ, ಆಧೇಯ, ಲೇಪನವಸ್ತುಗಳಲ್ಲಿ ಆಧಾರ ಆಧೇಯ ವಸ್ತುಗಳ ಹಾಗೆ ಲೇಪನ ವಸ್ತುಗಳು ಮುಖ್ಯವಾಗಿವೆ.

**ಕಪ್ಪು-ಮಸಿ-ಬಳಪ:** "ಈ ಕಪ್ಪು-ಮಸಿ-ಬಳಪವನ್ನು ತಾಳೆಗರಿಯ ಮೇಲೆ ಕಂಠದಿಂದ ಅಕ್ಷರಗಳನ್ನು ಬರೆದ ಮೇಲೆ ಬಳಸುತ್ತಿದ್ದರು. ಕಾರಣ ಅಕ್ಷರಗಳು ಸ್ಫುಟವಾಗಿ ಕಾಣಲು. ಬರವಣಿಗೆಗಾಗಿ ಬಳಸುವ ಲೇಪನ ಸಾಮಾಗ್ರಿ ಓಲೆಗೆ ಲೇಹ್ಯ, ಕಾಗದಕ್ಕೆ ದ್ರವ, ಕಡತ ಹಲಗೆಗಳಿಗೆ ಘನರೂಪವಾದ ವಸ್ತುಗಳನ್ನು ಬಳಸುತ್ತಿದ್ದರು. ಕಪ್ಪಿಗೆ ಸಂಬಂಧಿಸಿದಂತೆ ದೊಡ್ಡಯ್ಯ ತನ್ನ ಚಂದ್ರಪ್ರಭ ಚರಿತೆಯಲ್ಲಿ ಬಾಣಪೇಳಿದ ಕಾದಂಬರಿ ಕಾವ್ಯವ। ಕ್ಷೋಣಿಯರಿಕೆಯೊಳು ಸುಡಿಸಿ। ಮಾಣದೆ ಲೀಲಾವತಿಗೆ ಕಪ್ಪಿಡಿಸಿದ। ಜಾಣ ನೇಮಿಯ ಬಲಗೊಂಬೆ॥ ಎಂದು ಹೇಳುತ್ತಾನೆ. ಇದರ ಅರ್ಥ ನೇಮಿಚಂದ್ರನು ಬಾಣ ಕಾದಂಬರಿಯನ್ನು ಸುಡಿಸಿ ಅದರ ಕಪ್ಪನ್ನು ತನ್ನ ಲೀಲಾವತಿ ಕೃತಿಗೆ ಲೇಪಿಸಿದನೆಂದು ಹೇಳುತ್ತಾನೆ. ಈ ಕಪ್ಪನ್ನು ಹೇಗೆ ಸಿದ್ಧಪಡಿಸುತ್ತಿದ್ದರು ಎಂಬುದಕ್ಕೆ "ಬಿಳಿಯ ದಾಸಿವಾಣದ ಬಡಗಹರಿದ ಬೇರಂ ತಂದು, ಹೊಸ ಹಂಚಿಗೆ ಊಡಿ ಅಲಗತೆಯ ಬತ್ತಿಯ ಮಾಡಿ ಆಮದಮ(ನು)ಡಿ ಕಾಳಿ ಆವಿನ ತುಪ್ಪದಲಿ ಕಾಡಿಗೆ ಮಿಡಿದು ಮದುಕರ್ಪೂರದಿಂದ ಮರ್ದಿ" ಎಂಬ ಒಂದೇ ಒಂದು ಅಸ್ಪಷ್ಟ ಉಲ್ಲೇಖ ಜ್ವಾಲಾಮಾಲಿನೀ ಕಲ್ಪದ ಹಸ್ತಪ್ರತಿಯಲ್ಲಿ ದೊರೆಯುತ್ತದೆ. ತಾಲೆಹಸ್ತಪ್ರತಿಗಳಿಗೆ ಲೇಪಿಸುವ 'ಕಪ್ಪನಿಡು' ಎಂಬುದಕ್ಕೆ ಬದಲು 'ಹಸ್ತಾಂಜನ'ವೆಂದೂ ಕರೆಯುತ್ತಿದ್ದರೆಂದು ಸೂಚಿಸುವ ಹಸ್ತಾಂಜನ ಎಂಬ ಉಲ್ಲೇಖವಿದೆ."[೬೬]

ಲೇಪನ ವಸ್ತುಗಳಲ್ಲಿ ಮಸಿಯೂ ಒಂದು. ಕಾಗದದ ಮೇಲೆ ಬರೆಯಲು ದ್ರವರೂಪದ ಬೇರೆ ಬೇರೆ ಬಣ್ಣದ ಮಸಿ ಬಳಸುತ್ತಿದ್ದರೂ ಕಪ್ಪು ಮಸಿ ಬಳಕೆಯೇ ಸಾಮಾನ್ಯವಾಗಿದ್ದಿತು. ಈ ಮಸಿಯನ್ನು ಸಿದ್ಧಪಡಿಸುತ್ತಿದ್ದ ವಿಧಾನವನ್ನು ಬಸವಪುರಾಮದ ಒಂದು ಹಸ್ತಪ್ರತಿ ಹೀಗೆ ತಿಳಿಸುತ್ತದೆ. "ಆರು ದುಡ್ಡಿನ ತೂಕ ಕಡ್ಡಿ ಅರಗು (ಬಂಗಾರದ ಅರಗು ಅಲ್ಲ), ಎರಡು ಪೈ ತೂಕ ಅಲೀಕನ ತೊಪ್ಪಲು ಹಾಕಿ ತಿರುವಬೇಕು ಮತ್ತು ಆದರ ಹಿಂದೆ ಪೂರ್ತಿ ಬಳಿಗಾರದ ಪುಡಿಹಾಕಿ ತಿರುವಬೇಕು. ಈ ರೀತಿ ಮೂರು ಜೀನಸುಗಳನ್ನು ಒಂದರ ಹಿಂದೊಂದು ಹಾಕಿ ತಿರುವಿದ ನಂತರ ಮತ್ತೊಂದು ಕುದಿವರೆಗೆ ಉರಿ ಹಚ್ಚಬೇಕು. ಕುದಿ ಬಂದ ನಂತರ ಇಳುಹಿ ಕಂಬಳಿಯಲ್ಲಿ ಹಾಕಿ ಸೋಸಬೇಕು. ಅಂದರೆ ಕೆಂಪು ಸಾದಾ ಆಗುವುದು. ಅದಕ್ಕೆ ಕಾಡಿಗೆಯನ್ನು ತಕ್ಕಷ್ಟು ತಿಕ್ಕಿದರೆ ಮಸಿ ಆಗುವುದು. ಡಿ.ಎಲ್.ಎನ್.ರವರು "ಮಸಿಯನ್ನು ಮಾಡುವ ವಿಧಾನಗಳನ್ನು ತಿಳಿಸಿದ್ದಾರೆ. ರಾಗಿಯನ್ನು ಹುರಿದು ಬೇಯಿಸಿ ಪುಡಿಮಾಡಿ ನೀರಿನಲ್ಲಿ ಕಲಿಸಿ ಅದಕ್ಕೆ ಗೊಂದನ್ನೋ ಸಕ್ಕರೆಯನ್ನೋ ಅಂಟಿಗಾಗಿ ಸ್ವಲ್ಪ ಮಿಶ್ರಮಾಡಿ ಅದನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದರು. ಅಳಲೆಕಾಯಿ ಅನ್ನ ಭೇದಿ ಮುಂತಾದವುಗಳಂದ ಮಸಿಯನ್ನು ತಯಾರಿಸುತ್ತಿದ್ದರು. ಇದೇ ಅಳಲೆಕಾಯಿ ಮಸಿ, ಮಸಿಯೆಂಬರ್ಥದಲ್ಲಿ 'ಮೇಲಾ' ಎಂಬೊಂದು ಸಂಸ್ಕೃತ ಶಬ್ದವಿದೆ. ಇದನ್ನು ಸುಬಂಧು ತನ್ನ ಗ್ರಂಥದಲ್ಲಿ ಪ್ರಯೋಗಿಸಿದ್ದಾನೆ. ಈ ಶಬ್ದದ ಪ್ರಾಕೃತರೂಪ ಮಯಿಲಾ: ಅರ್ಥ ಕರಿಯದು ಕೊಳಕಾದುದು ಎಂದು. ಮಸಿ ಸಂಗ್ರಹಿಸುವ ಪಾತ್ರೆಯನ್ನು ದೌತಿಯೆನ್ನುತ್ತಿದ್ದರೆಂದು "ದೌತಿ ಮಸಿಪಾತ್ರೆಯಕ್ಕುಂ" ಎಂದು ಮಂಗರಾಜನ ನಿಘಂಟು ತಿಳಿಸುತ್ತದೆ.

ಲೇಪನ ವಸ್ತುಗಳಲ್ಲಿ ಮತ್ತೊಂದು ಸಾಮಾಗ್ರಿಯೆಂದರೆ 'ಬಳಪ' ಈ ಬಳಪವನ್ನು ಕಡತ, ಹಲಗೆಗಳ ಮೇಲೆ ಬರೆಯಲು ಸೀಮೆಸುಣ್ಣ ಇಲ್ಲವೆ ಬಳಪ ಬಳಸುತ್ತಿದ್ದರು. ಬಳಪದ ಉಲ್ಲೇಖ ಅನೇಕ ಕಾವ್ಯಗಳಲ್ಲಿ ಬಂದಿದೆ. "ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ, ಧರಾತಳು ಕಡತಂ" ಎಂಬ ಪೊನ್ನನ ಉಲ್ಲೇಖದಷ್ಟು ಇದರ ಬಳಕೆ ಪ್ರಾಚೀನವಾಗಿದೆ. ಕರ್ನಾಟಕದ ಪ್ರಾಚೀನ ಮಠಗಳಲ್ಲಿ, ಪಾಳೆಗಾರ ಮನೆತನಗಳಲ್ಲಿ ಹೀಗೆ ಬಳಪದಿಂದ ಬರೆದ ಅನೇಕ ಕಡತಗಳು ಸಿಗುತ್ತವೆ.

ಮಾನವನ ಉಪಯೋಗಿ ಆವಿಷ್ಕಾರಗಳಲ್ಲಿ ಶ್ರೇಷ್ಠವಾಗಿರುವ ಭಾಷೆಯು ಬರಹದಿಂದ ಮೂರ್ತರೂಪ ಪಡೆದುಕೊಂಡಿತ್ತು. ಈ ಬರಹದ ಚಿಂತನೆ ಮನುಷ್ಯನ ವೈಜ್ಞಾನಿಕ ಹಾಗೂ ತಾಂತ್ರಿಕ ಚಿಂತನೆಯಲ್ಲಿಯೇ ಒಂದಾಗಿದ್ದು ಮಾನವನ ನಾಗರೀಕತೆಗೆ ವಿಶಿಷ್ಟವಾದ ಮೆರುಗು ನೀಡಿತು. ವರ್ತಮಾನದ ಉಪಯೋಗಿ ಹಾಗೂ ಭವಿಷ್ಯತ್ತಿನ ಉಪಯೋಗಿ ಅಂಶವಾಗಿ ಈ ಬರಹವು ಕಂಡುಬಂದಿದ್ದು ಮಾನವನ ಸಮಸ್ತ ಬದುಕಿನ ಚಿತ್ರಣವನ್ನು ತಿಳಿಸುತ್ತಾ ಸಾರ್ವತ್ರಿಕ ಸರ್ವಉಪಯೋಗಿಯಾದ ಬರಹ, ಆಯಾ ಕಾಲಘಟ್ಟದ ತಾಂತ್ರಿಕ ಕೌಶಲ್ಯಕ್ಕೆ ತಕ್ಕಂತೆ ಹಂತಹಂತವಾಗಿ ಪ್ರಕೃತಿಯಲ್ಲಿಯೇ ದೊರೆಯುವ ಪರಿಕರಗಳ ಮೇಲೆ ಮೂಡುತ್ತಾ ಬಂದಿದೆ.

ಬಹು ಭಾಷಾ ಸ್ಥಳವಾದ ಭಾರತದಲ್ಲಿ ಕನ್ನಡ ಭಾಷೆಯು ಸಹ ತನ್ನ ಗುರುತನ್ನು ಪ್ರಾಕೃತಿಕ ವಸ್ತುಗಳಿಂದ ಹಿಡಿದು ಕಾಗದದವರೆಗೂ ಉಳಿಸಿಕೊಳ್ಳುವಂತಹ ತಾಂತ್ರಿಕಜ್ಞಾನದ ಹಾದಿಯೊಳಗೆ ಬೆಳೆದುಬಂದಿದ್ದು ಗಮನಾರ್ಹ ಸಂಗತಿ.

**೩.೪. ಸಾಹಿತ್ಯ ಕೃತಿಗಳ ರಚನೆ ಮತ್ತು ಸಂರಕ್ಷಣೆ: ಶ್ರಮ ಸಮುದಾಯಗಳ ವಿವೇಕ**

ಬರವಣಿಗೆಯ ಕಾಯಕ ಮಾಡುತ್ತಿದ್ದವರು ಶ್ರಮಿಕ ವರ್ಗದವರು. ಬರವಣಿಗೆಗೆ ಬೇಕಾದ ಲೇಖನ ಸಾಮಾಗ್ರಿಗಳನ್ನು ಒದಗಿಸಿಕೊಡುತ್ತಿದ್ದರು. ಬಾಳಿಕೆ ಬರುವಂತಹ ಭೌತಿಕ ಪರಿಕರಗಳನ್ನು ಆಯ್ಕೆಮಾಡಿಕೊಳ್ಳುತ್ತಿದ್ದರು. ಈ ವಸ್ತುಗಳ ಆಯ್ಕೆಯಲ್ಲಿಯೇ ಅವರ ತಾಂತ್ರಿಕ ವಿಧಾನ ಅಡಕವಾಗಿತ್ತು. ಕಾರಣ ಒಂದು ಕಾಲದಲ್ಲಿ ರಚನೆ ಒಂದು ಭಾಷೆ ಸಾಹಿತ್ಯ ಬಹುಕಾಲ ಉಳಿಯಲಿ ಎನ್ನುವ ಒತ್ತಾಸೆ. ಲಿಪಿ ಶಿಲ್ಪಿಗಾರರು, ಲಿಪಿಕಾರರು, ಓಲೆಕಾರ, ಬಡಿಗ, ಚಿತ್ರಗಾರ, ಲೋಹಕಾರ, ಮಸಿಕಾಯಕದವರು, ವಸ್ತ್ರದವರು ಮುಂತಾದ ಶ್ರಮಿಕ ವರ್ಗಗಳು ನಮ್ಮ ದೇಶದ ನುಡಿ ಹಾಗೂ ಲಿಪಿ ಚರಿತ್ರೆಯನ್ನು ಬೆಳೆಸಿರುವಂತಹ ರೀತಿ ಇಂದಿನ ತಾಂತ್ರಿಕ ಜಗತ್ತಿನಲ್ಲಿಯೂ ಬೆರಗು ಹುಟ್ಟಿಸುವಂತಹದ್ದು. ಆದರೆ ದುರದೃಷ್ಟಕರ ಸಂಗತಿಯೆಂದರೆ ಪ್ರಯೋಗಶೀಲವಾದ ಇಂತಹ ಬಹು ಉಪಯೋಗಿ ಜ್ಞಾನಶಾಖೆಗಳನ್ನು ಅಂದಿನ ವರ್ಣ ವ್ಯವಸ್ಥೆಯು ಬೆಳಕಿಗೆ ಬಾರದಂತೆ ಮಾಡಿತು.

ಪ್ರಾಚೀನ ಭಾರತದಲ್ಲಿದ್ದಂತಹ ವರ್ಣವ್ಯವಸ್ಥೆ ನಮ್ಮ ದೇಶದಲ್ಲಿನ ಮೂಲ ನಿವಾಸಿಗಳನ್ನು ಹತ್ತಿಕ್ಕಿ ಶುದ್ಧ ಮತ್ತು ಅಶುದ್ಧ ಎನ್ನುವ ಭೇದ ಮಾಡಿದರು. ಸಮಾಜದಲ್ಲಿ ಸೃಷ್ಟಿಯಾಗುತ್ತಿದ್ದ ಕ್ರಿಯಾಶೀಲ ಚಟುವಟಿಕೆಯ ಮೇಲೆ ಅಂದಿನ ವರ್ಣವ್ಯವಸ್ಥೆಯಲ್ಲಿ ರಚನೆ ಮಾಡಿದ ಕೆಲವೊಂದು ನಿಬಂಧನೆಗಳು ಪ್ರಭಾವ ಬೀರುತ್ತಿದ್ದವು. ದೈಹಿಕ ಶ್ರಮದಿಂದ ದೂರ ಉಳಿದರೂ ಕೂಡ ವೈದಿಕರು ಶ್ರಮಜೀವಿಗಳ ಕೌಶಲ್ಯವನ್ನು ಬೆಳಕಿಗೆ ಬರಲು ಬಿಡುತ್ತಿರಲಿಲ್ಲ. "ಜಾತಿ ವ್ಯವಸ್ಥೆಯು ರಚನೆಯಾದ ಸಂದರ್ಭದಲ್ಲಿ ಉನ್ನತ ಜ್ಞಾನ ಮತ್ತು ತಂತ್ರಜ್ಞಾನಕ್ಕೆ ದುಡಿವ ಜನ ಯೋಗ್ಯರಲ್ಲ ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ."[೬೭] ಶ್ರಮಿಕರು ಕೌಶಲ್ಯಯುಕ್ತವಾದಂತಹ ಚಟುವಟಿಕೆಗಳಲ್ಲಿ ತೊಡಗಬಾರದೆಂದು. ಭಾರತೀಯ ಸಂದರ್ಭದ ಸಾಮಾಜಿಕ ವ್ಯವಸ್ಥೆಯಲ್ಲಿ ಅಕ್ಷರ ಕಲಿಕೆಯ ಅವಕಾಶವನ್ನು ಕೆಳವರ್ಗದವರಿಗೆ ವಂಚಿಸುತ್ತಾ ಬಂದರೂ ತಮ್ಮ ಬದುಕಿನ ಅವಿಭಾಜ್ಯ ಅಂಗಗಳಾದ ಕಲೆ, ಸಂಸ್ಕೃತಿ, ಸಾಹಿತ್ಯ ಇವುಗಳನ್ನು ದಿನನಿತ್ಯದ ಬದುಕಿನಲ್ಲಿ ಕಂಡುಕೊಂಡು ಅವುಗಳನ್ನು ಕಾಲದಿಂದ ಕಾಲಕ್ಕೆ ಉಳಿಸಿರುವಂತಹ ಕಸುಬುದಾರ ವರ್ಗಗಳ ತಾಂತ್ರಿಕ ಕೌಶಲ್ಯವು ಪ್ರಶಂಸನೀಯವಾದುದು.

"ಸೂತರು ಎನ್ನುವ ವೃತ್ತಿಗಾಯಕ ವರ್ಗದವರು ಕವಿಗಳೂ ಹಾಗೂ ಗಾಯಕರೂ ಆಗಿದ್ದರು. ರಾಮಾಯಣ, ಮಹಾಭಾರತದ ಕಥೆಗಳನ್ನು ಒಂದು ಸಾವಿರ ವರುಷಗಳ ಕಾಲ ಋಷಿಮುನಿಗಳಿಗೆ ರಾಜ ಮಹಾರಾಜರಿಗೆ ಹೇಳುತ್ತಾ ಬಂದು ನಂತರ ಅದನ್ನು ಲಿಪಿಕರಿಸಿದರು."[೬೮]

ಈ ಲಿಪೀಕರಣ ಆದ ನಂತರ ಸುಮಾರು ಕ್ರಿ.ಪೂ. ೩೦೦ ರಿಂದ ಕ್ರಿ.ಶ. ೨೦೦ರ ನಡುವಿನ ಅವಧಿಯಲ್ಲಿ ಬ್ರಾಹ್ಮಣರು ಪರಿಷ್ಕರಿಸಿದರು. ಪರಿಷ್ಕೃತಗೊಂಡಂತಹ ಮಹಾಭಾರತ, ರಾಮಾಯಣ ಮಹಾಕಾವ್ಯಗಳು ಇಂದು ಸಾಹಿತ್ಯ ರೂಪದಲ್ಲಿ ಭಾರತೀಯರಿಗೆ ಲಭ್ಯವಾಗಿವೆ. ಇದಕ್ಕೆ ಪ್ರೇರಣೆ ಕೆಳವರ್ಗದ ಕ್ರಿಯಾಶೀಲ ಸಂವೇದನೆಗಳು ಎನ್ನುವುದು ಕುತೂಹಲಕರ ವಿಚಾರವಾಗಿದೆ.

ಸಂಸ್ಕೃತದ ಸಾಹಿತ್ಯ ಕೃತಿಗಳು ಕ್ರಿ.ಪೂ. ಕಾಲದಿಂದ ಕ್ರಿ.ಶ.ದ ಕಾಲದವರೆಗೆ ಹೆಚ್ಚು ಹೆಚ್ಚು ರಚನೆಗೊಂಡು ರಾಜಕೀಯ ಬೆಂಬಲದಿಂದ ಲಿಪಿಕರಣ ಕ್ರಿಯೆಯಿಂದಾಗಿ ದ್ವಿಗುಣಗೊಳ್ಳುತ್ತಿದ್ದವು. ಇಂತಹ ಪೈಪೋಟಿಯ ಸಂದರ್ಭದಲ್ಲಿಯೇ ಕ್ರಿ.ಶಕದಿಂದೀಚೆಗೆ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಸಾಹಿತ್ಯ ಕೃತಿಗಳ ರಚನೆ ಮತ್ತು ಉಳಿವಿಗೆ ಸಂಬಂಧಪಟ್ಟಂತೆ ಶ್ರಮಿಸಿದ ತಾಂತ್ರಿಕ ಕಸುಬುದಾರಿಕೆ ವರ್ಗಗಳು ಮಾಡಿದ ಕೆಲಸ ಶ್ಲಾಘನೀಯ.

### ಅಕ್ಷರ ಶಿಲ್ಪಿಗಳು

ರಾಜಾಜ್ಞೆಗಳನ್ನು ಬಹಳ ಕಾಲ ಉಳಿಯುವಂತೆ ಶಿಲೆಯ ಮೆಲೆ ಕೆತ್ತುತ್ತಿದ್ದು ಅಕ್ಷರ ಲಿಪಿಗಳನ್ನು ಕಂಡರಣೆಕಾರರೆಂದು ಕರೆಯಲಾಗುತ್ತಿತ್ತು. ಲಭ್ಯ ಮಾಹಿತಿ ಪ್ರಕಾರ ಕವಿಯು ಮೊದಲು ಪಾಠವನ್ನು ರಚನೆ ಮಾಡಿ ಕೊಡುತ್ತಿದ್ದನು. ಲಿಪಿಕಾರರು ಪಾಠವನ್ನು ಶಿಲಾಫಲಕಗಳ ಮೇಲೆ ಬಳಪದಿಂದಲೇ ಕೆಂಪು ಬಣ್ಣದಿಂದಲೇ ಬರೆಯುತ್ತಿದ್ದರು. ಅನಂತರ ಅದನ್ನು ಶಾಶ್ವತವಾಗಿ ನಿಲ್ಲುವಂತೆ ಉಳಿಯಿಂದ ಶಿಲ್ಪಿಗಳು ಕೊರೆಯುತ್ತಿದ್ದರು. ಹೀಗೆ ಕೊರೆಯುವುದನ್ನು ಶಿಲ್ಪ ವಿದ್ಯಾ ಪ್ರವೀಣರಾದ ಕಂಡರಣೆಕಾರರಾಗಿದ್ದರು. 'ಅಕ್ಕಸಾಲಿ, ಬಡಗಿ, ಕಮ್ಮಾರ ಮತ್ತು ಕಂಚುಗಾರರು (ಪಾಂಚಾಳರು ಅಥವಾ ವಿಶ್ವಕರ್ಮರು) ಕಂಡರಣೆ ಕೆಲಸ ಮಾಡುತ್ತಿದ್ದ ಬಗ್ಗೆ ಡಾ.ಕೆ.ಎಸ್. ಕುಮಾರಸ್ವಾಮಿ ಮತ್ತು ಡಾ.ಎಸ್. ಶೆಟ್ಟರ್ ಖಚಿತ ಅಭಿಪ್ರಾಯಪಟ್ಟಿದ್ದಾರೆ. ಕರ್ನಾಟಕದಲ್ಲಿ ಸುಮಾರು ೨೫೦೦೦ಕ್ಕೂ ಹೆಚ್ಚು ಶಿಲಾಶಾಸನಗಳನ್ನು ಈ ಅಕ್ಷರ ಶಿಲ್ಪಿಗಳು ಶ್ರಮವಹಿಸಿ ಕೆತ್ತಿದ್ದನ್ನು ಈ ಇಬ್ಬರೂ ವಿದ್ವಾಂಸರು ಗುರುತಿಸಿದ್ದಾರೆ. ಡಾ. ಎಸ್. ಶೆಟ್ಟರ್ ಅವರು ತಮ್ಮ ರೂವಾರಿ ಪುಸ್ತಕದಲ್ಲಿ ಶಿಲೆ ಮತ್ತು ಲೋಹಗಳ ಮೇಲೆ ಅಕ್ಷರ ಕೆತ್ತುತ್ತಿದ್ದ ಈ ಶಿಲ್ಪಿಗಳನ್ನು "ಅಕ್ಷರ ಶಿಲ್ಪಿ"ಗಳೆಂದು ಗುರುತಿಸಿದ್ದು ವಿಶೇಷ.

ರೂವಾರಿಗಳ ಹೆಸರುಗಳಿಗೆ ಉಪಷ್ಟಂಭಕವಾಗಿ ಕಲ್ಲುಟಿಗ, ಕಲ್ಲಂಕಡಿದಾತ, ಕಂಡರಣೆಕಾರ ಸರಸ್ವತೀಗಣ, ಶಾಸನಾಚಾರ್ಯ, ಸೂತ್ರಧಾರಿ, ವಿಶ್ವಕರ್ಮ, ಅಕ್ಕಸಾಲಿ, ಬಿನ್ನಗ, ಬಡಗಿ, ಶಿಲ್ಪಿ, ಆಚಾರಿ, ಗವುಂಡ, ಕಂಮಾರ, ಕಂಚುಗಾರ ಮತ್ತು ರೂವಾರಿ ಎಂಬ ವಿಶೇಷಣಗಳು ಬಳಕೆಯಾಗಿವೆ. ಅವರ ಕೆಲಸವನ್ನು ಖಂಡರಿಸು, ಬೆಸಕೆಮ್, ಹೋಮ್, ಪೊಯ್, ಕಲ್ಲಂಕಡ, ಕಲ್ಲಹೋಮಿ, ಶಿಲಾಕರ್ಮ, ತಿದ್ದು, ಲಿಖಿತ, ಕೆಲಸ, ಶಿಲ್ಪಿ ಬರೆಸ ಇತ್ಯಾದಿಗಳನ್ನು ಕ್ರಿಯಾಪದಗಳನ್ನಾಗಿ ಬಳಸುವ ಮೂಲಕ ಶಿಲ್ಪಿ ಕೆಲಸದ ಸೂಚನೆ ನೀಡಲಾಗಿದೆ.

ಲಭ್ಯ ಮಾಹಿತಿ ಪ್ರಕಾರ ಅತ್ಯಂತ ಪ್ರಾಚೀನ ಶಿಲಾಶಾಸನದ ಕರ್ತೃ ಪಲ್ಲವಾಚಾರಿ (ಕ್ರಿ.ಶ. ೨ನೆಯ ಶತಮಾನ) ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿರುವ ಪಾರ್ಶ್ವನಾಥ ಬಸದಿಯ ಬಲಗಡೆ ಬಂಡೆಯಲ್ಲಿರುವ ೨ನೇ ಶಾಸನ ಇವನ ಕೃತಿ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಪಲ್ಲವಾಚಾರಿ ತಾನೇ ಪದ್ಯವನ್ನು ಬರೆದು ಕೆತ್ತಿದ ವಿದ್ವಾಂಸನಾಗಿದ್ದ. ಮತ್ತೊಂದೆಡೆ ಪ್ರೊ.ಎಸ್. ಶೆಟ್ಟರ್ ಅವರು 'ಕೇವಳಿಕಾನುಸ ಆಚಾರಿ'ಯನ್ನು ಮೊಟ್ಟ ಮೊದಲ ಸ್ಮಾರಕ ಶಿಲಾಕರ್ತೃವೆಂದು ಗುರುತಿಸಿದ್ದಾರೆ. ಇವರೆಲ್ಲ ಶಿಲಾಫಲಕಗಳನ್ನು ತಾವೇ ತಯಾರಿಸಿ ತಾವೇ ಪದ್ಯವನ್ನು ರಚಿಸಿ ಕಂಡರಿವಷ್ಟು ಲಿಪಿ ಮತ್ತು ಭಾಷಾಪ್ರಭುತ್ವವನ್ನು ಹೊಂದಿದ್ದರು.

ಕ್ರಿ.ಶ. ೯ನೇ ಶತಮಾನದಲ್ಲಿ ಬರುವ ಹನ್ನೆರಡು ಮಂದಿ ಶಿಲ್ಪಿಗಳಲ್ಲಿ ವಿಶ್ವಕರ್ಮಯನು (ಕ್ರಿ.ಶ. ೧೫೦೦) ಈ ಶತಮಾನದ ಮೊದಲ ಕಂಡರಣೆಕಾರನಾಗಿ ಕಂಡುಬರುತ್ತಾನೆ. ೧೦ನೇ ಶತಮಾನದಲ್ಲಿ ಬರುವ ೧೮ ಜನ ಕುಶಲಶಿಲ್ಪಿಗಳು ಶಾಸನಗಳನ್ನು ಕೊರೆದಿದ್ದಾರೆ. ವಿಕ್ರಮಾದಿತ್ಯ (ಕ್ರಿ.ಶ. ೯೫೦) ಮತ್ತು ಮಾಣಿಕಾಚಾರಿಯವರು (ಕ್ರಿ.ಶ. ೧೯೯೭-೧೯೯೮) ಹೆಚ್ಚು ಶಾಸನಗಳನ್ನು ಬರೆದಿದ್ದಾರೆ. ಕೊಯಮತೂರಿನವನಾದ ವಿಕ್ರಮಾದಿತ್ಯನ್ 'ಬಹುಗಣತೇಜ' ಎನ್ನುವ ಬಿರುದಾಂಕಿತನಾಗಿದ್ದ. ಈತ ತನ್ನನ್ನು ಕಾಸಿಗಂ (ಕಮ್ಮಾರ) ಎಂದು ಕರೆದುಕೊಂಡಿದ್ದಾನೆ.[೯] ೧೦ನೇ ಶತಮಾನದಲ್ಲಿ ಬರುವ ಸವಣ್ಣಬಲ್ಲರ ದೇವನಿಗೆ 'ರೂವಾರಿ ಮಾರ್ತಾಂಡ' ಬಿರುದಿತ್ತು. ರಾಜೇಜ (ಕ್ರಿ.ಶ. ೧೦೫೪) ತಜ್ಞ ಲಿಪಿಕಾರನಾಗಿದ್ದ ಬಳ್ಳಾರಿ ಜಿಲ್ಲೆ ನಂದಿಬೇವೂರಿನ ಆಂಜನೇಯ ಗುಡಿ ಹತ್ತಿರದ ಶಾಸನ ಕೆತ್ತಿದ್ದಾನೆ. ಈತ ತನ್ನ ಕೆಲಸವನ್ನು "ಶ್ರೀಚಕ್ರ ಲಿಖಿತ" ಎಂದು ಕರೆದುಕೊಂಡಿದ್ದಾನೆ. ಅಂದರೆ ವೇಗವಾಗಿ ಕೆತ್ತವನ ಎಂದರ್ಥ. ಇನ್ನು ಅನೇಕ ಶಿಲ್ಪಿಗಳು ತಮ್ಮನ್ನು 'ಸರಸ್ವತಿ ಗಣದಾಸಿ ಬನ್ನೋಜ', 'ಕಲ್ಕುಟಿಗ ಬೊಮ್ಮೋಜ' 'ಶ್ರೀಮಜ್ಜಗದೇಕ ರೂವಾರಿ ಬಮ್ಮೋಜ' ಎಂದು ಕರೆದುಕೊಳ್ಳುವುದು ವಿದ್ವತನ್ನ ಹೊಂದಿದ್ದರು. ಇನ್ನು ಕೆಲವರು ತಮ್ಮ ಕೆಲಸದ ಕೌಶಲ್ಯದಿಂದ ತಮ್ಮನ್ನು ಹೆಗ್ಗಳಿಕೆಯಿಂದ ಗುರುತಿಸಿಕೊಂಡಿದ್ದನ್ನು ಕಾಣುತ್ತೇವೆ. ಸರೋಜ (ಕ್ರಿ.ಶ. ೧೨೮೪) ತನ್ನನ್ನು 'ರಾಯಸೂತ್ರಧಾರಿ' ಎಂದೂ "ಸರಸ್ವತಿಯ ಕೊರಳ ಮುತ್ತುವೊಲಿರೆ ವೃತ್ತಂ ಕೋಮಲಂ ಸುಭದ್ರವೆನಿಪಕರೆ ಮಂದರ" ಎಂದು ಬಣ್ಣಿಸಿಕೊಂಡಿದ್ದಾನೆ. ಅಂದರೆ 'ಸರಸ್ವತಿಯ ಕೊರಳ ಮುತ್ತಿನ ಹಾರದಂತೆ ದುಂಡಾಗಿಯೂ ಕೋಮಲವಾಗಿಯೂ ಅಕ್ಷರಗಳನ್ನು ಬಿಡಿಸುವುದಾಗಿ ಹೇಳಿಕೊಂಡಿದ್ದಾನೆ.

ಕನ್ನಡನಾಡಿನ ಸುಮಾರು ೨೫೦೦೦ ಶಾಸನಗಳನ್ನು ಬರೆದ ಲಿಪಿಕಾರರಲ್ಲಿ ದೈವದತ್ತವಾದ ಲಿಪಿ ಸೌಂದರ್ಯ ಸೌಭಗ್ಯವನ್ನು ಪಡೆದವರು ಕೆಲವರೇ. ಈ ಸೌಂದರ್ಯವನ್ನು ಸಾಧಿಸಬೇಕಾದರೆ ಕನ್ನಡ ಅಕ್ಷರಗಳ ಅವಯವ ಜ್ಞಾನ, ಅವಯವ ಪ್ರಮಾಣ, ಅತ್ಯವಶ್ಯ.

"ಪೊಕ್ಕಳು ತಲೆಕಟ್ಟುಮನ
ನನ್ತರದವಯವಮನಜೆದು ಖಂಡರಿಸುಲುರೇ
ಇಕ್ಕುಡನೆ ಬಲ್ಲನಜೆಯು
ರ್ಮಿಕ್ಕವರೆನ್ದೊಸೆದು ಧರಣಿ ಬಣ್ಣಿಸುತಿಕ್ಕುಂ"[೭೦]

ಕನ್ನಡ ಅಕ್ಷರಗಳ ಶರೀರ ರಚನೆಯ ಶಾಸ್ತ್ರೀಯ ಕ್ರಮವನ್ನು ಈ ಪದ್ಯ ಹೇಳುತ್ತದೆ. ಕನ್ನಡ ಅಕ್ಷರ ಮುಖ್ಯ ಭಾಗವೆ ಹೊಕ್ಕುಳ, ನಂತರ ತಲೆಕಟ್ಟು ಮತ್ತು ಉಳಿದ ಭಾಗಗಳು ಬರುತ್ತವೆ. ಅವನ್ನು ಕ್ರಮಬದ್ಧವಾಗಿ ರೂಪಿಸುವಲ್ಲಿ ಇಕ್ಕುಡಾಚಾರಿಯೇ ಪ್ರವೀಣನೆಂದು ಧರಣಿ ಬಣ್ಣಿಸುವಷ್ಟು ಕೌಶಲ್ಯ ಹೊಂದಿದ ಲಿಪಿಕಾರನಾಗಿದ್ದ.

ಮಸಣ ಎನ್ನುವ ರೂವಾರಿ ಬಹುರೇಖೆಗಳು ಬಾರದೆ ಅಕ್ಷರ ಅಕ್ಷರ ಮಧ್ಯ ಯೋಗ್ಯ ಜಾಗ ಇರುವಂತೆ ಸುಂದರವಾಗಿ ಬರೆಯುತ್ತಿದ್ದ. ನವಿಲ್ಗುಂದದ ಮಾದಿರಾಜನೆನ್ನುವ ಲಿಪಿಕಾರ ಬಿಂದುವಿಗೊಂದು ಶೋಭೆ, ತಲೆಕಟ್ಟಿನ ಪೊರ್ಕುವಿಚೆಲ್ವು ಮಾತ್ರೆಯೊಳ್। ನಿಂದ ಬೆಡಂಗು, ಬಳ್ಳಿಯೊಳೊಡಂಬುತಿರ್ಪನಯಂ ವಿಸರ್ಗದೊಳ್ಪೊಂದಿರಲ್ ಎಂದರೆ ಮತ್ತೊಬ್ಬ ಲಿಪಿಕಾರ ತಾನು 'ವಾಗ್ಲಲನೆಯ ಹಾರದಲೊಪ್ಪಿಬರೆದಂ' ಎಂದರೆ ಇನ್ನೊಬ್ಬ "ಮೃದಲಲಿತ ವಿಚಿತ್ರ ಲಿಖಿತಂ" ಎನ್ನುತ್ತಾನೆ. ಮತ್ತೊಬ್ಬ ಸಂದೇಹ ಬಾರದಂತೆ ಬರೆಯಬಲ್ಲೆ ಎನ್ನುತ್ತಾನೆ. "ಬರೆದ... ಮುತ್ತಿನ ಸರಮಂ ಸಮದಸ್ತೆ ಶಾನ್ತನೊಳಕ್ಕರಮಂ" ಇಲ್ಲೆಲ್ಲ ಲಿಪಿಸೂಕ್ಷ್ಮತೆ, ಲಿಪಿಸೌಂದರ್ಯ ಚರಣಗಳ ವಿನ್ಯಾಸ, ಓರಣವಾಗಿ ಬರೆದ ತಮ್ಮ ಅಕ್ಷರಗಳನ್ನು 'ಸರಸ್ವತಿಯ ಕೊರಳತೋರಣ' 'ವಾಗ್ಲಲನೆಯಹಾರ' 'ವಾಗ್ದೇವಿಗೆ ಮುತ್ತಿನ ಸರಣಿ' ಎನ್ನುವ ಉಪಮೆಗಳ ಮೂಲಕ ತಮ್ಮ ಅಕ್ಷರ ಶಿಲ್ಪದ ಕಲಾಸಿದ್ಧವನ್ನು ಹೇಳಿಕೊಂಡಿದ್ದಾರೆ.

ರೇವಣ ಮತ್ತು ರೇವಣರು ತಮ್ಮ ಅಕ್ಷರ ತಾಂತ್ರಿಕತೆಯ ನೈಪುಣ್ಯತೆ ಕುರಿತು ಹೇಳುವ ಮಾತು ಗಮನಿಸುವಂಥವು.

"ಆನೆಯ ಸಿಂಘದ ಗಿಳಿಗಳ
ನಾನಾ ರೂಪಗಳನಕ್ಕರಂಗಳೊಳೆಸೆಯಲು
ತಾನಳವಹಿಸುವೆ........"
"ಸಿಂಘಂಹರಿಣಿಯ ರೂಹನೆಯಕ್ಕರಾವಳಿ"

ಹೀಗೆ ಶಿಲೆಯ ಮೇಲೆ ಬರೆಯುವ ವಿವಿಧ ತಾಂತ್ರಿಕ ಸ್ವರೂಪಗಳು, ಅಕ್ಷರ ವಿನ್ಯಾಸ, ಲಕ್ಷಣ, ಸೌಂದರ್ಯಗಳ ಕುರಿತು ಅಕ್ಷರ ಶಿಲ್ಪಿಗಳು ಹೆಗ್ಗಳಿಕೆಯಿಂದ ಹೇಳಿಕೊಂಡಿದ್ದಾರೆ. ಕಲ್ಲು, ಸುತ್ತಿಗೆ ಜಾಣ, ಉಳಿಯ ತಾಂತ್ರಿಕ ಬಳಕೆಯಲ್ಲಿ ಹುಟ್ಟಿದ ಕನ್ನಡ ಶಾಸನಗಳನ್ನು ಅದರ ಕಂಡರಣೆಗಾರರು, ರೂವಾರಿಗಳು, ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಲಿಪಿ, ಭಾಷೆ ಮತ್ತು ಸಾಹಿತ್ಯದಲ್ಲಿ ಆ

ಕಾಲದ ಪಾಂಚಾಳರು ನುರಿತವರಾಗಿದ್ದರು ಎನ್ನುವುದನ್ನು ಡಾ. ಎಸ್. ಶೆಟ್ಟರ್ ಗುರುತಿಸಿದ್ದು ಸ್ಮರಣೀಯವಾದದ್ದಾಗಿದೆ.

**ಲಿಪಿಕಾರರು**

ಭಾರತದಲ್ಲಿ ಲಿಪಿಕಾರರ ಚರಿತ್ರೆ ಪ್ರಾರಂಭವಾಗುವುದು ಮೌರ್ಯರ ಕಾಲದಿಂದ "ಮೌರ್ಯರ ಕಾಲದಲ್ಲಿ ಅಕ್ಷರ ಮೂಡಿಸುವವನನ್ನು 'ಲಿಪಿಕಾರ' ಎಂದು ಕರೆಯುತ್ತಿದ್ದರು. ಗಾಂಧಾರ (ಇಂದಿನ ಅಫಘಾನಿಸ್ತಾನ) ದೇಶದ 'ಚಪಡ' ಎಂಬ ಲಿಪಿಕಾರನನ್ನು ಶಾಸನ ಬರೆಸಲು ಕರ್ನಾಟಕಕ್ಕೆ ಅಶೋಕನು ಕಳುಹಿಸುದುದು ಚರಿತ್ರೆಯಲ್ಲಿ ಲಿಪಿಕಾರ ಬಗೆಗಿನ ಮುಖ್ಯವಾದ ಸಂಗತಿ. ಲಿಪಿಕಾರರಲ್ಲಿ ತ್ವಷ್ಟರು, ವಿಶ್ವಕರ್ಮಿಗಳು, ಆಚಾರ್ಯರು, ಮುಖ್ಯರು."[೭೧] ಲಿಪಿಕಾರರಲ್ಲಿ ಶಾಸನವನ್ನು ಬರೆಯುವಂತಹ ಲಿಪಿ/ಶಿಲ್ಪಿಗಳು ಹಾಗೂ ಹಸ್ತಪ್ರತಿ ಲಿಪಿಕಾರರನ್ನು ಕಾಣಬಹುದು. ಸಾಹಿತ್ಯದ ತಲಕಾವೇರಿಯೆನಿಸಿರುವ ಶಾಸನಗಳನ್ನು ರಚಿಸಿರುವ ಲಿಪಿಶಿಲ್ಪಿಗಳ ಕೊಡುಗೆ ಸಾಹಿತ್ಯ ಲೋಕಕ್ಕೆ ಬಹಳ ಮಹತ್ವವಾದುದು. ಮೌರ್ಯ ಸಾಮ್ರಾಜ್ಯದ ನಂತರ ಕರ್ನಾಟಕವನ್ನಾಳಿದ ಕದಂಬ, ಗಂಗ, ಬಾದಾಮಿ ಚಾಲುಕ್ಯರ ಕಾಲದಲ್ಲಿ ಶಾಸನವನ್ನು ರಚಿಸುವ ಲಿಪಿಕಾರರು ಇದ್ದರು. ಈ ರಾಜಮನೆತನಗಳ ಕಾಲದಲ್ಲಿ ಕನ್ನಡವೂ ಬಳಕೆಯಿದ್ದರೂ ಸಂಸ್ಕೃತ ಭಾಷೆಗೂ ಹೆಚ್ಚು ಒಲವು ಇತ್ತು ಎಂದು ತೋರುತ್ತದೆ. ಇದುವರೆಗೂ ಲಭ್ಯವಾಗಿರುವ ಶಾಸನಗಳಲ್ಲಿ ಬಹುಪಾಲು ಸಂಸ್ಕೃತ ಭಾಷೆಯನ್ನು ಹೊಂದಿದ ಕನ್ನಡ ಲಿಪಿಯುಳ್ಳ ಶಾಸನಗಳು ಕಂಡುಬರುತ್ತವೆ. ಈ ರೀತಿಯ ಶಾಸನವನ್ನು ರಚಿಸಿದ ಲಿಪಿಕಾರರು ಕೆಲವು ಮಂದಿ ಸಿಗುತ್ತಾರೆ. ಆದರೆ ಕನ್ನಡದ ಮೊಟ್ಟಮೊದಲ ರಾಜಮನೆತನವಾದ ಕದಂಬರ ಕಾಲದ ಕನ್ನಡ ಶಿಲಾ ಶಾಸನಗಳನ್ನು ಬರೆದವರ ಬಗ್ಗೆ ಮಾಹಿತಿ ಇಲ್ಲ. ಕದಂಬರ ನಂತರ ಗಂಗರ ಕಾಲದಲ್ಲಿ ಕನ್ನಡ ಭಾಷೆಗೆ ಪ್ರಾಧಾನ್ಯ ಕೊಟ್ಟಿರುವಂತಹ ಕಮ್ಮಾರ 'ಕೊಂಗುಣಿಯಚಾರಿ' ಎಂಬ ಲಿಪಿಕಾರರನ್ನು ಕಾಣಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಬಾದಾಮಿಯ ತಟ್ಟು ಕೋಟೆಯ ಹೆಬ್ಬಂಡೆಯ ಮೇಲೆ ಸುಂದರ ಪುಷ್ಕರ-ಚಕ್ರದ ಉಬ್ಬುಶಿಲ್ಪವನ್ನು ಬಿಡಿಸಿ ಅದರ ಮೇಲೆ ತ್ರಿಪದಿ ಛಂದಸ್ಸಿನ ಕನ್ನಡ ಕಾವ್ಯದ ಮೂರು ತುಣುಕುಗಳನ್ನು 'ಬಾದಾಮಿ' ನಗರದ ಬೇರೆ ಬೇರೆ ಭಾಗದಲ್ಲಿ ವಿತರಿಸಿರುವ 'ದಾಮೋದರನ್' ಎಂಬ ಶಿಲ್ಪಿಯನ್ನು ಕಾಣಬಹುದು. "ಗಂಗರ ಕಾಲದಲ್ಲಿ ಕಂಡುಬರುವ ಕನ್ನಡದಲ್ಲಿ ಕಂಡರಿಸಿದ ಕನ್ನಡ ಶಿಲಾಶಾಸನಕಾರರಲ್ಲಿ ಇಬ್ಬರು ಪರಿಚಯ ಮಾಡಿಕೊಂಡಿದ್ದಾರೆ. ಕ್ರಿ.ಶ. ೭೫೪ರಲ್ಲಿ ಶ್ರೀಪುರುಷನು ಕೊಟ್ಟ ದತ್ತಿಯನ್ನು ತುಮಕೂರು ಜಿಲ್ಲೆ ಗುಂಡ್ಲಹಳ್ಳಿಯಲ್ಲಿ ಶಿಲೆಯ ಮೇಲೆ ಕಂಡರಿಸಿದ 'ಸಿನ್ನಾಚಾರಿ' ನಾಲ್ಕನೇ ರಾಜಮಲ್ಲನು ಮಣಲೂರು ಅಗ್ರಹಾರ ಮಾಡಿದ್ದನ್ನು ೯೭೬೭ರಲ್ಲಿ ದಾಖಲಿಸಿದ ಅನಿವದ್ಯನ ಅಳಿಯ ಮತ್ತು ದುಗ್ಗಯ್ಯನ ಮಗ 'ಪೋಚಯ್ಯ'[೭೨] ಈ ಲಿಪಿಶಿಲ್ಪಗಳಿಂದ ಕನ್ನಡ ಭಾಷೆಯ ಪ್ರಾಚೀನತೆ ಮತ್ತು ಅಂದಿನ ಸಂದರ್ಭದ ಕನ್ನಡ ಸಾಹಿತ್ಯದ ಬಗೆಗಿನ ಮಾಹಿತಿಯು ದೊರೆಯುತ್ತದೆ. ಲಿಪಿಶಿಲ್ಪಿಗಳು ಭಾಷೆಯ ಸಾಹಿತ್ಯವನ್ನು

ಕಠಿಣವಾದ ಬಂಡೆಗಳಲ್ಲಿ ಸ್ತಂಭ, ಗುಹೆ, ಅವಶೇಷ, ಪ್ರತಿಮೆ ಮುಂತಾದವುಗಳಲ್ಲಿ ತಮ್ಮ ತಾಂತ್ರಿಕ ಜ್ಞಾನದಿಂದ ರಚನೆ ಮಾಡುತ್ತಾ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಲಿಪಿ ಶಿಲ್ಪಿಗಳಂತೆ ಸಾಹಿತ್ಯದ ಬೆಳವಣಿಗೆಯಲ್ಲಿ ಹಸ್ತಪ್ರತಿ ಲಿಪಿಕಾರರ ಪಾತ್ರವು ಕೂಡ ಬಹಳ ಪ್ರಮುಖವಾಗಿದೆ. ಹಸ್ತಪ್ರತಿ ಲಿಪಿಕಾರರಲ್ಲಿ ಮೂರು ವರ್ಗದ ಲಿಪಿಕಾರರನ್ನು ಕಾಣಬಹುದು.

೧. ನಿಯುಕ್ತ ಲಿಪಿಕಾರರು

೨. ವೃತ್ತಿ ಲಿಪಿಕಾರರು

೩. ಹವ್ಯಾಸಿ ಲಿಪಿಕಾರರು[೭೩]

ಕವಿಗಳಿಂದ ರಚಿತವಾದ ಕಾವ್ಯ ಕೃತಿಗಳನ್ನು ಲಿಪಿಕರಿಸುವ ಮೂಲಕ ಕಾವ್ಯ ಓದುವಂತಹ ಆಸಕ್ತಿಯುಳ್ಳ ಸಹೃದಯರಿಗೆ ಕಾವ್ಯಗಳನ್ನು ತಲುಪಿಸುವಂತಹ ಕಾರ್ಯ ಈ ಲಿಪಿಕಾರರದಾಗಿರುತ್ತದೆ. ಇಂದಿನ ಮರು ಮುದ್ರಣದಂತೆ ಅಂದಿನ ಕಾಲದಲ್ಲಿ ಇವರ ಕಾರ್ಯವಿತ್ತು. "ಹಸ್ತಪ್ರತಿಗಳನ್ನು ನಕಲುಗೊಳಿಸುವ ಕಾರ್ಯಕ್ಕಾಗಿ ಅರಮನೆ, ಗುರುಮನೆಗಳಲ್ಲಿ ಉಂಬಳಿ, ದತ್ತಿ, ವೃತ್ತಿಯಲ್ಲಿ ಸಂಭಾವನೆ ರೂಪದಲ್ಲಿ ಪಡೆದು ನೇಮಕಗೊಂಡವರನ್ನು ನಿಯುಕ್ತ ಲಿಪಿಕಾರರೆಂದು ಕರೆಯುತ್ತಾರೆ. ಉದಾ.

ಶ್ರೀಮಂತ ಮೈಸೂರು ಚಿಕ್ಕಯ್ಯ
ರಾಯನ ರಾಯಸದ ಲಕ್ಷ್ಮೀಪತಿ ಹರ್ಷದಿನಾ
ತ್ರೇಯ ಸುಗೋತ್ರನೆನಿಪ ತ
ದ್ರಾಯಗೆ ಬರೆದತ್ತಜಿತನಾಥನ ಕೃತಿಯಂ

ಇಲ್ಲಿ ರಾಯಸದ ಲಕ್ಷ್ಮೀಪತಿ ನಿಯುಕ್ತ ಲಿಪಿಕಾರನಾಗಿ ಕಂಡುಬರುತ್ತಾನೆ.[೭೪] ಈ ರೀತಿಯ ನಿಯುಕ್ತ ಲಿಪಿಕಾರರು ಸಾಮಂತರಿಂದ, ಮಾಂಡಲೀಕರಿಂದ, ಅರಸರಿಂದ ಮತ್ತು ಸ್ವಾಮಿಗಳಿಂದ ನಿಯೋಜಿತರಾಗಿ ಅರಮನೆ ಮತ್ತು ಗುರುಮನೆಗಳಲ್ಲಿ ಹಸ್ತಪ್ರತಿ ಲಿಪಿಕರಣದ ಜೊತೆಗೆ ಅಲ್ಲಿ ಸಂಗ್ರಹಗೊಳ್ಳುತ್ತಿದ್ದ ಹಸ್ತಪ್ರತಿ ಭಂಡಾರದ ಮೇಲ್ವಿಚಾರಣೆಯ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು.

"ಉಪಜೀವನಕ್ಕಾಗಿ ಬರಹವನ್ನು ಅವಲಂಬಿಸಿದ ಪ್ರತಿಕಾರರನ್ನು ವೃತ್ತಿ ಲಿಪಿಕಾರರೆಂದು ಕರೆಯುತ್ತೇವೆ."[೭೫] ಸಮಾಜದಲ್ಲಿ ಕೆಲವು ಅಕ್ಷರಸ್ಥ ಜನವರ್ಗ ಮತ್ತು ಉಪಜೀವನಕ್ಕಾಗಿ ಬರಹವನ್ನು ನೆಚ್ಚಿಕೊಂಡು ಜೀವನ ಸಾಗಿಸಿದವರು. ಇವರು ಹಣದ ರೂಪದಲ್ಲೊ ಅಥವಾ ದವಸ ಧಾನ್ಯಾಧಿಗಳ ರೂಪದಲ್ಲೋ ಸಂಭಾವನೆ ಪಡೆಯುತ್ತಿದ್ದರು. ಬರಹ ವೃತ್ತಿಯನ್ನು ತಮ್ಮ ಜೀವನವಲಂಬನೆಗೆ ಪೂರ್ಣವಾದಿ ವ್ಯಕ್ತಿಯನ್ನಾಗಿ ಪರಿಭಾವಿಸಿಕೊಂಡಿದ್ದವರು. ಈ ರೀತಿಯ ವೃತ್ತಿ ಲಿಪಿಕಾರರಿಗೆ ಸಂಬಂಧಿಸಿದಂತೆ ಒಂದು ಉದಾಹರಣೆಯನ್ನು ನೋಡಬಹುದು. "ಮಂಜೇಶ್ವರದ ತೋಯಿನಾಮ ಅಂಣ್ಣೈಯ್ಯೆ ಭಾರತಿಗಳ ಮಗಲಿಂಗಯ್ಯ ಅಯ್ಯಗಳು

ಗುರುಕಟಾಕ್ಷದಿಂದ... ರಾಮಾಯಣ ಪುಸ್ತಕ ಕಿರುವಿನ ಕೋಟಿ ಗೋಪಾಲಯ್ಯನ ತಮ್ಮ ನೀಳೈಯನಿಗೆ ಬರೆದು ಕಾಣಿಕೆ ತೆಗೆದುಕೊಂಡು ಕೊಟ್ಟನು."[೭೬] ಜೀವನೋಪಾಯಕ್ಕಾಗಿ ಬರಹವನ್ನು ವೃತ್ತಿಯನ್ನಾಗಿ ಅವಲಂಬಿಸಿದ ವೃತ್ತಿ ಲಿಪಿಕಾರರ ಪ್ರತಿಗಳಲ್ಲಿ ದೋಷಗಳು ಅಷ್ಟಾಗಿ ಕಂಡುಬಾರದಿರುವುದನ್ನು ಕಾಣಬಹುದು. ಇವರು ತಮ್ಮ ಕಾರ್ಯವನ್ನು ಬಹಳ ಎಚ್ಚರಿಕೆಯಿಂದ ಸ್ಪಷ್ಟವಾಗಿ ಮಾಡದಿದ್ದರೆ ಅಂದಿನ ಸಮಾಜದಲ್ಲಿ ಸ್ಥಾನಮಾನ ದೊರೆಯುತ್ತಿರಲಿಲ್ಲ. ಹಾಗೂ ಇವರ ಹೆಸರು ದಾಖಲೆಯಲ್ಲಿ ಇರುತ್ತಿರಲಿಲ್ಲ. ಪ್ರಾಚೀನ ಗ್ರಂಥಗಳಲ್ಲಿಯೂ ಇಂತಹ ವೃತ್ತಿ ಲಿಪಿಕಾರರ ಕ್ವಚಿತ್ತಾದ ಉದಾಹರಣೆಗಳು ಸಿಗುತ್ತವೆ. ಅಕ್ಕಮಹಾದೇವಿಯ ವಚನಗಳಿಗೆ ಬರೆದ ಟೀಕಾಕೃತಿಯಲ್ಲಿ ರನ್ನನ ಗದಾಯುದ್ಧ, ಚಂದ್ರರಾಜನ ಮದನ ತಿಲಕ, ಸದಾಶಿವಯೋಗಿಯ ರಾಮನಾಥ ವಿಲಾಸ ಕೃತಿಗಳಲ್ಲಿಯ ಮಾತುಗಳನ್ನು ಗಮನಿಸಿದರೆ ಗ್ರಂಥೋಕ್ತ ಲಿಪಿಕಾರರ ಇತಿಹಾಸ ಕಂಡುಬರುತ್ತದೆ. ಉದಾ. ಅಕ್ಕಮಹಾದೇವಿಯೆಂಬ ಶಿವಶರಣೆಗೆ ಚನ್ನಮಲ್ಲಪ್ರಭು ಇನೂರು ಹದಿನಾರು ಸಕೀಲದ ಟಿಪುಣರ್ಥ ಬೋಧಿಸುವ ಸಮಯದಲ್ಲಿ ವಾಲೆ ಶಾಂತಯ್ಯನು ಲಿಖಿತವ ಟಿಪುಣದರ್ಥ ಮತ್ತು ಯದುಗುರಿ ಮಹಾತ್ಮೆಯ "ಕತಿಯ ನೊಲವಿಂ ಪೇಳ್ದಂ ಲಕ್ಷ್ಮೀಪತಿ ಚಿಕುಪಾದ್ಯಂ ಲಕ್ಷ್ಮಿನರಸಿಂಹ ನೋಡಿ ಬರೆದಾಮೊದದಿಂ" ಇಲ್ಲಿ ವಾಲೆ ಶಾಂತಯ್ಯ ಲಕ್ಷ್ಮೀನರಸಿಂಹರು ಲಿಪಿಕಾರರಾಗಿ ಕೆಲಸ ಮಾಡಿರುವುದು ಕಂಡುಬರುತ್ತದೆ.[೭೭]

ತಾವು ಮಾಡುವ ಬರಹದ ಕಾರ್ಯಕ್ಕೆ ಯಾವುದೇ ಸಂಭಾವನೆ ಪಡೆಯದೆ ತಮ್ಮ ಅಥವಾ ಪರಿಸರದಲ್ಲಿನ ಜನತೆಯ ಸಾಹಿತ್ಯಾಧ್ಯಯನ ಮಾಡಲು, ಸಾಹಿತ್ಯ ಕೃತಿಗಳ ಪ್ರತಿ ಮಾಡುವುದನ್ನು ಪ್ರೀತಿಯ ವಿಷಯವೆಂದು ಭಾವಿಸಿ ಹವ್ಯಾಸಕ್ಕಾಗಿ ಬರವಣಿಗೆಯನು ಮಾಡುವವರನ್ನು ಹವ್ಯಾಸಿ ಲಿಪಿಕಾರರೆಂದು ಕರೆಯುತ್ತೇವೆ. ಇವರು ಲೀಲಾ ವಿನೋದಕ್ಕಾಗಿ, ಮನೋಪ್ರೀತಿಯ ನಿಮಿತ್ತವಾಗಿ, ಪುಣ್ಯಾರ್ಥವಾಗಿ, ಜ್ಞಾನಪ್ರಾಪ್ತಿ ನಿಮಿತ್ತವಾಗಿ, ಸಂಪ್ರೀತಿಯಿಂದ, ಸ್ನೇಹಪೂರ್ವವಾಗಿ, ಓದಿಕೊಳ್ಳುವ ನಿಮಿತ್ತವಾಗಿ, ಹರಸಿ ಆನಂದ ಪಡೆಯಲೆಂಬ ಭಾವದಿಂದ ಈ ಪ್ರವೃತ್ತಿ ಲಿಪಿಕಾರರು ದುಡಿದಿರುವುದು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯಾಗಿದೆ. ಹಾಗೂ ಸಾಹಿತ್ಯ ಬೆಳವಣಿಗೆಗೆ ಪೂರಕವಾದ ಕಾರ್ಯವಾಗಿದೆ. ಸ್ವಯಿಚ್ಛೆಯಿಂದ ಹಸ್ತಪ್ರತಿಗಳನ್ನು ಲಿಪಿಕರಿಸಿದ ನೂರಾರು ಹವ್ಯಾಸಿ ಲಿಪಿಕಾರರ ಉದಾಹರಣೆಗಳು ಹಸ್ತಪ್ರತಿಗಳಲ್ಲಿ ಕಾಣಬಹುದಾಗಿದೆ.

'ಅನುಭವವಾಮೃತವನ್ನು ಜವಳಿ ಅಂಗಡಿ ಕಾಳಿದಾಸೈಯ್ಯನಿಗೆ ವುಪಾದ್ಯ ವೆಂಕಟಯ್ಯನು ಬರೆದುಕೊಟ್ಟಂತಾ ಪುಸ್ತಕಾ' ಇಲ್ಲಿ ಪರ ಪ್ರಯೋಜನಾರ್ಥವಾಗಿ ಹಸ್ತಪ್ರತಿಯನ್ನು ನಕಲು ಮಾಡಲಾಗಿದೆ. "ಬರದಾತ ಮಹಿಶೂರನಗರದ ಲಕ್ಷ್ಮೀರಮಣಸ್ವಾಮಿಯವರ ದೇವಸ್ಥಾನದ ಸ್ಥಾನಿಕ ಲಕ್ಷ್ಮೀರಮಣಪ್ಪನವರ ಮಗ ಕೃಷ್ಣಯ್ಯನು ತಾನು ತನಗೆ ಬರೆದ ಭಾರತ ಪುಸ್ತಕ" ಇಲ್ಲಿ ಗ್ರಂಥಪ್ರೇಮಿ ಲಿಪಿಕಾರ ಸ್ವಪ್ರಯೋಜನಾರ್ಥ ಬರವಣಿಗೆಯ ಕಾರ್ಯ ಮಾಡಿದ್ದಾನೆ.

ಹಸ್ತಪ್ರತಿ ಲಿಪಿಕಾರರಲ್ಲಿ ಪುರುಷ ಲಿಪಿಕಾರರಂತೆ ಮಹಿಳಾ ಲಿಪಿಕಾರರು ಕನ್ನಡ ಸಾಹಿತ್ಯ ಬೆಳವಣಿಗೆಯ ಚರಿತ್ರೆಯಲ್ಲಿ ಕಂಡುಬರುವುದು ವಿಶೇಷವಾದ ಸಂಗತಿಯಾಗಿದೆ. ಸಮಾಜದಲ್ಲಿ ಸಮಾನತೆ ಸ್ವಾತಂತ್ರ್ಯವೆ ಇಲ್ಲದ ಹೆಣ್ಣನ್ನು ಕೀಳಿರಿಮೆಯ ದೃಷ್ಟಿಯಿಂದ ಕಾಣುತ್ತಿದ್ದ ಸಂದರ್ಭದಲ್ಲಿ 'ಲಿಪಿಕಾರರಾಗಿ' ಕಂಡುಬರುವುದು ಹೆಣ್ಣಿನ ಸಾಧನೆಯೆಂದೆ ಹೇಳಬೇಕು. ಲೇಖನ ಕಲೆಯನ್ನು ಕಲೆಗಾರಿಕೆ ಮಾಡಿಕೊಳ್ಳಲು ಮಹಿಳೆಯರಿಗೆ ಪ್ರೋತ್ಸಾಹ ಬೌದ್ಧ ಧರ್ಮವು ನೀಡಿರುವುದನ್ನು ಭಾರತೀಯ ಲಿಪಿಶಾಸ್ತ್ರ ಕೃತಿ ಉಲ್ಲೇಖಿಸಿರುವುದನ್ನು ಕಾಣಬಹುದು. ತದನಂತರದ ಕಾಲದಲ್ಲಿ ಬೌದ್ಧರಂತೆ ಜೈನ ಮತ್ತು ಲಿಂಗಾಯತ ಧರ್ಮಗಳು ಮಹಿಳಾ ಲಿಪಿಕಾರರಿಗೆ ಅವಕಾಶ ನೀಡಿದವು. ಮಹಿಳೆಯರ ಹಸ್ತಪ್ರತಿ ಲಿಪಿಕರಣದ ಕಾರ್ಯ ನಡೆದ ಬಗ್ಗೆ ಮಾಹಿತಿ ಲಭ್ಯವಿದ್ದು ನೋಡಬಹುದು. ೧. "ಶಿಗ್ಗಾವಿಯ ಚನ್ನಗೌಡರ ಸೊಸಿ ಭೈರಾಜಿ ತಮ್ಮ ಗುರುವಿನ ಕೃಪೆಯಿಂದ ಲಿಂಗಲೀಲಾ ವಿಲಾಸದ ಪುಸ್ತಕವನ್ನು ಪ್ರತಿ ಮಾಡಿ... ೨. ರಾಮನ ಸಾಂಗತ್ಯ ಬರೆದವಳು ಓದಿಸುವ ಗುರುಬಸವಪ್ಪ ದೇವರ ಮಗಳು ಸಿಂಗಮ್ಮನ ಬರೆಹ."[೨೮]

ಕವಿಯು ಕೃತಿ ರಚನೆಯನ್ನು ಪೂರೈಸಿ ಸಮಾಜಕ್ಕೆ ಒಪ್ಪಿಸಿದ ನಂತರ ಆ ಕೃತಿಯು ಆಯಾ ಕಾಲದಲ್ಲಿ ಇದ್ದಂತಹ ರಾಜಕೀಯ ವ್ಯವಸ್ಥೆ ಮತ್ತು ಧಾರ್ಮಿಕ ವ್ಯವಸ್ಥೆಯ ಪ್ರಭಾವದಿಂದ ಹಲವು ಪ್ರತಿಗಳಾಗಿ ರಚನೆಗೊಳ್ಳುತ್ತಾ ಸಾಗುತ್ತಿತ್ತು. ಕನ್ನಡ ಸಾಹಿತ್ಯ ಸಂದರ್ಭದಲ್ಲೂ ಈ ರೀತಿಯ ಪ್ರೋತ್ಸಾಹದಾಯಕ ರಾಜಕೀಯ ಮತ್ತು ಧಾರ್ಮಿಕ ವ್ಯವಸ್ಥೆಯ ಪ್ರಭಾವವನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ ರಾಜರು, ಸಾಮಂತರೂ, ಮಂತ್ರಿಗಳೂ, ಧರ್ಮ ಪ್ರಚಾರಕರು, ಸಾರ್ವಜನಿಕರು, ಕವಿಗಳಿಗೆ ಆಶ್ರಯ ನೀಡುವ ಮೂಲಕ ಕಾವ್ಯ ಸೃಷ್ಟಿಗೆ ಕಾರಣರಾಗಿದ್ದಾರೆ. ಕನ್ನಡದ ಆದಿಕವಿ ಪಂಪನಿಗೆ ಆಶ್ರಯ ನೀಡಿದ ಅರಿಕೇಸರಿ, ರನ್ನನಿಗೆ ಆಶ್ರಯ ನೀಡಿದ ಸತ್ಯಾಶ್ರಯ ಇರೆವಬೆಡಂಗ, ಗುರುಬಸವನಿಗೆ ಆಶ್ರಯ ನೀಡಿದ ಪ್ರೌಢದೇವರಾಯ ಇನ್ನೂ ಮುಂತಾದ ಅನೇಕರು ಕೃತಿ ರಚನೆಯ ಕಾರಣವಾಗಿ ಈ ಒಂದು ಅಂಶ ಕಂಡುಬಂದರೆ ಒಂದು ಕೃತಿ ಹಲವಾರು ಪ್ರತಿಯಾಗಲು ಅತ್ತಿಮಬ್ಬೆಯಂತಹ ಧರ್ಮದ ಅನುಯಾಯಿಗಳು ಕೃತಿಯನ್ನು ಸಾವಿರಾರು ಪ್ರತಿಗಳನ್ನು ಮಾಡಿಸಿದುದು ಇದು ಧರ್ಮದ ಹಿನ್ನೆಲೆಯಾದರು ಬಹುಜನರಿಗೆ ತಲುಪಿಸುವ ಕಾರ್ಯ. ಇಂತಹ ಸಾಹಿತ್ಯ ಪ್ರಸರಣದ ಕಾರ್ಯದಲ್ಲಿ ಕನ್ನಡ ಲಿಪಿಕಾರರ ಪಾತ್ರ ಮುಖ್ಯವಾದುದೇ. "ಇಲ್ಲಿಯವರೆಗೂ ಸುಮಾರು ೪೦ ಸಾವಿರ ಕನ್ನಡ ಹಸ್ತಪ್ರತಿಗಳು"[೨೯] ಲಭ್ಯವಾಗಿರುವಂತಹದ್ದು. ಅಳಿದು ಹೋಗಿಯೂ ಉಳಿದುದು ಇಷ್ಟು ಸಂಖ್ಯೆಯಲ್ಲಿ ಇನ್ನೂ ಕಾಲಗರ್ಭದಲ್ಲಿ ಮರೆಯಾಗಿರುವ ಹಸ್ತಪ್ರತಿಗಳು ಇವೆ. ಶ್ರಮ, ಶ್ರದ್ಧೆ, ಕೌಶಲ್ಯದಿಂದ ಇಷ್ಟು ಬೃಹತ್ ಪ್ರಮಾಣದ ಹಸ್ತಪ್ರತಿಗಳನ್ನು ರಚಿಸುವಲ್ಲಿ ದುಡಿದ ಲಿಪಿಕಾರರ ಪಾತ್ರ ಅಮೋಘವಾದುದು.

ಹಸ್ತಪ್ರತಿ ಸಂರಚನೆಯಲ್ಲಿ ಲಿಪಿಕಾರರ ಹಾಗೆಯೇ ದುಡಿದ ಕುಶಲಕರ್ಮಿಗಳ ಅಧ್ಯಯನವು ಬಹಳ ಮುಖ್ಯವಾಗಿದೆ. ಈ ಕುಶಲಕರ್ಮಿಗಳು ಸಾಹಿತ್ಯ ಕೃತಿಯ ಹಸ್ತಪ್ರತಿ ರಚನೆಗೆ

ಸಂಬಂಧಿಸಿದಂತೆ ಮಾಡಿದ ತಾಂತ್ರಿಕ ಕೌಶಲ್ಯವು ಪ್ರಸ್ತುತ ಸಂದರ್ಭದಲ್ಲಿ ನಾವು ಪಡೆದುಕೊಳ್ಳುವ ಜ್ಞಾನ, ಸಾಹಿತ್ಯ, ಆಸ್ವಾದನೆ, ಸಂತೋಷ, ಮಾನಸಿಕ ನೆಮ್ಮದಿ ಮುಂತಾದ ವಿಚಾರಗಳಿಗೆ ಪರೋಕ್ಷವಾಗಿ ಕಾರಣವೆಂದೆನಿಸುತ್ತವೆ. ಇಂತಹ ಕುಶಲಕರ್ಮಿಗಳ ಕುರಿತ ವಿಶ್ಲೇಷಣೆ ಅಗತ್ಯವಾಗಿದೆ.

**ಓಲೆಕಾರ:** ಕುಲಕಸುಬಾಗಿ ಪಾರಂಪರಿಕವಾಗಿ ತಮ್ಮ ಕಾಯಕವನ್ನು ಮಾಡುತ್ತಾ ಬಂದಿರುವವರಲ್ಲಿ ಓಲೆಕಾರರು ಕೂಡ ಒಬ್ಬರು. ಬರಹಕ್ಕೆ ಓಲೆಗಳನ್ನು ಸಿದ್ಧಪಡಿಸಿಕೊಡುವುದು ಇವರ ಕೆಲಸ. ಮಂಗರಾಜನ ನಿಘಂಟುವಿನಲ್ಲಿ ಇವರನ್ನು ಪತ್ರಿಕಾ ಎಂದು ಕರೆದು 'ಓಲೆಗಳು ಮಾಳ್ಪವಂ' ಎಂಬ ವಿವರಣೆಯನ್ನು ನೀಡಲಾಗಿದೆ. ಮರದಿಂದ ಓಲೆಗಳನ್ನು ಸಂಗ್ರಹಿಸಿ ಬರಹ ಮಾಡುವವರಿಗೆ ಮಾರುತ್ತಿರಬೇಕು. "ಈ ಮಾತಿಗೆ ಸೂಚನೆಯೆಂಬಂತೆ ಕರ್ನಾಟಕದಲ್ಲಿ ವೀರಶೈವ ವರ್ತಕ ವರ್ಗದ 'ವಾಲಿ' ಎಂಬ ಅಡ್ಡ ಹೆಸರಿನ ಮನೆತನದವರು ಮೂಲತಃ ಈ ಉದ್ಯೋಗವನ್ನೇ ಮಾಡುತ್ತಿದ್ದರೆಂದು ಡಾ.ಎಂ.ಎಂ. ಕಲ್ಬುರ್ಗಿಯವರು ಅಭಿಪ್ರಾಯ ಪಡುತ್ತಾರೆ."[೮೦]

ಗಿಡದಿಂದ ಎಲೆಯ ಮೋತಿ ಹೊರ ಹೊರಟು ಇನ್ನೇನು ಬಿಚ್ಚಿ ಹರಡುತ್ತವೆ ಎನ್ನುವಷ್ಟರಲ್ಲಿ ಅವುಗಳನ್ನು ಕತ್ತರಿಸಿ ತಂದು, ಕೊನೆಯ ಪಕ್ಷ ಏಳು ದಿನಗಳವರೆಗಾದರೂ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಅವುಗಳನ್ನು ಮೂರು ತಿಂಗಳವರೆಗಾದರೂ ನೆಲದಲ್ಲಿ ಹೂಳಿ, ತೆಗೆದು ಹದಗೊಳಿಸಿ, ಬೇಕಾದ ಅಳತೆಗೆ ಕತ್ತರಿಸಿ ಅಡಿಗೆ ಮನೆಯ ಅಟ್ಟಗಳಲ್ಲಿಡುತ್ತಿದ್ದರು. ಹೀಗೆ ಹದಗೊಂಡದ್ದನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು. ಈ ರೀತಿಯ ಓಲೆ ಸಂಗ್ರಹ ವಿಧಾನದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನತೆಯಿರುವುದನ್ನು ವಿದ್ವಾಂಸರು ಗುರುತಿಸುತ್ತಾರೆ. ಇಂತಹ ಓಲೆ ವೃತ್ತಿಕಾರರ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುವುದನ್ನು ಕಾಣಬಹುದು. ವಚನಕಾರರ ಕಾಲದಲ್ಲಿ ಓಲೆಯ ರಾಮಣ್ಣ ಓಲೆಯ ಶಾಂತಯ್ಯ ಮುಂತಾದವರ ಹೆಸರು ಕಂಡುಬರುವುದರಿಂದ ಇದೊಂದು ಉದ್ಯಮಶೀಲ ವೃತ್ತಿಯಾಗಿದ್ದು ಬರಹ ಪೂರ್ವದ ಕಾರ್ಯಕ್ಕೆ ಅಗತ್ಯ ಸಲಕರಣೆಗಳನ್ನು ಒದಗಿಸುವ ಕೌಶಲ್ಯಪೂರಿತ ಅಥವಾ ತಾಂತ್ರಿಕವಾದ ಸಹಾಯಕ ಕಾರ್ಯವನ್ನು ಮಾಡುತ್ತಿದ್ದುದು ಬರಹಪೂರ್ವದ ತಾಂತ್ರಿಕತೆಯಲ್ಲಿ ಓಲೆಕಾರರು ಪ್ರಮುಖರಾಗಿದ್ದರು.

**ಬಡಿಗರು:** ಹಸ್ತಪ್ರತಿ ರಚನೆಗೆ ಸಂಬಂಧಿಸಿದ ಕುಶಲಕರ್ಮಿಗಳಲ್ಲಿ ಬಡಿಗೇರರು ಒಬ್ಬರು. ಇವರು ಗೃಹ ಉಪಯೋಗಿ ಮತ್ತು ಕೃಷಿ ಉಪಯೋಗಿ ಕಟ್ಟಿಗೆ ಕೆಲಸವನ್ನು ಮಾಡುವ ಇವರು ಹಸ್ತಪ್ರತಿ ರಚನೆಯಲ್ಲಿ ಕುಶಲಕರ್ಮಿಗಳಾಗಿ ದುಡಿದಿದ್ದಾರೆ. ಹಸ್ತಪ್ರತಿಗಳ ರಚನೆಗೆ ಸಂಬಂಧಿಸಿದಂತೆ ಓಲೆಕಾರ, ಬಡಿಗಾರ, ಲೋಹಕಾರ, ಚಿತ್ರಗಾರ ಮುಂತಾದ ಕಸುಬುದಾರಿಕೆ ವರ್ಗಗಳ ಕಾರ್ಯವು ಹಂತಹಂತವಾಗಿ ಇರುತ್ತದೆ. ಅದೇ ರೀತಿ ಓಲೆಕಾರರ ಓಲೆ ಸಂಗ್ರಹ ವಿಧಾನದ ನಂತರ ಈ ಬಡಿಗೇರರ ಕೆಲಸ ಆರಂಭವಾಗುತ್ತಿತ್ತು. ಹಸ್ತಪ್ರತಿಗಳ ಮೇಲಿನ ಫಲಗಳ ಸಿದ್ಧ ಮಾಡುವ ಕಾರ್ಯ ಇವರದಾಗಿತ್ತು. ಹಸ್ತಪ್ರತಿ ರಚನೆಯಾದ ನಂತರ ಅವುಗಳ

ಮೇಲ್ ಹೊದಿಕೆ ಅಥವಾ ರಕ್ಷಾಕವಚಗಳನ್ನು ಹಸ್ತಪ್ರತಿಯ ಅಳತೆಗೆ ತಕ್ಕಂತೆ ಮಾಡುತ್ತಿದ್ದರು. ಈ ರಕ್ಷಾಕವಚದಿಂದ ಹಸ್ತಪ್ರತಿಗಳು ಬಹುಕಾಲ ಬಾಳಿಕೆ ಬರುತ್ತಿದ್ದವು. ಈ ಕಾಲದ ಬೈಂಡಿಂಗ್ ಮತ್ತು ಕಟ್ಟಿಂಗ್ ಕೆಲಸಕ್ಕೆ ಇದು ಸಮಾನವಾಗಿತ್ತು.

**ಚಿತ್ರಗಾರ:** ಹಸ್ತಪ್ರತಿಗಳ ಫಲಕಗಳನ್ನು ನಿರ್ಮಿಸುವಲ್ಲಿ ಬಡಿಗಾರರು ಶ್ರಮಿಸಿದರೆ ಹಸ್ತಪ್ರತಿಗಳ ಫಲಕಗಳಲ್ಲಿ ಹಾಗೂ ಹಸ್ತಪ್ರತಿಗಳಲ್ಲಿ ಇರುವ ಪಠ್ಯದ ವಿಷಯವಸ್ತುವಿಗೆ ತಕ್ಕಂತೆ ಚಿತ್ರಗಳನ್ನು ರಚಿಸುವಲ್ಲಿ ಚಿತ್ರಗಾರರು ಶ್ರಮಿಸಿದರು. ಇಂದಿನ ಸಂದರ್ಭದಲ್ಲಿ ಯಾವುದೇ ಒಂದು ಸಾಹಿತ್ಯ ಕೃತಿಯ ಮುಖಪುಟ ರಚಿಸುವ ಮುಖಪುಟ ಕಲಾವಿನ್ಯಾಸಕಾರನ ಹಾಗೆ ಹಸ್ತಪ್ರತಿ ರಚನೆಯ ಕಾಲದಲ್ಲಿ ಈ ಚಿತ್ರಕಾರರು ಕಾರ್ಯನಿರ್ವಹಿಸುತ್ತಿದ್ದರು. ಒಂದು ವಿಷಯದ ಅಭಿವೃದ್ಧಿಗೆ ಲಿಪಿ ಮಾಧ್ಯಮವು ಎಷ್ಟು ಮುಖ್ಯವೋ ಚಿತ್ರಮಾಧ್ಯಮವು ಕೂಡ ಅಷ್ಟೇ ಮುಖ್ಯವಾಗಿರುತ್ತದೆ ಎಂಬುದನ್ನು ತಾಂತ್ರಿಕವಾಗಿ ಮಾಡುತ್ತಿದ್ದ ಚಿತ್ರಗಾರರ ಕಾರ್ಯ ಬಹುಮುಖ್ಯವಾಗಿದೆ. ಈ ರೀತಿಯ ಕಾರ್ಯವು ಹಸ್ತಪ್ರತಿಗಳನ್ನು ಓದುವ ಸಾಹಿತ್ಯಾಸಕ್ತರನ್ನು ಆಕರ್ಷಿಸುತ್ತವೆ ಎನ್ನಬಹುದು. ಈ ರೀತಿಯ ಪ್ರಯೋಜನಾತ್ಮಕವಾದ ಕಾರ್ಯಮಾಡಿದ ಚಿತ್ರಗಾರರ ಹಸ್ತಪ್ರತಿಗಳಲ್ಲಿ ಕಾಣಬರುವುದಿಲ್ಲ. "ಕರ್ನಾಟಕದಲ್ಲಿ ಕೆಲವೊಂದು ಚಿತ್ರಗಾರರ ಮನೆತನಗಳು ಕಂಡುಬರುತ್ತವೆ. ಹಾಗೂ ಕರ್ನಾಟಕದಲ್ಲಿ ದೊರೆಯುವ ಕುರ್ತಕೋಟಿ, ಬೆಳವಣಿಕೆ, ಕೃಷ್ಣರಾಜಪೇಟೆ ಮತ್ತು ಮಾಳಗುಂದದ ಶಾಸನಗಳಲ್ಲಿ ಮರವೆಸ ಅಥವಾ ಕಾಷ್ಟಕರ್ಮ ಕೆಲಸದಲ್ಲಿ ಪ್ರಖ್ಯಾತವಾಗಿದ್ದ ಐಯಾಣ್ಣಬೊಮ್ಮ, ಗವರಾಚಾರ್ಯ ಶಿಲ್ಪಿಗಳ ಬಗ್ಗೆ ಉಲ್ಲೇಖಗಳಿವೆ."[೬೧] ಈ ಚಿತ್ರಗಾರ ಕೊಡುಗೆ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖವಾದುದಾಗಿದೆ.

**ಲೋಹಕಾರ:** ಒಂದು ಕೃತಿಯನ್ನು ಪ್ರತಿಮಾಡುವಾಗ ಬರಹದ ಸಾಮಾಗ್ರಿಯಾಗಿ ತಾಳೆಗರಿಯನ್ನು ಬಳಸಿದರೆ, ತಾಳೆಗರಿಯ ಮೇಲೆ ಬರೆಯಲು ಲೇಖನಿಯಾಗಿ ಕಂಟವನ್ನು ಬಳಸುತ್ತಿದ್ದರು. ಈ ಕಂಟಗಳ ತಯಾರಿಸುತ್ತಿದ್ದವರು ಲೋಹಕಾರರು. ಗರಿಗಳ ಮೇಲೆ ಕೊರೆಯಲು ಬಳಸುವ ಕಂಟಗಳನ್ನು ಬಹಳ ನೈಪುಣ್ಯತೆಯಿಂದ ನಿರ್ಮಿಸುತ್ತಿದ್ದರು. ಇಂತಹ ಕಂಟಗಳನ್ನು ತಯಾರಿಸುತ್ತಿದ್ದ ಶಿಲ್ಪಿಯ ಬಗ್ಗೆ "ಕುರ್ತಕೋಟಿಯ ೧೨೭ನೆಯ ಶಾಸನ ಪರಿಕರ 'ಪಚ್ಚೆಣೋದ್ಭವನ ಕಂಟದ ಬೊಮ್ಮೆ' ಎಂದು ಉಲ್ಲೇಖಿಸುತ್ತದೆ. ಇವರು ಕಬ್ಬಿಣ ಕಂಟಗಳನ್ನಲ್ಲದೆ ಕಂಚಿನ ಮತ್ತು ಹಿತ್ತಾಳೆಯ ಕಲಾತ್ಮಕ ಕಂಟಗಳನ್ನು ತಯಾರಿಸುತ್ತಿದ್ದರು."[೬೨] ಕಂಟಗಳ ತಯಾರಿಕೆಯ ಕಾರ್ಯ ಹಸ್ತಪ್ರತಿಗಳ ಸಂರಚನೆಗೆ ಸಹಾಯಕ ಕ್ರಿಯೆಯಾಗಿದೆ.

**ಮಸಿ ಕಾಯಕದವರು:** ತಾಳೆಗರಿಯ ಮೇಲೆ ಕಂಟದಿಂದ ಅಕ್ಷರಗಳನ್ನು ಕೊರೆದ ಬಳಿಕ ಅದರ ಮೇಲೆ ಕಪ್ಪು ಲೇಹ್ಯವನ್ನು ಒರೆಸುತ್ತಿದ್ದರು. ಕೊರೆದ ಭಾಗದಲ್ಲಿ ಈ ಕಪ್ಪು ಸೇರಿ ಅಕ್ಷರ ಸ್ಫುಟವಾಗಿ ಕಾಣುತ್ತಿದ್ದವು. ಅದರಂತೆ ಕಾಗದದ ಮೇಲೆ ಬರೆಯಲು ದ್ರವರೂಪದ ಮಸಿ ಬಳಸುತ್ತಿದ್ದರು. ಇಂತಹ ಮಸಿಕಾಯಕವನ್ನು ಮಾಡುತ್ತಿದ್ದವರನ್ನು 'ಮಸಿ ಕಾಯಕದವರು'

ಎಂದು ಕರೆಯುತ್ತಿದ್ದರು. ತಾಳೆಗರಿಯ ಮೇಲೆ ಕಪ್ಪು ನೀಡುವವರು 'ಹಸ್ತಾಂಜನ' ಮಾಡುವವರು ಪ್ರತಿ ಮೇಲೆ ಬಳಸುವವರಾಗಿದ್ದು, ಮಸಿಕಾಯಕದವರು ತಯಾರಕರಾಗಿದ್ದರು.

ಬಣ್ಣ ಮತ್ತು ಮಸಿಗಳನ್ನು ತಯಾರಿಸಿಕೊಳ್ಳುತ್ತಿದ್ದ ವಿಧಾನಗಳನ್ನು ಮಸಿಕಾಯಕದವರ ವೃತ್ತಿ ವೈಶಿಷ್ಟ್ಯತೆ ಬಹಳ ಕೌಶಲ್ಯಯಿಂದ ಕೂಡಿರುವಂತಹದ್ದು. ಬರಹವು ಸುಂದರವಾಗಿ ಕಾಣಲು ದ್ರವ, ಘನ ಮತ್ತು ಲೇಹ್ಯ ಎಂದು ಮೂರು ರೀತಿಯ ಮಸಿ ತಯಾರಿಸುತ್ತಿದ್ದರು. ಕರ್ನಾಟಕದಲ್ಲಿ ಮಸಿಕಾಯಕ ಮಾಡುವ ಉಲ್ಲೇಖಗಳು ಅಷ್ಟಾಗಿ ಸಿಕ್ಕಿಲ್ಲ. "ಭವಿಷ್ಯ ಪುರಾಣದ ೭–೮೪ರ ಶ್ಲೋಕದಲ್ಲಿ ತಚ್ಚ ಪ್ರಾಪ್ನುವನ್ ಕರ್ತವ್ಯಂ ಸವರ್ಣ ರಜತಸ್ಯ ಚ ಕಜ್ಜಲೆರ್ಮಲಿನಂ ಕುರ್ಯಾನ್ಮಂತ್ರಿ ನಿರ್ಯಾಸ ಮಂತ್ರತೈಃ "ಗೋಂದು ಮಿಶ್ರಿತವಾದ ಕಾಡಿಗೆಯನ್ನು ಬೆಳ್ಳಿಯ ಕಡ್ಡಿಯಿಂದಲೋ, ಚಿನ್ನದ ಕಡ್ಡಿಯಿಂದಲೋ ಸವರಿ ಅಕ್ಷರಗಳನ್ನು ಕಪ್ಪಗೆ ಮಾಡಬೇಕು"[೮೩] ಎಂಬುದು ಇದರರ್ಥ. ಹೀಗಾಗಿ ಕಪ್ಪು ನೀಡುವವರ ತಾಂತ್ರಿಕ ಅಂಶವನ್ನು ಇಲ್ಲಿ ಗಮನಿಸಬೇಕಾಗಿದೆ.

**ವಸ್ತ್ರದವರು:** ಓಲೆಗರಿ ಅಥವಾ ಕಾಗದಗಳಲ್ಲಿ ಸಾಹಿತ್ಯದ ಪ್ರತಿಯು ರಚನೆಯಾದ ಮೇಲೆ ಅವುಗಳನ್ನು ಕೆಂಪು ಅಥವಾ ಬೇರೆ ವಸ್ತ್ರಗಳಲ್ಲಿ ಸುತ್ತಿಡುತ್ತಿದ್ದ ಸಂರಕ್ಷಣಾ ವಿಧಾನಗಳನ್ನು ಕಾಣಬಹುದು. ಹಸ್ತಪ್ರತಿಗಳನ್ನು ಆರ್ದ್ರತೆ ಮತ್ತು ಕೀಟಗಳಿಂದ ರಕ್ಷಣೆ ಮಾಡುವ ಉದ್ದೇಶದಿಂದ ವಸ್ತ್ರವನ್ನು ಸುತ್ತುತ್ತಿದ್ದರು. ಆದುದರಿಂದ ಈ ಕಾಯಕವನ್ನು ಮಾಡುವವರನ್ನು ವಸ್ತ್ರದವರು ಎನ್ನುತ್ತಾರೆ. ಇವರು ಪುಸ್ತಕಭಂಡಾರದಲ್ಲಿಯೋ, ಮಠಗಳಲ್ಲಿಯೋ ಕಾರ್ಯನಿರ್ವಹಿಸುತ್ತಿದ್ದರು ಎಂದು ತಿಳಿಯಬಹುದು.

ಸಾಹಿತ್ಯ ಕೃತಿಗಳ ರಚನೆ ಮತ್ತು ಸಂರಕ್ಷಣೆಯ ಕಾರ್ಯದಲ್ಲಿ ಪ್ರಾಚೀನ ಕರ್ನಾಟಕದ ಕುಶಲಕರ್ಮಿಗಳ ಪಾತ್ರ ಬಹಳ ಹಿರಿದಾದುದು. ಇವರೆಲ್ಲರೂ ಶೂದ್ರ ವರ್ಗಕ್ಕೆ ಸೇರಿದ್ದು ಸಮಾಜದಲ್ಲಿ ಸುಶಿಕ್ಷಿತವಲಯ ರೂಪುಗೊಳ್ಳಲು ಬೇಕಾದ ಹೊತ್ತಿಗೆ, ಪುಸ್ತಕ, ಕೃತಿ, ಗ್ರಂಥ ಮುಂತಾದ ಸಾಮಗ್ರಿಗಳ ಜನಕರಾಗಿದ್ದರು. ಆ ಕಾಲದಲ್ಲಿಯೇ ಇಂದಿನ ತಂತ್ರಜ್ಞಾನದಂತೆ ಲೇಖನ ಸಾಮಗ್ರಿಗಳನ್ನು ಕೌಶಲ್ಯಪೂರಿತವಾಗಿ ತಯಾರು ಮಾಡಿದ್ದು ಈ ಶ್ರಮಿಕ ಸಮುದಾಯಗಳು.

ದೈಹಿಕವಾಗಿ ಶ್ರಮಪಡುವವರನ್ನು ಕೀಳು ಎಂದು ಬಿಂಬಿಸುತ್ತಿದ್ದ ಕಾಲದಲ್ಲಿ ದೈಹಿಕವಾಗಿ ಮೂಲವಾದ ಬರಹದ ಕಲೆ, ವೃತ್ತಿ ಮತ್ತು ಪ್ರವೃತ್ತಿಯಾಗಿ ಬೆಳೆದದ್ದು ಮಹತ್ವದ ಸಂಗತಿ. ಜೀವನೋಪಾಯಕ್ಕಾಗಿ ವೃತ್ತಿಯನ್ನು ಅವಲಂಬಿಸಿದ ಕಸುಬುದಾರ ವರ್ಗಗಳು ಬರವಣಿಗೆ ಮತ್ತು ಅದಕ್ಕೆ ಪೂರಕವಾದ ಸಾಮಾಗ್ರಿಗಳ ಉತ್ಪಾದನಾ ಕಾರ್ಯಗಳಲ್ಲಿ ತಾಂತ್ರಿಕ ಸಿದ್ದಿ ಪಡೆದಿದ್ದರು.

ಒಂದು ಸಾಹಿತ್ಯ ಕೃತಿಯ ಸಿದ್ಧತೆಯ ವಿವಿಧ ಹಂತಗಳಲ್ಲಿ ದುಡಿದ ಕುಶಲಕರ್ಮಿಗಳ ತಾಂತ್ರಿಕ ಕಾರ್ಯ ಬಹುವಿಧದವಾದದ್ದು. "ಲಿಪಿಕಾರನಿಗೆ ಶ್ರೇಷ್ಠ ಬೌದ್ಧಿಕ ವಾದಿಗಳು ಹೇಳಿದ್ದನ್ನು

ಕಂಡರಿಸುವುದಷ್ಟೇ ಕೆಲಸ. ಅದಕ್ಕೆ ತಜ್ಞತೆ ಬೇಕಿಲ್ಲ ಹಾಗೂ ಬರೆಯುವ ವಿಷಯವು ಅರ್ಥವಾಗಬೇಕಿಲ್ಲ"[೮೪] ಎನ್ನುವ ಕೊಂಕು ಮಾತುಗಳಿಗೆ ಲಿಪಿಕಾರರ ಎದೆಗಾರಿಕೆ ಯತ್ನ ಕುಂದಿಸಿದರೂ ಎದೆಗುಂದದೆ ಹಸ್ತಪ್ರತಿಗಳ ಸಂರಚನೆಯ ಜವಾಬ್ದಾರಿಯಿಂದ ಹಿಂದೆ ಸರಿಯಲಿಲ್ಲ. ಲಿಪಿಯ ಅಕ್ಷರ ಪ್ರಪಂಚಕ್ಕೆ ಭಾಷಿಕ ಚಲನೆಯನ್ನು ಕೊಡುತ್ತಿದ್ದುದು ಲಿಪಿಕಾರನ ಬಹು ಮುಖ್ಯವಾದ ಕಾರ್ಯ. ಲಿಪಿಕಾರನಿಗಿದ್ದ ಜವಾಬ್ದಾರಿ, ಪ್ರಜ್ಞಾವಂತಿಕೆ, ಸೌಂದರ್ಯ ಪ್ರಜ್ಞೆ ಒಂದು ಪ್ರತಿಯು ಸಹೃದಯರನ್ನು ಆಕರ್ಷಿಸುವುದಕ್ಕೆ ಮುಖ್ಯ ಕಾರಣವೆನ್ನಬಹುದು. ಲಿಪಿಕಾರನಿಗಿದ್ದ ಬರವಣಿಗೆ ಅಥವಾ ಬರಹದ ಮೇಲಿನ ಸೌಂದರ್ಯಪ್ರಜ್ಞೆ ಅಗಾಧವಾದದ್ದು. ಲಿಪಿಕಾರನ ಸೌಂದರ್ಯಪ್ರಜ್ಞೆಯ ಬಗ್ಗೆ ನವಿಲ್ಗುಂದದ ಮಾದಿರಾಜ ಪುಷ್ಪದಂತ ಪುರಾಣದ ಪ್ರತಿಯಲ್ಲಿ ನಿದರ್ಶನಗಳನ್ನು ಕಾಣಬಹುದು.

"ಬಿಂದುವಿನೊಳೊಂದು ಶೋಭೆ ತಲೆಕಟ್ಟಿನ ಪೊರ್ಕುಳ ಚೆಲ್ವುಮಾತ್ರೆಯೊಳ್
ನಿಂದ ಬೆಡಂಗು ಬಳ್ಳಿಯೊಳೊಡಂಬಡುತಿರ್ಪನಯಂ ವಿಸರ್ಗದೊ
ಳ್ಪೊಂದಿರಲಕ್ಕರಕೆ ಬರೆವಂ ಚತುರಕ್ ಪರಿವರ್ಣಿಸಲ್ ನವಿ
ಲ್ಗುಂದದ ಮಾದಿರಾಜ ವಿಬುಧಂ ವಿಭುದೋತ್ಥಿತ ನವ್ಯಕಾವ್ಯಮಂ"[೮೫]

ಈ ಪದ್ಯದ ವಿವರಣೆಯನ್ನು ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ಎಂಬ ಕೃತಿಯಲ್ಲಿ ಡಾ.ಬಿ.ಕೆ. ಹಿರೇಮಠರು ಹೀಗೆ ನೀಡುತ್ತಾರೆ. ಬಿಂದುವಿನೊಂದು ಶೋಭೆ ಮುತ್ತುಗಳನ್ನೇ ಪವಣಿಸಿ ಇಟ್ಟಂತಿರುವ ವೃತ್ತಾಕಾರದ ಒಲವು. ತಲೆಕಟ್ಟಿನ ಪೊರ್ಕುಳ ಚೆಲ್ವು ಅಕ್ಷರ ಅಕ್ಷರಗಳಲ್ಲಿ ವ್ಯತ್ಯಾಸವನ್ನುಂಟು ಮಾಡುವ ನಯವಾದ ಅಂಗವಿನ್ಯಾಸ (ಪೊರ್ಕುಮಿ) ಅದಕ್ಕೊಪ್ಪುವ ಪ್ರಮಾಣಬದ್ಧ ರೇಖೆ (ತಲೆಕಟ್ಟು), ಮಾತ್ರೆಯೊಳ್‌ನಿಂದ ಬೆಡಂಗು ಪದ ಪದಗಳನ್ನು ಬಿಡಿಸಿ ಬರೆಯುವುದರಿಂದ ಇಡೀ ಬರಹಕ್ಕೆ ಉಂಟಾಗುವ ಬೆಡಗು, ಬಳ್ಳಿಯೊಳೊಡಂಬಡುತಿರ್ಪ ನಯಂ ಕುಡಿಚಾಚಿ ಬೆಳೆದು ಬಳ್ಳಿಯಂತೆ ಸಾಲು ಸಾಲುಗಳಲ್ಲಿ ಕಂಡುಬರುವ ಏಕಸೂತ್ರತೆ, ನಿಸರ್ಗದೊಳ್ಪು ಬಿಂದುವಿಗೆ ಅಡಕಿ ತೀರಿಸಿದಂತಹ ವಿಸರ್ಗದ ಶೋಭೆ ಈ ಮುಂತಾದ ಮಾತುಗಳಲ್ಲಿ ಮಾದಿರಾಜನು ಕನ್ನಡ ಸುಂದರಾಕ್ಷರಗಳ ಲಕ್ಷಣಗಳನ್ನೇ ಹೇಳಿದ್ದಾನೆ. ಈ ರೀತಿಯ ಅಕ್ಷರ ಸೌಂದರ್ಯದಿಂದ ಹಸ್ತಪ್ರತಿಯ ಮೌಲ್ಯ ಹೆಚ್ಚುವುದರೊಂದಿಗೆ ಲಿಪಿಕಾರ ಕೀರ್ತಿಯು ಸಹ ಹೆಚ್ಚುತ್ತಿತ್ತು.

ಲಿಪಿಕಾರರು ಒಂದು ಕಡೆ ಬರಹವನ್ನು ಸುಂದರವಾಗಿ ಬರೆಯುವುದರೊಂದಿಗೆ ಅಲಂಕಾರ ಲಿಪಿ, ಚಿತ್ರಲಿಪಿ, ಸಣ್ಣಲಿಪಿ, ಶೀಘ್ರಲಿಪಿ, ಕೂಡುಲಿಪಿ, ಮೋಡಿಲಿಪಿ ಮುಂತಾದ ವೈವಿಧ್ಯಮಯ ಲಿಪಿಬರವಣಿಗೆಯನ್ನು ಕರಗತ ಮಾಡಿಕೊಂಡಿದ್ದುದು ವಿಶೇಷವಾಗಿತ್ತು. ಲಿಪಿಕಾರರಂತೆಯೇ ಬರಹದ ಫಲಕಗಳನ್ನು ಮಾಡುತ್ತಿದ್ದ ಬಡಿಗೇರರು ಈ ಹೊತ್ತಿನ ಮುದ್ರಿತ ಗ್ರಂಥಗಳಿಗೆ ಬೈಂಡಿಂಗ್ ರೀತಿಯಲ್ಲಿಯೇ ಅಂದು ಹಸ್ತಪ್ರತಿಗಳ ರಕ್ಷಾಕವಚವನ್ನು ಮಾಡುತ್ತಿದ್ದುದು. ಓಲೆಗರಿ

ಇಲ್ಲವೇ ಕಾಗದ ಪ್ರತಿ ಸಿದ್ಧಗೊಂಡ ಮೇಲೆ ಪ್ರತಿಗಳ ಅಂಚು ಹೊರಚಾಚದಂತೆ ಫಲಕವನ್ನು ಹೆಚ್ಚುಗೊಳಿಸಿ ಫಲಕಗಳ ಅಂಚುಗಳ ಏಣುಗಳನ್ನು ಮುರಿದು ಸುಂದರಗೊಳಿಸುತ್ತಿದ್ದ ತಾಂತ್ರಿಕ ಕ್ರಿಯೆ ಪ್ರಶಂಸನೀಯವಾದುದು. ಹಸ್ತಪ್ರತಿಯ ವಸ್ತುವಿಷಯಗೊಳಗೊಂಡಂತೆ ಚಿತ್ರಗಳನ್ನು ಚಿತ್ರಿಸಿದ ರೀತಿ, ಅಕ್ಷರಗಳು ಸ್ಪುಟವಾಗಿ ಕಾಣಲು ಲೇಹ್ಯವನ್ನು ಲೇಪಿಸುವಲ್ಲಿನ ವೈಧಾನಿಕತೆ, ಒಟ್ಟಾರೆಯಾಗಿ ಹಸ್ತಪ್ರತಿಗಳ ವಿನ್ಯಾಸ ಕಲಾ ಸೌಂದರ್ಯಕ್ಕೆ ಕಾರಣ ಈ ಸಮುದಾಯಗಳು ಇಷ್ಟೊಂದು ಅಮೂಲ್ಯವಾದ ಕೊಡುಗೆಯನ್ನು ಕನ್ನಡ ಭಾಷೆ ಮತ್ತು ಸಾಹಿತ್ಯ ಲೋಕಕ್ಕೆ ನೀಡಿದ್ದರೂ ಅವರ ಜೀವನ ಮತ್ತು ಸಾಧನೆಯ ಬಗ್ಗೆ ಎಲ್ಲಿಯೂ ಹೇಳಿಕೊಂಡಿಲ್ಲ. ಕಾಲಗರ್ಭದಲ್ಲಿ ಮರೆಯಾಗಿ ಹೋಗಿರುವ ಹಸ್ತಪ್ರತಿ ಸಂರಚನೆಯ ಕುಶಲಕರ್ಮಿಗಳ ತಾಂತ್ರಿಕ ಪರಿಣಿತಿಯನ್ನು ವಿವರಗಳನ್ನು ಇಂದು ಮರು ಶೋಧಿಸಬೇಕಾಗಿದೆ.

**೩.೫. ಕಡತ ಮತ್ತು ಕಾಗದ**

ಭಾರತಕ್ಕೆ ಮುದ್ರಣತಂತ್ರಜ್ಞಾನ ಬರುವುದಕ್ಕೂ ಮುಂಚೆ ಸಾಹಿತ್ಯದ ಬರವಣಿಗೆಗೆ ತಾಳೆಗರಿ ಹಾಗೂ ಬಟ್ಟೆಗಳನ್ನು ಬಳಸಲಾಗಿದ್ದ ವಿಚಾರವನ್ನು ಹಿಂದಿನ ಅಧ್ಯಾಯದಲ್ಲಿ ಸುಧೀರ್ಘವಾಗಿ ಚರ್ಚಿಸಿದ್ದೇನೆ. ಅರಿವೆ ಅಥವಾ ಬಟ್ಟೆಯಿಂದ ಮಾಡಿದ ಬರವಣಿಗೆಯ ಸಾಮಾಗ್ರಿಯನ್ನು 'ಕಡತ' ಎನ್ನುವ ಹೆಸರಿನಿಂದ ಕರೆಯಲಾಯಿತು. ಈ ಕಡತವು ತಾತ್ಕಾಲಿಕ ಬರವಣಿಗೆಯ ಸಾಧನವಾಗಿತ್ತು. ದಾಖಲಾತ್ಮಕ ಬರವಣಿಗೆಗೆ ಕಡತ ಆಶ್ರಯವೂ ಆದಂತೆ ಬರಹ ತಂತ್ರಜ್ಞಾನದಲ್ಲಿ ದೇಸಿಯ ಜ್ಞಾನ ಪರಂಪರೆ ನವೀನ ರೂಪ ಪಡೆಯಲು ಕಾರಣವಾಯಿತು.

ಕನ್ನಡ ಕವಿಗಳು 'ಕಡತ' ಎಂಬ ಪದವನ್ನು ಆಗಾಗ ಬಳಸಿದ್ದಾರೆ. ಮಕ್ಕಳು ಸಾಲೆಗೆ ಹೋಗುವಾಗ ಕಡತವನ್ನು ಒಯ್ಯುತ್ತಿದ್ದರೆಂದು ಪಾಯಣವರ್ಣಿ ಹೇಳುತ್ತಾನೆ.[೮] "ಬರಹವನರಿಯೆನಾ ಪದವಿಟ್ಟು ಕಡತದೊಳು ಮಾಡಿದ ಕೃತಿಯಲ್ಲ" ಎಂಬ ಕನಕದಾಸರ ಮಾತು ಕಡತವು ಕಾವ್ಯದ ಕಚ್ಚಾ ಬರವಣಿಗೆಗೆ ಬಳಸುತ್ತಿರಬೇಕು ಎಂಬುದನ್ನು ಸೂಚಿಸುತ್ತದೆ. ಕಡತದ ಅರ್ಥ ಮತ್ತು ಉಗಮದ ಕುರಿತಂತೆ ಹಲವು ವಿದ್ವಾಂಸರು ಚರ್ಚಿಸಿದ್ದಾರೆ.

"ಕಡತ ಅಥವಾ ಕಡಿತ ಎಂಬುದು ಕರ್ನಾಟಕದಲ್ಲಿ ಬಳಕೆಯಾಗುತ್ತಿದ್ದ ಒಂದು ಲೇಖ್ಯಸಾಮಾಗ್ರಿ ದಿನನಿತ್ಯದ ವ್ಯವಹಾರಗಳನ್ನು ತಾತ್ಪೂರ್ತಿಕವಾಗಿ ದಾಖಲುಗೊಳಿಸಲು ಕಂಡುಕೊಂಡ ಒಂದು ವಿಶೇಷ ಸಾಮಾಗ್ರಿಯಿದು. ಲೇಖ್ಯ ವಸ್ತುವಿಗೆ ಪಟ, ಪಟಿಕಾ, ಕಾರ್ಪಟಿಕಾ, ಪಟ ಎಂಬ ಹೆಸರುಗಳನ್ನು ಸಂಸ್ಕೃತದಲ್ಲಿಯೂ ಇದ್ದು ಸ್ಮತಿ ಗ್ರಂಥಗಳಲ್ಲಿಯೂ, ಶಾತವಾಹನರ ಕಾಲದ ಶಾಸನಗಳಲ್ಲಿಯೂ ಇವುಗಳ ಉಲ್ಲೇಖವಿದೆಯೆಂದು ಡಾ.ಜಿ.ವೀಲರ್ ಅವರ ಹೇಳಿಕೆಯನ್ನು ಡಿ.ಎಲ್. ನರಸಿಂಹಚಾರ್ ಅವರು ದಾಖಲಿಸಿದ್ದಾರೆ. ಹಾಗೆಯೇ ಡಾ. ಎಂ.ಎಂ. ಕಲ್ಬುರ್ಗಿಯವರು "ಅರಿವೆಯಿಂದ ಮಾಡಿದ ಕಡತ ತಾತ್ಪೂರ್ತಿಕ ಬರವಣಿಗೆಗಾಗಿ ಬಳಕೆಯಾಗುತ್ತಿತ್ತೇ ಹೊರತು ಬಹುಕಾಲ ಉಳಿಯುವ ಗ್ರಂಥ ಲೇಖನಕ್ಕೆ ಅಲ್ಲ. ದಪ್ಪನೆಯ ಅರಿವೆಗೆ ಕರಿಯ ಬಣ್ಣದ ಸರಿ

ಸವರಿ ಸಿದ್ಧ ಮಾಡುತ್ತಿದ್ದ ಇದನ್ನು ಸುತ್ತಿ ಇಲ್ಲವೆ ಮಡಿಸಿ ಇಡುತ್ತಿದ್ದರು. ಬರೆದದ್ದನ್ನು ಅಳಿಸಿ ಮತ್ತೆ ಬರೆಯಲು ಇದು ಅನುಕೂಲವಾಗುತ್ತಿತ್ತು. ಇದರ ಉಲ್ಲೇಖ ಕರ್ನಾಟಕದಲ್ಲಿ ಮಧ್ಯಯುಗದಷ್ಟು ಪ್ರಾಚೀನ ಎಂದು ನಿರ್ಣಯಿಸುತ್ತಾರೆ. ಬಳಪದಿಂದ ಬರೆಯುವುದಕ್ಕಾಗಿ ತಯಾರಿಸಿದ ಕಪ್ಪು ಲೇಪನವುಳ್ಳ ಬಟ್ಟೆಯ ಪಟ್ಟಿ ಲೆಕ್ಕದ ಪುಸ್ತಕ" ಎಂದು ಕನ್ನಡ ನಿಘಂಟು ಉಲ್ಲೇಖಿಸುತ್ತದೆ.

ಕಡತಗಳ ಉಗಮ ಕುರಿತಂತೆ ಕಾವ್ಯ ಮತ್ತು ಶಾಸನಗಳಲ್ಲಿ ಉಲ್ಲೇಖಗಳಿವೆ.

ಕ್ರಿ.ಶ. ೯೪೦-೯೬೮ ರಲ್ಲಿ ರಾಷ್ಟ್ರಕೂಟರ ೩ನೆಯ ಕೃಷ್ಣನಾದ ಶುಭತುಂಗದೇವನನ್ನು ಹೊಗಳುವ ಸೂಕ್ತಿ ಸುಧಾರ್ಣವದ ಅಜ್ಞಾತ ವೃತ್ತವೊಂದರ ಪ್ರಕಾರ "ಚೇರಮ ಚೋಳನ ಪಾಂಡ್ಯನ ನಾಡೆ ಕೈಗೆವಂದುದು ಕಡತಕ್ಕೆ ಮುಂಡಿಗೆಗಮೋಲೆಗಮೀ ಶುಭತುಂಗದೇವನಾ" ಎಂದು ತಿಳಿದು ಬರುತ್ತದೆ. "ಕ್ರಿ.ಶ. ೧೬೫೯ ರಲ್ಲಿದ್ದ ಪಾಯಣವರ್ಣಿ ಕವಿಯ" ಜ್ಞಾನಚಂದ್ರ ಚರಿತೆಯಲ್ಲಿ

ಕಡಿತ ಹಲಗೆ ಬಳಪ ಮೋತಿ ಕಂಠವ
ಪಿಡಿದು ಹಸ್ತದಿ ವಿನೋದದಲಿ
ಸಡಗರದಿಂದ ಮಠಕ್ಕೆ ಪೋಪಕುವರರ
ವೃಂದವ ಕಂಡಳಾ ಚದುರೆ.[೮೭]

ಈ ಪದ್ಯವು ಲೇಖನ ಸಾಮಾಗ್ರಿಗಳಾದ ಹಲಗೆ, ಬಳಪ, ವೋತಿ, ಕಂಠಗಳ ಜೊತೆಗೆ ಕಡತವನ್ನು ಹಿಡಿದುಕೊಂಡು ವಿದ್ಯಾಭ್ಯಾಸಕ್ಕಾಗಿ ಮಠಕ್ಕೆ ಹೋಗುವ ಬಾಲಕರ ಚಿತ್ರಣವನ್ನು ನೀಡುತ್ತದೆ. ಅಂದರೆ ಕಡತವು ಕ್ರಿ.ಶ. ೯೪೦-೯೬೮ ರ ಕಾಲಕ್ಕಾಗಲೇ ಬರವಣಿಗೆಯ ಸಾಮಾಗ್ರಿಯಾಗಿ ಬಳಕೆಯಲ್ಲಿತ್ತು ಎಂಬುದನ್ನು ಅರಿಯಬೇಕಾಗಿದೆ. ೧೦ನೇ ಶತಮಾನಕ್ಕೆ ಇದು ವಿರಳವಾಗಿ ಕಾಣಿಸಿಕೊಂಡು ಮಧ್ಯಕಾಲದಲ್ಲಿ ಹೇರಳವಾಗಿ ಬರವಣಿಗೆಯ ಸಾಧನವಾಗಿ ಪ್ರಚಲಿತಗೊಂಡಿರುವುದನ್ನು ಕಾಣಬಹುದಾಗಿದೆ.

"ಕಡತಗಳ ರಚನೆಯಲ್ಲಿ ಕೈಫಿಯತ್ತುಗಳಂತೆ ಒಂದು ವಿನ್ಯಾಸ ಕಂಡುಬರುವುದಿಲ್ಲ. ಅಂಗ ರಚನೆಯ ದೃಷ್ಟಿಯಿಂದ ಬಹುತೇಕ ಕಡತಗಳು ಒಂದೇ ಅಳತೆ ಪ್ರಮಾಣದಲ್ಲಿ ಕಂಡುಬಂದರೂ ಅವುಗಳ ಅಳತೆಗಳಲ್ಲಿ ಭಿನ್ನತೆಯಿದೆ. ಉದಾಹರಣೆಗೆ ಶೃಂಗೇರಿ ಮಠದ ಕಡತಗಳಲ್ಲಿ ಹೆಚ್ಚು "೭ ೧/೪ ಉದ್ದ ೮ ೧/೪ " ಅಗಲ ವ್ಯಾಪ್ತಿಗೆ ಸೇರಿದವುಗಳಾಗಿದ್ದರೆ ಇನ್ನೂ ಕೆಲವು "೫*೭ ಹಾಗೂ ೬ ೧/೪*೮ ೧/೪ ಪ್ರಮಾಣದವುಗಳು : ಸ್ವಲ್ಪ ದೊಡ್ಡವೆಂದರೆ ೯*೧೦ ೩/೪ ಮತ್ತು ೯*೧೧ ಅಳತೆಯ ಕಡತಗಳು ಅಲ್ಪಸಂಖ್ಯೆಯಲ್ಲಿವೆ.[೮೮] ಕರ್ನಾಟಕದ ಆರ್ಥಿಕ, ಧಾರ್ಮಿಕ, ರಾಜಕೀಯ ಇತಿಹಾಸಗಳ ಮೇಲೆ ಹೆಚ್ಚಿನ ಬೆಳಕುಚಲ್ಲುವ ಉದ್ದೇಶದಿಂದ ಉಗಮಗೊಂಡಿರುವ ಕಡತಗಳು ೧. ನಿರೂಪ (ಆಜ್ಞಾತಾ ಪತ್ರ) ೨. ಭಿನ್ನವತ್ತಳೆ (ಮಾನಪತ್ರ, ವಿಜ್ಞಾಪನ ಪತ್ರ)

೩. ಲೆಕ್ಕ ಪತ್ರ (ಜಮಾ-ಖರ್ಚು) ೪. ಸಾಹಿತ್ಯ ಈ ಪ್ರಕಾರಗಳಲ್ಲಿ ಇದ್ದು ಹೆಚ್ಚಿನ ಮಾಹಿತಿಯನ್ನೊದಗಿಸುತ್ತವೆ. ಕಡತಗಳು ಮೂಲ ದಾಖಲೆಗಳಲ್ಲ ಅಪ್ಪಣೆ, ಆಜ್ಞೆಗಳನ್ನು ಹೊರಡಿಸುವ ನಿರೂಪ, ಭಿನ್ನವತ್ತಳೆ ಮುಂತಾದವುಗಳನ್ನೊತ್ತ ಕಡತಗಳು ಭೂದಾನ, ಕ್ರಯದಾನ ಪಟ್ಟಿಯನ್ನು ಹಾಗೂ ಶಿಲಾ ಶಾಸನಗಳಲ್ಲಿ ಉತ್ತಮವಾಗಿರುವ ವಿಚಾರಗಳನ್ನು ನಿರೂಪಿಸುವ ಪ್ರತಿಗಳೆಂಬುದನ್ನು ಮರೆಯುವಂತಿಲ್ಲ. ಕಡತಗಳು ಈ ಮಾದರಿಯಲ್ಲಿರುತ್ತವೆ. ಶೃಂಗೇರಿ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ! ವಿಜಯ ಸಂವತ್ಸರದ ಜೇಷ್ಠ ಶು ೧೨ರಲ್ಲು ಕೆಳದಿ ಶಿವಪ್ಪ ನಾಯಕರು ಮಾಡುವ ಬಿಂನಹಾ ! ನಿಲುತ್ತಾತ್ತಂ ಭಟ್ಟನಾ ಕೂಡ ಕಳುಹಿಸಿದ ಆಶೀರ್ವಾದ ಪತ್ರಿಕೆಯಿಂದೆಲ್ಲಾ! ವಿವರವನು ಮನಶಿಣಿತ್ತಂದೆಲು ನಿಂಮಠದ ಧರ್ಮಕ್ಕೆ ಹಿಂದೆ ಹರಿಹರ್ರು ಮಹಾರಾಯರ್ರು ಮಲ್ಲಿಕಾರ್ಜುನ ವಿದ್ಯಾಶಂಕರ ಸರಸ್ವತಿ ಮುಂತಾದ ದೇವತ್ತಾ ಪೂಜೆಗಳಿಗೂ! ಮಠದಲ್ಲಿ ಯಿರ್ರು ಬ್ರಾಂಭರ ಜೀವನ! ಅಂನಧರ್ಮ ಅಗ್ರಹಾರಗಳಲ್ಲಿಯಿರುವ ಬ್ರಾಂಭರುಗಳಿಗೆ ಉ್ರತ್ತಿ ನಡದು ಬರುವ ಹಾಗೆ ಸಹಾ! ಬಟ್ಟೆ ಶಿಮೆಯಂನ್ನು! ಮಠದಿಂದಾ! ಹೆರಳ ದ್ರವ್ಯಾ ಮುಟ್ಟಿಸಿ ಭೂಮಿಗಳಲ್ಲಿ ಪೂಗಾರಾಮಾದಿಗಳ ಹಾಕಿಸಿ ಉತ್ಪಾತ್ಸಾಧಿಕವಾಗುವಪ್ಪಂದಾ ಆಗು ಮಾಡಿದಿಲ್ಲಿ ಪೂಜಾಧರ್ಮದವರ್ರು ಆ ಭೂಮಿಗಳ ಅನುಭಾವ ಮಾಡಿಕೊಂಡು ಮಠದೇವಸ್ವ ಆಗ್ರಹಾರಗಳ ಬ್ರಾಂಹ್ಮರ್ರುಗಳಿಗೆ ಆ ಭೂಮಿಗಳ ಅನುಭಾವ ಮಾಡಿಕೊಂಡು ಮಠದೇವಸ್ವ ಅಗ್ರಹಾರಗಳ ಬ್ರಾಹ್ಮರ್ರುಗಳಿಗೆ ಕೊಡುವ ಹಣಕ್ಕೆ ದಿಂಡೆತ್ತನಾ ಮಾಡುತ್ತಾರೆಂದು ನಿಲು ಬಿದರ್ರೂರ್ರಿಗೆ ತ್ತೆರಳಿದಾಗ್ಯೆ[೮] ಶೃಂಗೇರಿಯಲ್ಲಿ ಇಂದಿಗೂ ಕಡತಗಳು ಲಭ್ಯವಿರುವುದನ್ನು ಕಾಣುತ್ತೇವೆ.

ಕಡತಗಳ ರಚನಾ ಸ್ವರೂಪದಲ್ಲಿ ಆದಿ ಇಲ್ಲವೇ ಅಂತ್ಯದಲ್ಲಿ ಬರೆದವರ ಇಲ್ಲವೇ ಬರೆಸಿದವರ ಹೆಸರು ಉಲ್ಲೇಖವಾಗಿರುವುದಿಲ್ಲ. ಅದೇ ರೀತಿ ಪ್ರತಿಯೊಂದು ಕಡತದ ಕಾಲವನ್ನು ನಿರ್ಧಿಷ್ಟವಾಗಿ ನಿರ್ಧರಿಸಲು ಬರುವಂತಿಲ್ಲ. ಕೆಲವು ಕಡತಗಳಲ್ಲಿ ಶಕವರ್ಷಗಳನ್ನು ನಮೂದಿಸಿದ್ದರೆ, ಇನ್ನೂ ಕೆಲವು ಕಡತಗಳಲ್ಲಿ ಕೇವಲ ಸಂವತ್ಸರ ತಿಥಿಗಳನ್ನು ದಾಖಲಿಸಿರುತ್ತಾರೆ. ಕೆಲವು ಕಡತಗಳಲ್ಲಿ ಪ್ರಮುಖ ವ್ಯಕ್ತಿಗಳ ಹೆಸರು ತಿಳಿದು ಬರುತ್ತದೆ. ಜೊತೆಗೆ ಮುಖ್ಯ ಘಟನೆಗಳ ಉಲ್ಲೇಖವಿರುತ್ತದೆ. ಕೆಲವು ಕಡತಗಳಲ್ಲಿ ಸ್ವಹಸ್ತಾಕ್ಷರ, ಮೊಹರ, ಶಿಖೆ ಹಾಕಿ ದೃಢೀಕೃತಗೊಂಡಿರುತ್ತದೆ. ಈ ಕಾರಣಕ್ಕಾಗಿ ಕಡತಗಳನ್ನು ಪ್ರಮಾಣಬದ್ಧ ದಾಖಲೆಗಳಲ್ಲವೆಂದೂ ನಿರಾಕರಿಸುವಂತಿಲ್ಲ. ಹೀಗಿದ್ದು ಕೆಲವು ಕಡತಗಳಲ್ಲಿ ಬರೆದವರ ಉಲ್ಲೇಖ, ಕಾಲ ದಾಖಲೆಯಾಗಿರುವುದನ್ನು ನೋಡಬಹುದಾಗಿದೆ.

ಕಡತಗಳು ಆಜ್ಞಾಪತ್ರ, ವಿಜ್ಞಾಪನಾ ಪತ್ರ, ಈ ಪ್ರಕಾರದಲ್ಲಿ ಸಾಮಾಜಿಕ ವ್ಯವಹಾರಕ್ಕಾಗಿ ಉಪಯೋಗವಾದಂತೆ ಸಾಹಿತ್ಯಕವಾಗಿಯೂ ಕೊಡುಗೆಯಾಗಿರುವುದನ್ನು ಆಧಾರಗಳಿಂದ ತಿಳಿಯಬಹುದು. ಕಡತ ತಾತ್ಕೂರ್ತಿಕ ಬರವಣಿಗೆಯ ಸಾಧನವೇ ಹೊರತು ಗ್ರಂಥ ಲೇಖನ ಮಾಡುವ ಹೊತ್ತಿಗೆಯಲ್ಲವಾಗದರೂ ಕಾವ್ಯ ರಚಿಸುವ ಪೂರ್ವದಲ್ಲಿ ಕಚ್ಚಾ ಬರವಣಿಗೆಗೆ ಕಡತಗಳನ್ನು ಉಪಯೋಗಿಸುತ್ತಿದ್ದರೆಂಬ ಅಂಶ "ಬರಹವನರಿಯನಾ ಪದವಿಟ್ಟು ಕಡತದೊಳು

ಮಾಡಿದ ಕೃತಿಯಲ್ಲ" ಎಂಬ ಹೇಳಿಕೆಯಿಂದ ತಿಳಿಯುತ್ತದೆ. ಅಂದರೆ ಅಂತಿಮ ರೂಪ ಪಡೆಯುವ ಪೂರ್ವದಲ್ಲಿನ ಯಾವುದೇ ಬರಹವನ್ನು ಮೊದಲು ಕಡತದಲ್ಲಿ ಲಿಖಿಸಿಕೊಳ್ಳುತ್ತಿದ್ದರು. "ಕವಿಗಳು ಕಾವ್ಯಗಳನ್ನು ವಾಚಿಸುತ್ತಿದ್ದಂತೆ ಲಿಪಿಕಾರರು ಕಡತಗಳ ಮೇಲೆ ಬರೆದುಕೊಂಡ ನಂತರ ತಪ್ಪುಗಳಿದ್ದಲ್ಲಿ ಸರಿಪಡಿಸಿ ಓಲೆಗರಿಗಳ ಮೇಲೆ ಲಿಖಿಸುತ್ತಿದ್ದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೂ ಸಾಹಿತ್ಯ ಕೃತಿಗಳನ್ನು ಬರೆದ ಕಡತಗಳು ಲಭ್ಯವಾಗಿರುವುದುಂಟು. ಡಿ.ಎಲ್. ನರಸಿಂಹಾಚಾರ್ ಅವರು "ಕಡತದಲ್ಲಿ ಬರೆದಿರುವ ಕನ್ನಡ ಗ್ರಂಥವಾವುವೂ ನನ್ನ ದೃಷ್ಟಿಗೆ ಬಂದಿಲ್ಲ. ಅಣಹಿಲ್ವಾಡ ಪಟ್ಟಣದಲ್ಲಿ ಕ್ರಿ.ಶ. ೧೩೬೧-೭೨ರಲ್ಲಿ ಬರೆದ ಒಂದು ಕಡಿತ ಪುಸ್ತಕ ಲಭ್ಯವಾಗಿದೆಯೆಂದೂ ತಿಳಿದು ಬರುತ್ತದೆ ಎನ್ನುತ್ತಾರೆ.[೧೦] ಕೆಳದಿನೃಪ ವಿಜಯ ಕಾವ್ಯವನ್ನು, ಪ್ರಾರ್ಥನಾ ಪದಗಳನ್ನು ಹಾಗೂ ಬಿಡಿ ವಚನಗಳನ್ನು, ಹಸ್ತಪ್ರತಿಗಳ ಯಾದಿಯನ್ನು ಕೆಲವು ಕಡತಗಳಲ್ಲಿ ಬರೆದಿಡಲಾಗಿದೆ.

೧೮ನೆಯ ಶತಮಾನದಲ್ಲಿ ಮೈಸೂರು ಆ ಸ್ಥಾನದಲ್ಲಿದ್ದ ಪುಟ್ಟಯ್ಯ ಪಂಡಿತ ಎನ್ನುವ ಬ್ರಾಹ್ಮಣ ಹತ್ತಿಬಟ್ಟೆಯ ಸುರುಳಿಗಳ ಮೇಲೆ ಕನ್ನಡ ಭಾಷೆಯಲ್ಲಿ ವಿಜಯನಗರದ ಕೃತಿಯನ್ನು ಆಧಾರವಾಗಿಟ್ಟುಕೊಂಡು ವಿಜಯನಗರದ ಚರಿತ್ರೆಯನ್ನು ರಚಿಸಿದನು ಎಂಬ ಉಲ್ಲೇಖವಿದೆ. ಕ್ರಿ.ಶ. ೧೭೦೪-೧೪ರ ಕಾಲವಧಿಯಲ್ಲಿ ಪಟ್ಟವೇರಿದ ಇಮ್ಮಡಿ ಕಂಠೀರವ ನರಸರಾಜ ಓಡೆಯರ್ ಅವರ ಅಸ್ಥಾನದ ಚಟುವಟಿಕೆಗಳನ್ನು ತಿಳಿಸುವ ಹಾಗೂ ಓಡೆಯರ ಮನೆತನದ ಚರಿತ್ರೆಯನ್ನು ನೇರವಾಗಿಯೇ ನಿರೂಪಿಸುವ ಮೈಸೂರು ದೊರೆಗಳ ಪೂರ್ವಭ್ಯುದಯ ವಿವರ" ಎಂಬುದನ್ನು ಅಜ್ಞಾತ ಕರ್ತೃ ಕೃತಿಯು ಕಡತದಲ್ಲಿ ಬರೆಯಲ್ಪಟ್ಟಿದೆ. ಆಡು ಮಾತಿನ ಗದ್ಯ ಶೈಲಿಯಿರುವ ಈ ಕೃತಿಯನ್ನು ಐತಿಹಾಸಿಕ ದಾಖಲೆ ಎಂದು ಹೇಳಬಹುದಾಗಿದೆ.[೧೧] ಕಡತಗಳಲ್ಲಿ ಬರೆಯಲ್ಪಟ್ಟ ಸಾಹಿತ್ಯ ಕೃತಿಗಳು ಅಂತಿಮ ರೂಪದಲ್ಲಿ ಬರೆದು ಸಂರಕ್ಷಿಸಿದ ಕಾವ್ಯ ಸಾಹಿತ್ಯವೋ ಅಥವಾ ಅಂತಿಮ ರೂಪ ಪಡೆಯುವ ಮೊದಲು ಕರಡು ರೂಪದಲ್ಲಿರುವ ಕಚ್ಚಾ ಕೃತಿಗಳೋ ಎಂದು ಪರಮರ್ಶಿಸಿ ತಿಳಿಯಬೇಕಾಗಿದೆ. ಇವರೆಗೆ ಲಭ್ಯವಿರುವಂತಹ ಕಡತಗಳ ಪ್ರಕಾರಗಳಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಕಡತಗಳನ್ನು ಅಧ್ಯಯನ ಮಾಡುವುದರಿಂದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇನ್ನೂ ಹೆಚ್ಚಿನ ಮಾಹಿತಿ ಲಭ್ಯವಾಗಬಹುದಾಗಿದೆ.

**ಕಡತಗಳ ಭಾಷೆ-ಮಹತ್ವ**

ಕಡತಗಳಲ್ಲಿ ಬಳಸಿದ ಭಾಷೆ ಹೆಚ್ಚಾಗಿ ಕನ್ನಡದಲ್ಲಿದೆ. ಉಳಿದಂತೆ ಸಂಸ್ಕೃತ, ತೆಲುಗು, ತಮಿಳು, ಮರಾಠಿ ಮತ್ತು ಪರ್ಶಿಯನ್, ಉರ್ದು, ಭಾಷೆಗಳಲ್ಲಿರುವುದು ಕಂಡುಬರುತ್ತದೆ. ಜಗದ್ಗುರುಗಳು ಧರ್ಮಾಧಿಕಾರಿಗಳು ಬರೆದ ವಿಷಯ ನಿರೂಪಣೆ ಸಂಸ್ಕೃತದಲ್ಲಿದ್ದರೆ, ಉಳಿದವುಗಳು ಆಯಾ ಪ್ರದೇಶದ ಪ್ರಾಂತ ಭಾಷೆಗಳಲ್ಲಿ ಬರೆಯಲ್ಪಟ್ಟಿವೆ. ಕಡತಗಳ ಲಿಪಿ ಮೋಡಿ ಲಿಪಿ. (ಅಕ್ಷರಗಳನ್ನು ಬಳ್ಳಿಯಂತೆ ಅಥವಾ ಕೊಂಡಿಯಂತೆ ಒಂದಕ್ಕೊಂದು ಸೇರಿಸಿಕೊಂಡು ಬರೆಯುವ ಒಂದು ರೀತಿಯ ಬರವಣಿಗೆ) ರೂಪದಲ್ಲಿರುತ್ತವೆ. ನಾಗರಿ ಲಿಪಿಬಳಕೆ ಕಡತಗಳಲ್ಲಿ ಕಡಿಮೆ.

"ಕಡತಗಳಲ್ಲಿ "ಅಂಡೇ (ಬಿದಿರುಕೊಳವೆ), ಅರ್ಧಮಾನ್ಯ ಭೂಮಿ (ಕಂದಾಯದಲ್ಲಿ ಅರ್ಧರಿಯಾಯಿತಿ ಪಡೆದ ಭೂಮಿ) ಸರ್ವಮಾನ್ಯ (ಎಲ್ಲಾ ಬರೆಯ ಕಂದಾಯಗಳಿಂದ ಹೊರತಾದ) ಉಂಬಳಿ (ಮಾನ್ಯವಾಗಿ ಕೊಡುವ ಭೂಮಿ) ಉಗ್ರಾಣ, ಉತ್ತಾರ (ಕಂದಾಯ ರಹಿತ) ಉಪಾಧಿ (ಪೂಜಾರಿಯು ದೇವಸ್ಥಾನದಲ್ಲಿ ಸಲ್ಲಿಸುವ ಸೇವೆ) ಎತ್ತುವಳಿ (ವಸೂಲು ಮಾಡುವುದು) ಐವಜು (ಉತ್ಪನ್ನ) ಕಂದಾಚಾರ (ಸೇವೆ) ಕಡತ, ಕುಮ್ಮಕ್ಕು (ಸಹಾಯ), ಕೊಳಗ, ಖಂಡುಗ, ಗುತ್ತಿಗೆ, ಗೌಡ, ಚಾವಡಿ, ಜೀತ ತುಂಡು ಸಂಬಳ (ದಿನಗೂಲಿ), ದಿಂಡೆತನ (ನೀಚತನ), ದುಡ್ಡು, ಧರ್ಮ ಸಾಧನ, ನವರಂಗ (ದೇವಾಲಯದ ಸಭಾಮಂಟಪ), ನಿರೂಪ (ಅಪ್ಪಣೆ) ನಿವೇಶನ (ವಾಸಸ್ಥಳ) ಪಟ್ಟ (ಭೂಮಿಯ ಬಗ್ಗೆ ಕೊಡುವ ಸನದು ಪತ್ರ), ಪಾರುಪತ್ಯಾಗರ, ಪ್ರಾಕು (ಪೂರ್ವದ), ಬದುಕು, ಭಿನ್ನವತ್ತಳೆ (ಮಾನ ಪತ್ರ, ವಿಜ್ಞಾಪನ ಪತ್ರಿಕೆ), ಬುರುಡೆ (ಉರುಟಪಾತ್ರೆ), ವರಹ, ಹೊನ್ನು ಹಣ, ಮುಪಾಗ, ರಾಯಸ (ರಾಜ, ಗುರು ಮುಂತಾದ ಹಿರಿಯರಿಂದ ತರುವ ಪತ್ರ ಅಥವಾ ನಿರೂಪ) ಹರಿಕಾರ (ಸಮಾಚಾರ ಒಯ್ಯುವವ) ಹಾಡ್ಯ (ಹಿತ್ತಲು ಒಂದು ಬಗೆಯ ಕುರುಚಲು ಕಾಡು) ಇನ್ನೂ ಮುಂತಾದ ಪದಗಳು ಕನ್ನಡ ಭಾಷಾಧ್ಯಾಯನಕ್ಕೆ ಸೂಕ್ತವಾಗಿದ್ದು ಸಾಮಾಜಿಕವಾಗಿ ಅಂದು ಪ್ರಚಲಿತದಲ್ಲಿರುವ ಪದ ಪ್ರಯೋಗಗಳು ಅವರ ಸಾಂಸ್ಕೃತಿಕ ಜೀವನ ಪದ್ಧತಿಯನ್ನು ತೆರೆದು ತೋರಿಸುತ್ತದೆ."[೨]

ದೇಶಿ ಪದಗಳ ಜೊತೆಗೆ ಅನ್ಯದೇಶಿಯ ಪದಗಳು ಕಂಡುಬರುತ್ತದೆ. ನವಾಬ, ಸಲ್ಲಾಂ, ಮೊಹರ, ಖಾನ್, ಸುಬೇದಾರ್, ಮೆಜಿಸ್ಟ್ರೇಟ್, ದಪೇದಾರ್ ಹುಕ್ಕುಂ ಮುಂತಾದವುಗಳು.

ಕಡತಗಳಲ್ಲಿ ಕೆಲವೊಂದು ಹೊಸಪದಗಳು ಸೇರಿಕೊಂಡಂತೆ, ಕೆಲವೊಂದು ಪದಗಳ ಉಚ್ಚಾರಣೆಯಲ್ಲಿಯೂ ಬದಲಾವಣೆಯಾಗಿರುವುದು ಕಂಡುಬರುತ್ತದೆ. "ಮಹಾಪ್ರಾಣ ಅಲ್ಪಪ್ರಾಣವಾಗಿ, ಅಲ್ಪಪ್ರಾಣ ಮಹಾಪ್ರಾಣವಾಗಿ ಬಳಕೆಗೊಂಡಿದೆ. ಉದಾ: ದೊಡ (ದೊಡ್ಡ) ಸುಬಾಭಟ್ಟರ (ಸುಬ್ಬಾಭಟ್ಟರ) ನೂತ್ತನ (ನೂತನ) ವಿಭೂತ್ತಿ (ವಿಭೂತಿ), ಧೋರೆ (ದೊರೆ) ಅತ್ತಿ ಕ್ರಮಿಸಿ (ಅಲೆ ಕ್ರಮಿಸಿ) ಮಾಡ್ಡಿಸಿ (ಮಾಡಿಸಿ). ದೀರ್ಘಸ್ವರ ಅಲ್ಪಸ್ವರವಾಗಿ ಬಳಕೆಗೊಂಡಿವೆ. ಉದಾ: ಮೆಲೆ (ಮೇಲೆ) ಸೆನಬವಿಕೆ (ಸೇನಭವಿಕೆ) ಜಿವನ (ಜೀವನ) ಶರಿರ (ಶರೀರ) ವೆದಾಶ್ರಮ (ವೇದಾಶ್ರಮ) ಶ್ರೀವಿರ (ಶ್ರೀವೀರ)"[೩]

ಬ್ರಾಂಭರು (ಬ್ರಾಹ್ಮಣರು) ಎಂಬ ಶ್ರೀಸಾಮಾನ್ಯರ ಉಚ್ಚಾರದ ಭಾಷೆಯಲ್ಲದೆ ; ಬಿರುದಾವಳಿ (ಬಿರುದಾವಳಿ) ಬರ್‍ಸಿದ (ಬರಸಿದ) ತ್ತಾಂಬೂಲ (ತಾಂಬೂಲ) ತ್ತುಂಗಾ (ತುಂಗಾ) ನಡವಂಥಾ (ನಡವಂತಾ) ಎಂಬ ಬ್ರಾಹ್ಮಣೀ ಉಚ್ಛಾರದ ಭಾಷಾ ಬಳಕೆಯನ್ನು ಇಲ್ಲಿ ಗಮನಿಸಬಹುದು. ಹೀಗೆ ಕಡತಗಳ ಭಾಷೆ ಅಚ್ಚಗನ್ನಡ ಅನ್ಯಭಾಷಾಮಿಶ್ರಗನ್ನಡ, ಶ್ರೀಸಾಮಾನ್ಯರ ಉಚ್ಚಾರ ಸೌಲಭ್ಯದ ಆಡುಭಾಷೆ, ಪಂಡಿತಮಾನ್ಯರ ಶಿಷ್ಟಭಾಷಾ ಮಿಶ್ರಿತದಿಂದ ಕೂಡಿದ್ದಾಗಿದೆ.

ಐತಿಹಾಸಿಕ ಆಕರ ಸಾಮಾಗ್ರಿಗಳಾದ ಕಡತಗಳು ವಿದ್ವಾಂಸರ ಕೃತಿಗಳಾಗಿರದೆ, ಕರಣಿಕರು, ಸ್ಥಳೀಯ ಶಾನುಭೋಗರು ಮಠಾಧೀಶರು, ಬರೆದಿಟ್ಟ, ದಾಖಲೆಗಳಾಗಿವೆ. ಸಾಹಿತ್ಯದ ದೃಷ್ಟಿಯಿಂದ ಕಡತಗಳ ಮೌಲ್ಯ ಕಡಿಮೆಯೆನಿಸಿದರೂ ದಿನನಿತ್ಯದ ಘಟನೆಗಳನ್ನು ದಾಖಲಿಸಿಡುವ ದಿನಚರಿಗಳಾದ ಕಡತಗಳಿಗೆ ಮಹತ್ವದ ಸ್ಥಾನ ಸಲ್ಲುತ್ತದೆ. ಹೀಗಾಗಿ ಕಡತಗಳು ರಾಜಕೀಯ 'ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಸಹಾಕಾರಿಯಾಗುತ್ತವೆ.

ಕಡತಗಳು ಬರಹಕ್ಕೆ ಬಳಕೆಯಾದ ಹೊಸ ಬದಲಾವಣೆಯ ಸಾಮಾಗ್ರಿಗಳು ಎನ್ನಬಹುದು. ತಾಳೆಗರಿಯಿಂದ ಕಡತದ ಉಗಮಕ್ಕೆ ಕಾರಣವಾದದು ಅಂದಿನ ಶ್ರಮ ಸಮುದಾಯಗಳು ತಮ್ಮ ಅಗತ್ಯತೆಗೆ ಬೇಕಾಗುವಂತಹ ಸಾಮಾಗ್ರಿಗಳನ್ನು ತಮ್ಮ ಸುತ್ತಮುತ್ತಲಿನಲ್ಲಿ ದೊರೆಯುವ ಕಚ್ಚಾ ವಸ್ತುಗಳಿಂದಲೇ ಬಳಸಲು ಬೇಕಾಗುವ ಸಿದ್ಧ ವಸ್ತುಗಳ ತಯಾರು ಮಾಡಿದ್ದುದು ಅವರ ತಾಂತ್ರಿಕ ಬದಲಾವಣೆಯ ಹೊಸ ಪ್ರಯೋಗವಾಗಿದೆ. ಈ ಒಂದು ಕೌಶಲ್ಯ ಪೂರಿತವಾದ ಹೊಸದಾದ ಸಾಮಾಗ್ರಿಗಳ ಉತ್ಪಾದನೆ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಬಹಳ ಅಮೂಲ್ಯವಾದ ಕೊಡುಗೆ. ಅಂದಿನ ಕಾಲಘಟ್ಟದ ಭಾಕ್ಷಿ ಸಾಮಾಜಿಕ ವ್ಯವಸ್ಥೆಯಲ್ಲಿ ಹೇಗೆ ಬಳಕೆಯಾಗುತ್ತಿತ್ತು. ಹಾಗೂ ಅಂದಿನ ಸಂದರ್ಭದ ಸಾಹಿತ್ಯದ ಸೃಷ್ಟಿಗೆ ಯಾವ ರೀತಿಯಾಗಿ ಪ್ರಭಾವ ಬೀರುತ್ತಿತ್ತು ಎಂಬಂತಹ ವಿಚಾರಗಳು, ಹೊಸ ಆಲೋಚನೆಯ ದಿಕ್ಕಿನೆಡೆಗೆ ಕೊಂಡೊಯ್ಯುತ್ತವೆ ಎಂದು ಹೇಳಬಹುದು.

**ಕಾಗದ :** ಬರಹದ ಸಾಮಾಗ್ರಿಯಾಗಿ ತಾಳೆಗರಿಯನ್ನು ಬಳಸುತ್ತಿದ್ದ ಸಂದರ್ಭದಲ್ಲಿಯೇ ಹಲವು ಶತಮಾನಗಳ ನಂತರ ಹೊಸದಾಗಿ ರೂಪುಗೊಂಡ ಬರಹದ ಸಾಮಾಗ್ರಿಯೇ ಕಾಗದ. ಬರಹದ ತಾಂತ್ರಿಕತೆಯ ಬದಲಾವಣೆಯ ಅಂಶವಾಗಿ ಕಾಗದ ರೂಪುಗೊಂಡಿತು. ಕರ್ನಾಟಕದಲ್ಲಿ ಕಾಗದದ ಬಳಕೆ ಯಾವಾಗ ಪ್ರಾರಂಭವಾಯಿತು ಎಂದು ನಿಖರವಾದ ಕಾಲವನ್ನು ಗುರುತಿಸಲು ಸಾಧ್ಯವಾಗುದಿಲ್ಲ. ಕರ್ನಾಟಕದಲ್ಲಿ ಅದರಲ್ಲೂ ದಕ್ಷಿಣ ಕರ್ನಾಟಕದಲ್ಲಿ ಇದರ ಬಳಕೆ ಕಡಿಮೆ. ತೀರ ಹಳೆಯದಾದ ಕಾಗದದ ಹಸ್ತಪ್ರತಿಗಳು ಗುಜರಾತಿನಲ್ಲಿ ಸಿಕ್ಕಿವೆ. ಕಾಲ ೧೨೨೦-೨೪ರ ಭಾಗವತದ ಒಂದು ಪ್ರತಿ ಕ್ರಿ.ಶ. ೧೩೧೦ರಲ್ಲಿ ಬರೆಯಲ್ಪಪಟ್ಟಿದೆ ಎಂದು ತಿಳಿಯುತ್ತದೆ. ಕ್ರಿ.ಶ. ೧೩೧೦ನೆಯ ಇಸವಿಯ ಮೈಸೂರು ಶಾಸನವೊಂದರಲ್ಲಿ 'ಕಾಗಜ' ಶಬ್ದದ ಪ್ರಸ್ತಾಪವಿದೆ. ಮುಂದೆ ೧೩೯೮ರಲ್ಲಿದ್ದ ಮಂಗರಾಜನ ಅಭಿನವ ನಿಘಂಟಿನಲ್ಲಿ "ಪತ್ತಳಿಕೆಯೆನಲು ಕಾಗದ ಮಕ್ಕೂ ದೌತಿ ಮಸಿ ಪಾತ್ರೆಯಕ್ಕು ಕಲಾಮಲೇ ಖನಿಯಕ್ಕು" ಎಂದಿದೆ."[೯೪] ಹದಿನಾಲ್ಕನೆಯ ಶತಮಾನದಿಂದ ಕಾಗದವು ಗೃಹ ಕೈಗಾರಿಕೆಯಾಗಿ ತಯಾರಾಗುತ್ತಿತ್ತು. ಎನ್ನಬಹುದು. ಇದನ್ನು ಮಾಡುವ ವಿಧಾನ ನಮ್ಮ ಹಿರಿಯರಿಗೆ ಕ್ರಿಸ್ತ ಪೂರ್ವದಲ್ಲಿಯೇ ತಿಳಿದಿದ್ದಿತು. ಆದರೆ ಆ ಕಾಲದಲ್ಲಿ ಇದು ಯಥೇಚ್ಚವಾಗಿ ದೊರೆಯುವಂತಾಗಿರಲಿಲ್ಲ. ತಾಳೆಯೇತಿಯಂತೆ ಬಹುಕಾಲ ತಡತ ಬರುವುದೂ ಇಲ್ಲ. ಆದುದರಿಂದ ಕಾಗದದ ಬಳಕೆ ಕರ್ನಾಟಕದಲ್ಲಿ ಕಡಿಮೆಯಾಗಿರಬಹುದು.

ಮಹಮ್ಮದಿಯರ ಆಳ್ವಿಕೆಯಿಂದ ಭಾರತವನ್ನು ಪ್ರವೇಶಿಸಿದ ಕಾಗದ ಆಡಳಿತದಲ್ಲಿ ವ್ಯವಹಾರದ ಲೆಕ್ಕ ಪತ್ರ ಬರೆಯುವುದಕ್ಕೆ ಬಳೆಯಾಗುತ್ತಿದ್ದ ಕಾಗದ, ಸಾಮಾನ್ಯರ ವ್ಯವಹಾರದ ಲೆಕ್ಕಪತ್ರ ಬರೆಯುವುದಕ್ಕೆ ಬಳಕೆಯಾಗುತ್ತಿದ್ದ ಕಾಗದ, ಸಾಮಾನ್ಯರ ವ್ಯವಹಾರದ ಲೆಕ್ಕಪತ್ರ ಬರೆಯುವುದಕ್ಕೆ ಬಳಕೆಯಾಗುವುದರ ಜೊತೆಗೆ ಸಾಹಿತ್ಯ ಕೃತಿಗಳ ರಚನೆಗೂ ಬಳಕೆಯಾಯಿತೆನ್ನಬಹುದು. ಶಕವರ್ಷ ೧೪೧೨ ಸಂದ ಸಿದ್ಧಾರ್ಥಿ ಸಂವತ್ಸರದ ಆಶ್ವಯುಜ ಬಹುಳ ೧೦ (ಕ್ರಿ.ಶ. ೧೫೦೦)ರಲ್ಲೂ" ಲಿಖಿಸಿರುವ ಏಕೋತ್ತರ ಶತಸ್ಥಲಿ ಟೀಕು" ಅತ್ಯಂತ ಹಳೆಯದಾದ ಕಾಗದದ ಪ್ರತಿಯಾಗಿದೆ.

ಕರ್ನಾಟಕದಲ್ಲಿರುವ ಕಾಗದ ಹಸ್ತಪ್ರತಿಗಳನ್ನು ಕೋರಿ ಕಾಗದದ ಪ್ರತಿ, ನೀಲಿ ಕಾಗದದ ಪ್ರತಿ ಎಂದು ವಿಂಗಡಿಸಬಹುದು. ಕೋರಿ ಕಾಗದಕ್ಕೆ ಕತ್ತೆ ಕಾಗದ ಎಂದು ಕರೆಯುವುದುಂಟು. ಇದು ಕೈಯಿಂದ ಮಾಡಿದ್ದು, ಬಹು ಒರಟು ದಪ್ಪ ಮಾಸಲು ಬಣ್ಣ ಇದಕ್ಕೆ ಬಹುಬೇಗನೆ ಹುಳು ಬೀಳುವುದುಂಟು. ವಿಲಾಯಿತಿಯಿಂದ ತಯಾರಿಸುತ್ತಿದ್ದ ನೀಲಿ ಕಾಗದವನ್ನೋ (ಬಳಸಿ) ಮಂದವಾದ ಬಿಳಿ ಕಾಗದವನ್ನೋ ಬಳಸಿ ಮಡಿದ ಹಸ್ತಪ್ರತಿಗಳು ಕರ್ನಾಟದಲ್ಲೆಲ್ಲಾ ಇವೆ. ಇವಕ್ಕೆ ಹುಳು ಬೀಳುವ ಸಂಭವ ಕಡಿಮೆ. ಆದರೆ ಬಿಳಿಯ ಕಾಗದವು ಬಹು ಮಂದವಾಗಿದ್ದು ಉಪಯೋಗಿಸುತ್ತಾ ಉಪಯೋಗಿಸುತ್ತಾ ಕಾಲಕ್ರಮದಲ್ಲಿ ಮುರಿದು ಪುಡಿ ಪುಡಿಯಾಗುತ್ತದೆ. ನೀಲಿ ಕಾಗದವೇ ಹೆಚ್ಚು ಉಪಯುಕ್ತವೂ ಹೆಚ್ಚು ಕಾಲ ತಾಳಿಕೆ ಬರುವುದೂ ಆಗಿರುತ್ತದೆ. ಒಳ್ಳೆಯ ಕಾಗದದ ಮೇಲೆ ಒಳ್ಳೆಯ ಮಸಿಯಿಂದ ಬರೆದ ಹಸ್ತಪ್ರತಿ ಸುಮಾರು ಆರು ನೂರು ವರ್ಷವಾದರೂ ಬಾಳಿಕೆ ಬರುತ್ತದೆ.

ಸಾಮಾನ್ಯವಾಗಿ ಕಾಗದದ ಹಸ್ತಪ್ರತಿಗಳು, ಪತ್ರಗಳು ಬಿಡಿ ಬಿಡಿಯಾಗಿರುತ್ತಿದ್ದವು. ಅವುಗಳನ್ನು ಸೇರಿಸಿ ಹೊಲಿದು ಈಗಿನಂತೆ ಪುಸ್ತಕ ಮಾಡುತ್ತಿರಲಿಲ್ಲ. ಹಾಳೆಗಳನ್ನು ಮೊಗಚುವುದು ಓಲೆಗರಿಗಳನ್ನು ಮೊಗಚುವಂತೆಯೆ ಇವುಗಳ ಸುರಕ್ಷತೆಗಾಗಿ, ಓಲೆಯಕಟ್ಟಿಗೆ ಜೋಡಿಸಿ ಕಟ್ಟಿ ಆ ಕಟ್ಟನ್ನು ಬಣ್ಣ ಬಣ್ಣದ ದಪ್ಪನೆಯ ಅರಿವೆಯಲ್ಲಿ ಸುತ್ತಿ ಇಡುತ್ತಿದ್ದರು.

ಕಾಗದವನ್ನು ಪತ್ರಲೇಖನಕ್ಕಾಗಿ ಮಾತ್ರ ಬಳಸುತ್ತಿದ್ದರೆಂದು ಊಹಿಸಬಹುದಾದರು ಸಾಹಿತ್ಯ ರಚನೆಗೂ ಬಳಕೆಯಾಗಿತ್ತು ಎಂಬುದಕ್ಕೆ ಲಭಿಸಿರುವ ಏಕೋತ್ತರ ಷಟಸ್ಥಲ ಟೀಕು ಹಸ್ತಪ್ರತಿಯೇ ಸಾಕ್ಷಿಯಾಗಿದೆ. ಕಾಲಗರ್ಭದಲ್ಲಿ ಅನ್ಯರ ದಾಳಿ, ನೀರು, ಬೆಂಕಿ, ತೈಲ, ನೆರೆಹಾವಳಿ, ಮುಂತಾದವುಗಳಿಂದ, ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಕಾಗದದ ಹಸ್ತಪ್ರತಿಗಳು ನಾಶವಾಗಿರಬಹುದು. ಶೋಧಿಸುತ್ತಾ ಸಾಗಿದ ಹಾಗೆ ಒಂದು ವೇಳೆ ಹಸ್ತಪ್ರತಿಗಳು ಲಭ್ಯವಾದರೆ ಕನ್ನಡ ಸಾಹಿತ್ಯದ ಮೇಲೆ ಮತ್ತಷ್ಟು ಬೆಳಕು ಚೆಲ್ಲುತ್ತದೆ. ಹಾಗೆಯೇ ಅಂದಿನ ಸಂದರ್ಭದಲ್ಲಿ ಈ ರೀತಿಯ ಸಾಹಿತ್ಯ ಬರವಣಿಗೆಗೆ ರೂಪಿಸಿಕೊಂಡ ಜನಸಾಮಾನ್ಯರ ತಾಂತ್ರಿಕ ಬದಲಾವಣೆಯು ಸಹ ಸಾಹಿತ್ಯದ ಬೆಳವಣಿಗೆಯ ಪೂರಕವಾಗಿ ಪಾತ್ರವಹಿಸುವುದು ಸಾಹಿತ್ಯ ಚರಿತ್ರೆಯ ಮುಖ್ಯ ಸಂಗತಿಯಾಗುತ್ತದೆ.

### ೩.೬. ಕಾಗದ ಮತ್ತು ಕನ್ನಡ ಗದ್ಯದ ಬೆಳವಣಿಗೆ

ಈ ಶತಮಾನದ ಬಹು ದೊಡ್ಡ ವೈಶಿಷ್ಟವೆಂದರೆ ಗದ್ಯದ ಪ್ರಾದುರ್ಭಾವ, ಕನ್ನಡ ಸಾಹಿತ್ಯದಲ್ಲಿ ಗದ್ಯದ ನಡೆಯು ಪದ್ಯದಷ್ಟೇ ಪ್ರಾಚೀನವೆಂದು ತೋರಿದರೂ, ಹಿಂದಿನ ಶತಮಾನಗಳಲ್ಲಿ ಗದ್ಯಸಾಹಿತ್ಯ ರಚನೆಯು ಗುಣ ಮತ್ತು ಗಾತ್ರ ಇವರೆಡೂ ದೃಷ್ಟಿಯಿಂದ ಹಿನ್ನಡೆಯೆಂದೆ ಹೇಳಬಹುದು. ಸಮಗ್ರ ಗದ್ಯ ಗ್ರಂಥಗಳೆಂದು ವಡ್ಡಾರಾದನೆ, ಚಾವುಂಡರಾಯ ಪುರಾಣ ಮುಂತಾದ ಬೆರಳೆಣಿಕೆಯ ಗ್ರಂಥಗಳನ್ನು ಬಿಟ್ಟರೆ ಗದ್ಯಸಾಹಿತ್ಯ ಚರಿತ್ರೆಯು ಮೇಲ್ನಡೆಯಲ್ಲಿದ್ದರೂ ಕವಿರಾಜ ಮಾರ್ಗದಲ್ಲಿ ಉತ್ತರಾದ ಗದ್ಯಾಶ್ರಯಿಗಳ ಹೆಸರುಗಳನ್ನು ಮಾತ್ರ ಕೇಳಿಬರುತ್ತಿರುವುದು ಬಿಟ್ಟರೆ ಅವರ ಕೃತಿಗಳ ಪರಿಚಯ ತಿಳಿಯದು. ಆದರೆ ಗದ್ಯ ಪರಂಪರೆ ಪ್ರಾರಂಭವಾದುದು ೧೭ನೆಯ ಶತಮಾನದ ಕೊನೆಗಾಲದಿಂದ ೧೯ನೆಯ ಶತಮಾನದ ಆರಂಭದವರೆಗೆ. ಈ ಸಂದರ್ಭದಲ್ಲಿ ಸುಮಾರು ಐವತ್ತು ಗದ್ಯಗ್ರಂಥಗಳು ಕಂಡುಬರುತ್ತವೆ. 'ಚಿಕ್ಕದೇವರಾಯ ವಂಶಾವಳಿ' ಕೃತಿಯು ಈ ಸಂದರ್ಭದ ಪ್ರಮುಖವಾದ ಗ್ರಂಥವಾಗಿದೆ.

ಗದ್ಯದ ರಚನೆ(ಯ)ಗೆ ಕಾಗದದ ವ್ಯಾಪಕ ಬಳಕೆಯೂ ಬಹುಮಟ್ಟಿಗೆ ಕಾರಣವಾಯಿತು. ಹದಿನೆಂಟನೆಯ ಶತಮಾನದಲ್ಲಿ ಗದ್ಯವನ್ನು ಪುರಾಣ ಮತ್ತು ಶಾಸ್ತ್ರ ಗ್ರಂಥಗಳ ಟೀಕಾನುವಾದಕ್ಕಾಗಿಯೂ ಮುಖ್ಯವಾಗಿ ಬಳಸಲಾಯಿತು. ಮೈಸೂರು ಆಸ್ಥಾನದಲ್ಲಿದ್ದ ವೀರಶೈವ ಹಾಗೂ ಶ್ರೀವೈಷ್ಣವ ವಿದ್ವಾಂಸರು ವಿಶೇಷವಾಗಿ ಇಂಥ ಟೀಕಾಗದ್ಯವನ್ನು ರಚಿಸಿದರು. ಮುಂದುವರೆದು ಗದ್ಯವು ಜ್ಯೋತಿಷ್ಯ, ವೈದ್ಯಕೀಯ, ವ್ಯಾಕರಣ, ಮುಂತಾದ ಶಾಸ್ತ್ರ ವಿಷಯಗಳ ನಿರೂಪಣೆಗೆ ಆಯ್ದುಕೊಂಡುದು ಕೂಡ ಗದ್ಯ ಸಾಹಿತ್ಯ ಪ್ರಕಾರದ ಮುನ್ನಡೆಯ ಲಕ್ಷಣವಾಗಿ ಕಂಡುಬಂದಿತು. ಇದಕ್ಕೆ ನಿದರ್ಶನವೆಂಬಂತೆ ಕಳಲೆಯ 'ವೀರರಾಜೋಕ್ತಿವಿಲಾಸ' ಎನಿಸಿದ ಸಕಲ 'ವೈದ್ಯ ಸಂಹಿತಾಸಾರಾರ್ಣವ'ವೂ ತಿಮ್ಮರಾಜಗೌಡನ 'ಸ್ತ್ರೀವೈದ್ಯ' ವೂ ಮುಖ್ಯವಾದ ಕೃತಿಗಳಾಗಿವೆ. 'ಶಬ್ದಮಣಿದರ್ಪಣಕ್ಕೆ ಟೀಕೆಯನ್ನು ಬರೆದ ನಿಟ್ಟೂರು ನಂಜಯ್ಯ ಇದೇ ಶತಮಾನದಲ್ಲಿ ಬರುವ ಪ್ರಮುಖ ಕವಿಯಾಗಿದ್ದು 'ಗಿತಗೋವಿಂದ' 'ಸೌಂದರ್ಯಲಹರಿ' ಇವುಗಳೂ ಗದ್ಯರೂಪದಲ್ಲಿ ಅನುವಾದಗೊಂಡವು. ಹೀಗೆ ೧೮ನೆಯ ಶತಮಾನದಲ್ಲಿ ಉಚ್ಚಮಟ್ಟದಲ್ಲಿ ಸಾಹಿತ್ಯ ಕೃತಿಗಳು ರಚನೆಯಾಗಿಲ್ಲವೆಂಬ ಮಾತು ತೌಲನಿಕವಾಗಿ ನಿಜವಾದರೂ ಹೊಸಗನ್ನಡಕ್ಕೆ ಸಂಬಂಧಿಸಿದ ಹಲವು ಪರಂಪರೆಗಳು ಈ ಶತಮಾನದಲ್ಲಿ ಉಗಮ ಹೊಂದಿದವು. ಅವು ಮುಂದಿನ ಶತಮಾನದಲ್ಲಿ ಹೆಚ್ಚು ಸ್ಫುಟವಾಗಿ ಹೊರಹೊಮ್ಮಿದವು. ಈ ರೀತಿಯಲ್ಲಿ ಹರಿದು ಬಂದ ಸಾಹಿತ್ಯವಾಹಿನಿಗೆ ೧೯ನೆಯ ಶತಮಾನದಲ್ಲಿ ಪಾಶ್ಚಾತ್ಯ ಸಂಪರ್ಕದ ಹೊಸ ನೀರು ಸೇರಿ ಕನ್ನಡ ಸಾಹಿತ್ಯದ ಬೆಳವಣಿಗೆ ಹೊಸ ದಿಕ್ಕಿನೆಡೆಗೆ ಸಾಗಿತು.

**ಕೊನೆ ಟಿಪ್ಪಣಿಗಳು**

೧. ಆನಂದ ಝುಂಜರವಾಡ, ಬರದ ನಾಡಿನ ಬರಹ, ಪು. ೩೨, ೨೦೧೦

೨. ಅನೂಸೂಯ ವಿ.ಪರಗಿ, ಮಾತೃಭಾಷೆ ಕನ್ನಡ, ಪು. ೨೨೪, ೨೦೧೧

೩. ಡಾ. ಕೆ.ವಿ. ನಾರಾಯಣ (ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೧, ಭಾಷೆ, ಪು. ೮೯, ೨೦೦೯

೪. ಅದೇ, ಪು. ೨೦೩

೫. ಅದೇ, ಪು. ೨೦೪

೬. ಡಾ. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ, ಪು. ೧, ೨೦೧೭,

೭. ಅದೇ, ಪು. ೫

೮. ಅದೇ, ಪು. ೧೯

೯. ಡಾ. ಸಿ. ವೀರಣ್ಣ, ಕನ್ನಡ ಸಾಹಿತ್ಯದ ಚಾರಿತ್ರಿಕ ಬೆಳವಣಿಗೆ, ಪು. ೨೬, ೧೯೮೬

೧೦. ಷ. ಶೆಟ್ಟರ್ (ಸಂ), ಹಳಗನ್ನಡ ಭಾಷೆ, ಭಾಷಾ, ವಿಕಾಸ, ಭಾಷಾ ಭಾಂಧವ್ಯ, ಪು. ೪, ೨೦೧೭

೧೧. ಅದೇ, ಪು. ೪

೧೨. ಅದೇ, ಪು. ೫

೧೩. ಹು.ಕಾ. ಜಯದೇವ (ಸಂ), ಶಾಸನ ಮತ್ತು ಗದ್ಯ, ಪು. ೫೦, ೨೦೧೯

೧೪. ಅದೇ, ಪು. ೫೦

೧೫. ಡಾ.ಎ.ವಿ. ನರಸಿಂಹಮೂರ್ತಿ, ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಪು. ೨೭, ೨೦೦೬

೧೬. ಷ. ಶೆಟ್ಟರ್, ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ, ಪು. ೨೫, ೨೦೧೭

೧೭. ಡಾ.ಎ.ವಿ. ನರಸಿಂಹಮೂರ್ತಿ, ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಪು. ೨೮, ೨೦೦೬

೧೮. ರಂ.ಶ್ರೀ ಮುಗುಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೨೩, ೨೦೧೧

೧೯. ಅದೇ, ಪು. ೨೩

೨೦. ಡಾ.ಕೆ. ರವೀಂದ್ರನಾಥ, ಕನ್ನಡ ದಾಖಲು ಸಾಹಿತ್ಯ, ಪು. ೩೩, ೨೦೧೪

೨೧. ಎಂ.ವಿ. ಸೀತಾರಾಮಯ್ಯ (ಸಂ), ಕವಿರಾಜ ಮಾರ್ಗಂ, ಪು. ೭೯, ೨೦೧೫

೨೨. ಡಾ.ಡಿ.ಎಸ್. ಕರ್ಕಿ, ಛಂದೋವಿಕಾಸ, ಪು. ೧೦೦, ೨೦೧೬

೨೩. ರಂ.ಶ್ರೀ ಮುಗುಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೨೭, ೨೦೧೧

೨೪. ಅದೇ, ಪು. ೨೮

೨೫. ಪಿ.ವಿ. ನಾರಾಯಣ, ಚಂಪೂ ಕವಿಗಳು, ಪು. ೫, ೨೦೧೯

೨೬. ಪಂಪ ಭಾರತಂ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಪು. ೭೨, ೨೦೧೩

೨೭. ರಂ.ಶ್ರೀ ಮುಗುಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೧೦೮, ೨೦೧೧

೨೮. ಎಂ. ಚಿದಾನಂದಮೂರ್ತಿ (ಸಂ), ವಚನ ಸಾಹಿತ್ಯ, ಪು. ೫, ೨೦೧೯

೨೯. ಅದೇ, ಪು. ೫೪

೩೦. ಅದೇ, ಪು. ೯

೩೧. ಅದೇ, ಪು. ೧೧೯

೩೨. ರಂ.ಶ್ರೀ. ಮುಗುಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೧೫೮, ೨೦೧೧

೩೩. ಡಾ.ಜಿ.ಸಿ. ಲಿಂಗಣ್ಣ, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಪು. ೪೨೦, ೨೦೧೨

೩೪. ಕಾಳೇಗೌಡ ನಾಗವಾರ, ತ್ರಿಪದಿ ರಗಳೆ ಮತ್ತು ಜನಪದ ಸಾಹಿತ್ಯ, ಪು. ೩೧, ೨೦೧೯

೩೫. ಅದೇ, ಪು. ೩೨

೩೬. ಅದೇ, ಪು. ೩೧

೩೭.ಅದೇ, ಪು. ೪೨

೩೮. ಅದೇ, ಪು. ೪೨

೩೯. ಕೆ. ಮರಳುಸಿದ್ಧಪ್ಪ, ಷಟ್ಪದಿ ಸಾಹಿತ್ಯ, ಪು. ೪, ೨೦೧೯

೪೦. ಅದೇ, ಪು. ೪

೪೧. ಎಚ್.ಎಸ್. ವೆಂಕಟೇಶಮೂರ್ತಿ, ಕೀರ್ತನ ಸಾಹಿತ್ಯ, ಪು. ೪, ೨೦೧೯

೪೨. ಅದೇ, ಪು. ೨೩

೪೩. ಅದೇ, ಪು. ೨೩

೪೪. ಡಾ.ಜಿ.ಸಿ. ಲಿಂಗಣ್ಣ, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಪು. ೮೮, ೨೦೧೨

೪೫. ಡಾ.ಡಿ.ಎಸ್. ಕರ್ಕಿ, ಛಂದೋವಿಕಾಸ, ಪು. ೨೦೨, ೨೦೧೬

೪೬. ಅದೇ, ಪು. ೨೦೪

೪೭. ಅದೇ, ಪು. ೨೦೯

೪೮. ಡಾ.ಚಿ.ಸಿ. ಲಿಂಗಣ್ಣ, ಕನ್ನಡ ಭಾರತಿ ಸಂಸ್ಕೃತಿ ಕೋಶ, ಪು. ೪೩೪, ೨೦೧೨

೪೯. ಕಾಳೇಗೌಡ ನಾಗವಾರ, ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ, ಪು. ೨೧, ೨೦೧೯

೫೦. ಅದೇ, ಪು. ೧೦೦

೫೧. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೬, ೨೦೧೫

೫೨. ಡಿ.ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ, ಪು. ೩೯, ೨೦೧೫

೫೩. ಅದೇ, ಪು. ೩೬

೫೪. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೯, ೨೦೧೫

೫೫. ಡಿ.ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ, ಪು. ೩೬, ೨೦೧೫

೫೬. ಅದೇ, ಪು. ೩೬

೫೭. ಅದೇ, ಪು. ೩೪

೫೮. ಅದೇ, ಪು. ೩೪

೫೯. ಅದೇ, ಪು. ೩೨

೬೦. ಅದೇ, ಪು. ೩೨

೬೧. ಅದೇ, ಪು. ೩೯

೬೨. ಅದೇ, ಪು. ೩೩

೬೩. ಅದೇ, ಪು. ೩೩

೬೪. ಅದೇ, ಪು. ೪೧

೬೫. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೧೩-೧೪, ೨೦೧೫

೬೬. ಅದೇ, ಪು. ೧೬

೬೭. ಅದೇ, ಪು. ೧೭

೬೮. ಅದೇ, ಪು. ೧೬

೬೯. ಡಾ. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ, ಪು. ೫, ೨೦೧೭

೭೦. ಅದೇ, ಪು. ೨

೭೧. ಷ. ಶೆಟ್ಟರ್, ಲಿಪಿ, ಲಿಪಿಕಾರ, ಹಳಗನ್ನಡ ವ್ಯವಸಾಯ, ಪು. ೧, ೨೦೧೭

೭೨. ಅದೇ, ಪು. ೧೯೮

೭೩. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೧೮, ೨೦೧೫

೭೪. ಅದೇ, ಪು. ೧೮

೭೫. ಡಾ. ಕೆ. ರವೀಂದ್ರನಾಥ, ಹಸ್ತಪ್ರತಿಗಳು ಕನ್ನಡಿಗರ ಬದುಕು, ಪು. ೩೪, ೨೦೧೪

೭೬. ಅದೇ, ಪು. ೩೭

೭೭. ಅದೇ, ಪು. ೩೫

೭೮. ಅದೇ, ಪು. ೩೯

೭೯. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೧೮, ೨೦೧೫

೮೦. ಡಾ. ಕೆ. ರವೀಂದ್ರನಾಥ, ಹಸ್ತಪ್ರತಿಗಳು ಕನ್ನಡಿಗರ ಬದುಕು, ಪು. ೧೭, ೨೦೧೪

೮೧. ಅದೇ, ಪು. ೨೦

೮೨. ಅದೇ, ಪು. ೨೦

೮೩. ಅದೇ, ಪು. ೨೧

೮೪. ಡಾ. ವೀರೇಶ ಬಡಿಗೇರ, ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ, ಪು. ೨೦, ೨೦೧೭

೮೫. ಡಾ. ಕೆ. ರವೀಂದ್ರನಾಥ, ಹಸ್ತಪ್ರತಿಗಳು ಕನ್ನಡಿಗರ ಬದುಕು, ಪು. ೨೭, ೨೦೧೪

೮೬. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೧೪, ೨೦೧೫

೮೭. ಡಾ. ಕೆ. ರವೀಂದ್ರನಾಥ, ಹಸ್ತಪ್ರತಿಗಳು ಕನ್ನಡಿಗರ ಬದುಕು, ಪು. ೬೪, ೨೦೧೪

೮೮. ಅದೇ, ಪು. ೬೬

೮೯. ಅದೇ, ಪು. ೬೮

೯೦. ಅದೇ, ಪು. ೬೯

೯೧. ಅದೇ, ಪು. ೭೦

೯೨. ಅದೇ, ಪು. ೭೫

೯೩. ಅದೇ, ಪು. ೭೫

೯೪. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೧೨, ೨೦೧೫

# ಅಧ್ಯಾಯ: ನಾಲ್ಕು

# ಕನ್ನಡ ಸಾಹಿತ್ಯದ ಬೆಳವಣಿಗೆ: ಮುದ್ರಣ ತಂತ್ರಜ್ಞಾನ

೪.೧. ಮುದ್ರಣ ತಂತ್ರಜ್ಞಾನ

೪.೨. ಮುದ್ರಣ ತಂತ್ರಜ್ಞಾನದ ವಿಕಾಸ

೪.೩. ಸಾಹಿತ್ಯ ಕೃತಿಗಳ ಪ್ರಕಟಣೆ ಮತ್ತು ಮುದ್ರಣ ಯಂತ್ರ

೪.೪. ಅಚ್ಚುಮೊಳೆ ಮತ್ತು ಅಕ್ಕಸಾಲಿಗರು

೪.೫. ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ

೪.೬. ಆಧುನಿಕ ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು

೪.೬.೧. ಶ್ರವ್ಯ ಮಾಧ್ಯಮಗಳು

೪.೬.೨. ದೃಶ್ಯ ಮಾಧ್ಯಮಗಳು

# ಅಧ್ಯಾಯ: ನಾಲ್ಕು

# ಕನ್ನಡ ಸಾಹಿತ್ಯದ ಬೆಳವಣಿಗೆ: ಮುದ್ರಣ ತಂತ್ರಜ್ಞಾನ

## ೪.೧. ಮುದ್ರಣ ತಂತ್ರಜ್ಞಾನ

ಬರಹದ ಸಾಮಾಗ್ರಿಯಾಗಿ ತಾಳೆಗರಿಯು ಬಳಕೆಗೊಳ್ಳುತ್ತಿರುವಾಗಲೇ ಮಹಮ್ಮದೀಯ ಆಳ್ವಿಕೆಯಿಂದ ಪರಿಚಯವಾದ 'ಕಾಗದ' ಬರಹದ ತಾಂತ್ರಿಕ ಬದಲಾವಣೆಯ ಮೈಲುಗಲ್ಲಾಯಿತು. ಕನ್ನಡ ಸಂದರ್ಭದಲ್ಲಿಯೂ ಕೂಡ 'ಕಾಗದ'ದ ಬಳಕೆ ಬರಹ ಮತ್ತು ದಾಖಲೆ ನಿರ್ಮಾಣ ಕಾರ್ಯದಲ್ಲಿ ಆಗಿದೆ. ರಾಜರ ಆಳ್ವಿಕೆಯಲ್ಲಿ ಆಡಳಿತದ ವ್ಯವಹಾರದ ಲೆಕ್ಕಪತ್ರಗಳನ್ನು ಬರೆದಿಡಲು ಬಳಕೆಯಾದರೂ 'ಸಾಹಿತ್ಯ' ಬರೆದಿಡಲು ಕೂಡ ಸಹಕಾರಿಯಾಯಿತು. ಮುದ್ರಣ ತಂತ್ರಜ್ಞಾನ ಭಾರತಕ್ಕೆ ಬಂದ ನಂತರ ಕಾಗದದ ಬಳಕೆ ದ್ವಿಗುಣವಾಯಿತು. ಹಿಂದೆ ಕೈ ಬರಹವಿದ್ದುದರ ಪರಿಣಾಮ ಸಾಹಿತ್ಯದ ಬೆಳವಣಿಗೆ ಮಂದಗತಿಯಲ್ಲಿ ಇತ್ತು. ಸೀಮಿತ ವಲಯದಲ್ಲಿ ಸಾಹಿತ್ಯದ ಪ್ರವೇಶವಿರುತ್ತಿದ್ದರಿಂದ ಸೀಮಿತ ಜನರಿಗೆ ಮಾತ್ರ ಸಾಹಿತ್ಯದ ಜ್ಞಾನ ದಕ್ಕುತ್ತಿತ್ತು. ಮುದ್ರಣ ತಂತ್ರಜ್ಞಾನದಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆ ಸೀಮಿತ ಪರಿಧಿಯ ದಾಟಿ ಸಾಮೂಹಿಕ ವಲಯಕ್ಕೆ ಪ್ರವೇಶಿಸಿತು.

ಆಧುನಿಕ ಭಾರತದ ಬಹುತೇಕ ಭಾಷೆಗಳು ಶಿಷ್ಟವಾಗುವ ಪ್ರಕ್ರಿಯೆ ಆರಂಭವಾಗಿದ್ದಕ್ಕೆ ಪ್ರಾಥಮಿಕ ಕಾರಣ ೧೯ನೆಯ ಶತಮಾನದ ಮುದ್ರಣ ತಂತ್ರಜ್ಞಾನ. ಕನ್ನಡ ಭಾಷೆಗೂ ಅದೇ ಕಾರಣ. ನಾಡಿನಾದ್ಯಂತ ಮೌಖಿಕ ರೂಪದಲ್ಲಿದ್ದ ಹಾಗೂ ಶಿಲೆ ಮತ್ತು ತಾಳೆಗರಿಯಲ್ಲಿದ್ದಂತಹ ಸಾಹಿತ್ಯ ಸಂಪತ್ತು ಮುದ್ರಣ ತಂತ್ರಜ್ಞಾನದಿಂದ ಒಂದು ಹೊಸ ರೂಪ ಪಡೆದು ಹೊರ ಜಗತ್ತಿಗೆ ಬರಲು ಸಾಧ್ಯವಾಯಿತು. ಮುದ್ರಣ ತಂತ್ರಜ್ಞಾನದಿಂದ ಸಾಹಿತ್ಯ ಸಾರ್ವತ್ರಿಕ ರೂಪ ಪಡೆಯಿತು.

"ಒಂದು ದಾಖಲೆಯ ಗುಣಿತ ಪ್ರತಿಗಳನ್ನು ಮುದ್ರಿಸಲು ಉಪಯೋಗಿಸುವ ಒಂದು ಯಂತ್ರವೇ ಮುದ್ರಣಯಂತ್ರ."[೧] ಯಂತ್ರ ಒಂದು ಮುದ್ರಣ ಫಲಕದಿಂದ ಮಸಿಯನ್ನು ಸಾಮಾನ್ಯವಾಗಿ ಕಾದ ಆಗಿರುವ ಮುದ್ರಣ ಮಾಧ್ಯಮಕ್ಕೆ ರವಾನಿಸುತ್ತದೆ. ಮುದ್ರಣ ಒಂದು ಕೈಗಾರಿಕ ಪ್ರಕ್ರಿಯೆ ಇದು ಒಂದು ದಾಖಲೆಯ ಹಲವು ಸಮಾನ ಪ್ರತಿಗಳನ್ನು ಮಡುವುದು

ಒಳಗೊಂಡಿರುತ್ತದೆ. ಮುದ್ರಣ ಕಲೆಯನ್ನು ರೂಪಿಸಿದ ಕೀರ್ತಿ ಚೀನಾ ದೇಶದವರಿಗೆ ಸಲ್ಲುತ್ತದೆ. ಮುದ್ರಣ ಕಲೆಯ ಜೊತೆಗೆ ಅದಕ್ಕೆ ಬೇಕಾದ ಕಾಗದ ತಯಾರಿಕೆಯನ್ನು ಮೊಟ್ಟಮೊದಲು ಕಂಡುಹಿಡಿದವರು ಸಹ ಚೀನಿಯರೇ. ಕ್ರಿ.ಪೂ.೫೦ರಲ್ಲೇ ಅವರು ಮರದಲ್ಲಿ ಕೊರೆದ ಅಥವಾ ಮಣ್ಣಿನಿಂದ ಮಾಡಿದ ಅಚ್ಚುಗಳ ಸಹಾಯದಿಂದ ಗ್ರಂಥಗಳನ್ನು ಮುದ್ರಿಸುತ್ತಿದ್ದರು. ಮರದ ಬ್ಲಾಕ್‌ಗಳ ಮೇಲೆ ಪಠ್ಯ ಮತ್ತು ಬಿಂಬಿಗಳನ್ನು ಕೊರೆದರು. ಮರದ ಬಳಿಕ ಮಸಿಯಲ್ಲಿ ಮುಳುಗಿಸಿ ಕಾಗದದ ಮೇಲೆ ಒತ್ತಲಾಯಿತು. ಈ ಮುದ್ರಣವನ್ನು ಮರದ ಬ್ಲಾಕ್ ಮುದ್ರಣ ಎಂದು ಕರೆದರು. "ಕ್ರಿ.ಶ. ೭೫೧ ರಲ್ಲಿ ಸಾಮರ್ಕಂದಿ'ನಲ್ಲಿದ್ದ ಕೆಲವರು ಚೀನಾದೇಶದ ಕೈದಿಗಳಿಂದ ಅರಬ್ಬರ ಈ ಕಲೆಯನ್ನು ಕಲಿತರು. ಅವರ ಮೂಲಕ ಅದು ಪಶ್ಚಿಮ ದೇಶಗಳಲ್ಲಿ ಪ್ರಚಾರಕ್ಕೆ ಬಂದು ಅಚ್ಚುಯಂತ್ರಗಳ ನಿರ್ಮಾಣವಾಯಿತು."[೨] ಕ್ರಿ.ಶ. ೮೬೮ ರಲ್ಲಿ ಮುದ್ರಣಗೊಂಡ ಬೌದ್ಧರ 'ಹಿರಾಕಸೂತ್ರ' ಈ ವರೆಗೂ ಲಭ್ಯವಿರುವ ಜಗತ್ತಿನ ಎಲ್ಲಾ ಪುಸ್ತಕಗಳ ಪೈಕಿ ಅತ್ಯಂತ ಪ್ರಾಚೀನವಾದ ಪ್ರಪ್ರಥಮ ಮುದ್ರಿತ ಪುಸ್ತಕ. ಪ್ರಥಮ ಮುದ್ರಣಯಂತ್ರ ತುಂಬಾ ನಿಧಾನವಾಗಿತ್ತು. ಪ್ರತಿಯೊಂದು ಅಕ್ಷರಕ್ಕೂ ಒಂದೇ ಮೊಳೆಯನ್ನು ಮರ, ಸೀಸ ಅಥವಾ ಸತು ಇವುಗಳಿಂದ ಮಾಡಿ ಅವುಗಳನ್ನು ಜೋಡಿಸುವ ವಿಧಾನವನ್ನು ಹಾಲೆಂಡ್ ದೇಶದ 'ಜಾನ್‌ಸನ್ ಕ್ಯಾಸ್ಟರ್' ಎಂಬಾತನು ಕ್ರಿ.ಶ. ೧೪೨೩ ರಲ್ಲಿ ಕಂಡುಹಿಡಿದನು. ಕ್ರಿ.ಶ. ೧೫೦೦ ರ ವೇಳೆಗೆ ಯುರೋಪಿನಲ್ಲಿ ಒಟ್ಟು ೨೨೦ ಕಾರ್ಖಾನೆಗಳಿದ್ದವು. ಇವುಗಳು ಸಾಧಾರಣವಾಗಿ ಗ್ರೀಕ್ ಲ್ಯಾಟಿನ್ ಭಾಷೆಗಳ ಗ್ರಂಥಗಳನ್ನು ಮುದ್ರಿಸುತ್ತಿದ್ದವು. ಕ್ರಿ.ಶ. ೧೪೭೪ ರಲ್ಲಿ ಕಾಕ್ಸಟನ್ ಎಂಬಾತನು ಲಂಡನ್ನಿನಲ್ಲಿ ಪ್ರಥಮತಃ ಒಂದು ಗ್ರಂಥವನ್ನು ಮುದ್ರಣ ಮಾಡಿದನು. ಅಲ್ಲಿಂದೀಚೆಗೆ ಲೆಕ್ಕವಿಲ್ಲದಷ್ಟು ಗ್ರಂಥಗಳು ಅಚ್ಚಾಗಿದ್ದು ಅವುಗಳ ಪ್ರತಿಗಳು ಈಗಲೂ ದೊರೆಯುತ್ತವೆ. ಮುದ್ರಣ ಯಂತ್ರಗಳು ಮುದ್ರಣ ರೂಪದ ಮೇಲೆ ಒತ್ತಡ ಹೇರಲು ವಿವಿಧ ಯಾಂತ್ರಿಕತೆ ಉಪಯೋಗಿಸಿದವು. ತಿರುಪುಯಂತ್ರ ೧೬೦೦ ರಲ್ಲಿ ಸ್ಪ್ರಿಂಗ್‌ಗಳನ್ನು ಉಪಯೋಗಿಸುವುದರಿಂದ ಉತ್ತಮ ಪಡಿಸಲಾಯಿತು. ಈ ಯಂತ್ರ ತೀವ್ರವಾಗಿ ಚಲಿಸಲು ನೆರವಾಗಿ ಗಂಟೆಗೆ ೨೫೦ ಪ್ರತಿಗಳನ್ನು ಉತ್ಪಾದಿಸಲು ಸಮರ್ಥವಾಯಿತು.

ಚೀನಿಯರಂತೆ ಮುದ್ರಣಯಂತ್ರ ಆವಿಷ್ಕರಿಸಿದವರಲ್ಲಿ ಜರ್ಮನಿಯ ಗುಟನ್‌ಬರ್ಗ್ ಕೂಡ ಒಬ್ಬ. ಈತ ಯುರೋಪಿನ 'ಮೈಂಜ್' ನಲ್ಲಿ ಚಲಿಸುವ ಅಚ್ಚಿನ ಮೊಳೆಯ ಮುದ್ರಣವನ್ನು ಕಂಡುಹಿಡಿದ ಮೊದಲಿಗ. ಈತನೇ ಮುದ್ರಣ ಕಲೆಯ ಮೊದಲ ನಿರ್ಮಾತೃವೆಂದು ಬಹುತೇಕರು ಒಪ್ಪಿದ್ದಾರೆ. ಈತ ೧೪೫೬ ರಲ್ಲಿ ಲ್ಯಾಟಿನ್ ಭಾಷೆಯ ಪವಿತ್ರ ಬೈಬಲ್ ಅನ್ನು ಅಚ್ಚುಮಾಡಿದ. ಆದ್ದರಿಂದ ಈ ಬೈಬಲ್ ಕೃತಿಯ ಕ್ರಮ ಬದ್ಧವಾಗಿ ಅಚ್ಚುಮಾಡಿದ ಜಗತ್ತಿನ ಮೊದಲ ಕೃತಿ ಎಂದು ಹೆಸರು ಪಡೆಯಿತು.

ಅಲ್ಲಿಂದ ಸುಮಾರು ಒಂದು ದಶಕದ ನಂತರ ಮುದ್ರಣ ಕಲೆ ಭಾರತದಲ್ಲಿ ಚಿಗುರಿತು. ಧರ್ಮ ಪ್ರಚಾರದ ದೃಷ್ಟಿಯಿಂದ ಕ್ರೈಸ್ತ ಪಾದ್ರಿಗಳು ಮುದ್ರಣ ಕಲೆಯ ಜ್ಞಾನವನ್ನು ಭಾರತಕ್ಕೆ

ತಂದರು. "ಕ್ರಿ.ಶ. ೧೫೫೭ ರಲ್ಲಿ ಗೋವಾದಲ್ಲಿ ಮೊದಲ ಮುದ್ರಣಾಲಯ ಕಾರ್ಯಾರಂಭ ಮಾಡಿತು. ದೌತ್ರೀನಾ ಕ್ರಿಸ್ತ. ಎಂಬ ಪುಸ್ತಕ ಭಾರತದಲ್ಲಿ ಮೊದಲು ಮುದ್ರಣಗೊಂಡಿತು."[೩] ಕ್ರೈಸ್ತ ಪಾದ್ರಿಗಳು ತಮ್ಮ ಧರ್ಮ ಪ್ರಚಾರದ ಕಾರ್ಯವನ್ನು ಪರಿಣಾಮಕಾರಿಯಾಗಿ ಯಶಸ್ವಿಗೊಳಿಸುವ ಉದ್ದೇಶದಿಂದ ದೇಶದಲ್ಲಿನ ಜನರ ಮನಸ್ಸನ್ನು ಗೆಲ್ಲಲು ಭಾರತೀಯ ಭಾಷೆಗಳನ್ನು ಕಲಿಯುವ ಕಾರ್ಯಕ್ಕೆ ಮುಂದಾದರು. ಭಾರತೀಯ ಭಾಷೆಗಳನ್ನು ಕಲಿಯುತ್ತಲೇ ಆ ಭಾಷೆಗಳಲ್ಲಿನ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡುವ ಮೂಲಕ ಆ ಸಾಹಿತ್ಯದ ಮೌಲ್ಯವನ್ನು ಅರಿತುಕೊಂಡರು.

ಕ್ರೈಸ್ತಪಾದ್ರಿಗಳು ಹದಿನೆಂಟನೆಯ ಶತಮಾನದ ವೇಳೆಗಾಗಲೇ ಭಾರತದಲ್ಲಿ ಹಲವಾರು ಕಡೆ ತಮ್ಮ ನೆಲೆಗಳನ್ನು ಸ್ಥಾಪಿಸಿ ಧರ್ಮ ಪ್ರಚಾರ ಕಾರ್ಯದಲ್ಲಿ ಸಕ್ರಿಯರಾಗಿದ್ದರು. ಇದೇ ಸಂದರ್ಭದಲ್ಲಿ ಕೈಗಾರಿಕಾ ಕ್ರಾಂತಿ ಮುದ್ರಣ ಕಲೆಗೆ ಕ್ರಾಂತಿಯೋಪಾದಿಯ ನೆರವು ನೀಡಿ ಪತ್ರಿಕೆಗಳ ಬೆಳವಣಿಗೆಗೂ ಸಹಕಾರಿಯಾಯಿತು. ಯಂತ್ರ ಕುಶಲತೆ ಹೆಚ್ಚಿದಂತೆ ಮುದ್ರಣ ಕಾಗದದ ತಯಾರಿಕೆ ಹೆಚ್ಚಿ ಅದೂ ಅಗ್ಗವಾಗಿ ಸಿಗುವಂತಾಯಿತು. ಮತ್ತೊಂದೆಡೆ ಕೈಗಾರಿಕಾ ಕ್ರಾಂತಿಯಿಂದ ಸಮಾಜದಲ್ಲಾದ ಬದಲಾವಣೆಗಳು ಪತ್ರಿಕೆಗಳಿಗೆ ಬೇಡಿಕೆ ತಂದವು.

ಹದಿನೆಂಟನೆಯ ಶತಮಾನದ ಪೂರ್ವದಲ್ಲಿ ರಂ.ಶ್ರೀ. ಮುಗುಳಿಯುವರು ವಿವರಿಸಿದಂತೆ ಕುಮಾರವ್ಯಾಸ ಯುಗದ ಕೊನೆಯವರೆಗೂ ಕನ್ನಡ ಸಾಹಿತ್ಯ ಕೆಲವು ಪ್ರಕಾರಗಳಲ್ಲಿ ರಚನೆಯಾಗಿ ಬೆಳವಣಿಗೆಯ ಹಾದಿಯಲ್ಲೇ ಸಾಗಿತ್ತು. ರತ್ನಾಕರ ವರ್ಣಿಯ ಸಮಕಾಲೀನರೂ ಉತ್ತರಕಾಲೀನರೂ ಆದ ಆನೇಕ ಜೈನ ಕವಿಗಳು ಆ ಕಾಲಘಟ್ಟದ ಸಂದರ್ಭಕ್ಕೆ ತಕ್ಕಂತೆ ಅಥವಾ ರತ್ನಾಕರ ವರ್ಣಿಯ ಪ್ರಭಾವಕ್ಕೆ ಒಳಗಾಗಿಯೋ ಕೆಲವೊಂದು ಸಾಂಗತ್ಯ ಗ್ರಂಥಗಳನ್ನು ಬರೆದರು. ದೊಡ್ಡಯ್ಯನ 'ಚಂದ್ರಪ್ರಭ ಚರಿತೆ' ಬಾಹುಬಲಿಯ 'ನಾಗಕುಮಾರ ಚರಿತೆ' ಬ್ರಹ್ಮಕವಿಯ 'ವಜ್ರಕುಮಾರ ಚರಿತೆ' ದೇವರಸನ 'ಗುರು ದತ್ತ ಚರಿತೆ' ಮುಂತಾದವು. ಶಾಂತರಸನ 'ಯೋಗರತ್ನಾಕರ' ಸಿಂಹರಾಜನ 'ಚಿನ್ಮಯ ಚಿಂತಾಮಣಿ' ಕಂದಪದ್ಯದಲ್ಲಿ ರಚಿತವಾಯಿತು. ಶಾಸ್ತ್ರಗ್ರಂಥಗಳಲ್ಲಿ ಶೃಂಗಾರ ಕವಿಯ 'ಕರ್ನಾಟಕ ಸಂಜೀವನ'ವೆಂಬ ನಿಘಂಟು, ಗುಣ ಚಂದ್ರನ 'ಛಂದಸ್ಸಾರ' ಭಟ್ಟಾಕಳಂಕನ ಶಬ್ದಾನುಶಾಸನ ಮುಖ್ಯವಾದವುಗಳಾಗಿವೆ. ಭಟ್ಟಾ ಕಳಂಕನು ಈ ಯುಗದ ಶ್ರೇಷ್ಠ ಕನ್ನಡ ವ್ಯಾಕರಣ ಪಂಡಿತನಾಗಿದ್ದು. ಅವನ 'ಶಬ್ದಾನು ಶಾಸನವು ಸಂಪೂರ್ಣವಾಗಿ ಸಂಸ್ಕೃತದಲ್ಲಿ ಸೂತ್ರವೃತ್ತಿ ವ್ಯಾಖ್ಯಾನಗಳುಳ್ಳ ಕನ್ನಡ ಭಾಷೆಯ ವ್ಯಾಕರಣ ಗ್ರಂಥ. ಕೇಶಿರಾಜನ ಶಬ್ದ ಮಣಿದರ್ಪಣದ ತರುವಾಯ ರಚಿತವಾದ ಪ್ರಮಾಣ ಗ್ರಂಥವಾಗಿದೆ.

ಪಾದ್ರಿಗಳು ಭಾರತದ ಹಲವಾರು ಕಡೆ ಧರ್ಮ ಪ್ರಚಾರಕ್ಕೆ ಬಂದಂತೆ ೧೮ನೆಯ ಶತಮಾನದೊತ್ತಿಗೆ ಕರ್ನಾಟಕಕ್ಕೂ ಬಂದಿದ್ದರು. ಈ ಕಾಲಘಟ್ಟದಲ್ಲಿ ಕನ್ನಡ ಸಾಹಿತ್ಯ ಬೆಳವಣಿಗೆ ಸಂದರ್ಭ, ೧೬-೧೭ನೆಯ ಶತಮಾನದಲ್ಲಿ ಸತ್ವ ಪೂರ್ಣವಾಗಿ ಸಾಹಿತ್ಯ ಮೂಡಿದ ಹಾಗೆ

ಹೊರಹೊಮ್ಮಲಿಲ್ಲ. ಕಾರಣ ನಾಡಿನಲ್ಲಿದ್ದ ರಾಜಕೀಯ ಸ್ಥಿತಿಗತಿ ಸರಿಯಾಗಿ ಇಲ್ಲದುದು. ಆ ಸಂದರ್ಭದಲ್ಲಿ ಕರ್ನಾಟಕ ಸಂಪೂರ್ಣವಾಗಿ ಒಂದು ರಾಜಕೀಯ ಆಡಳಿತದ ವ್ಯವಸ್ಥೆಯೊಳಗಿರಲಿಲ್ಲ. ಕೆಲವೊಂದು ಪ್ರದೇಶ ಮರಾಠ ಪೇಶ್ವೆಗಳ ಆಳ್ವಿಕೆಗೆ ಒಳಪಟ್ಟಿದ್ದರೆ ಕೆಲವೊಂದು ಪ್ರದೇಶ ನಿಜಾಮ ಆಳ್ವಿಕೆಗೆ ಒಳಪಟ್ಟಿದ್ದವು. ಇನ್ನೂ ಮೈಸೂರು ಭಾಗದಲ್ಲಿ ಕವಿಗಳಿಗೆ ಆಶ್ರಯ ನೀಡಿದ ಚಿಕ್ಕದೇವರಾಜನ ಹಾಗೆ ಮುಂದೆ ಯರೂ ಕೂಡ ಇಲ್ಲದಿರುವು ಕೂಡ ಮುಖ್ಯವಾದ ಕಾರಣ. ಆದರೆ ಈ ಸಂದರ್ಭದಲ್ಲಿ ಹೈದರ್, ಟಿಪ್ಪುಸುಲ್ತಾನರು ಆಳ್ವಿಕೆ ನಡೆಸಿದ್ದಾದರು ಇವರ ಕಾಲದಲ್ಲಿ ಸಾಹಿತ್ಯ ರಚನೆಯ ಕಾರ್ಯ ಅಷ್ಟಾಗಿ ನಡೆದಿಲ್ಲವೆಂದು ಹೇಳಬೇಕು.

ಈ ಶತಮಾನದಲ್ಲಿ ಅಷ್ಟೊಂದು ಸಾಹಿತ್ಯ ಬೆಳವಣಿಗೆ ಆಗಿಲ್ಲವೆಂದಾದರೂ ಕವಿಚರಿತೆಯ ಮೂರನೆಯ ಸಂಪುಟ, ಹಾಗೂ ಮತ್ತಿತರ ಆಧಾರಗಳಿಂದ ಹೇಳುವುದಾದರೆ ೧೮ನೆಯ ಶತಮಾನದಲ್ಲಿ ಸುಮಾರು ಇನ್ನೂರು ಜನ ಗ್ರಂಥಕರ್ತರು ೩೫೦ಕ್ಕೂ ಮಿಕ್ಕಿದ ಕೃತಿಗಳನ್ನು ರಚಿಸಿದ್ದಾರೆ. ಅವರಲ್ಲಿ ಬಹುಸಂಖ್ಯಾತ ಕವಿಗಳು ಮೈಸೂರು ಸಂಸ್ಥಾನದ ಪರಿಸರದಲ್ಲಿದ್ದವರೇ. ಈ ಶತಮಾನದಲ್ಲಿ ಹಳಗನ್ನಡ, ನಡುಗನ್ನಡ ಇವೆರಡೂ ಸಾಹಿತ್ಯ ಸ್ವರೂಪಗಳು ಕಂಡುಬಂದರೂ ಅವುಗಳಲ್ಲಿ ನಡುಗನ್ನಡದ್ದೇ ಮೇಲುಗೈ. ಈ ಸಂದರ್ಭದಲ್ಲಿ ಕವಿಗಳು ಷಟ್ಪದಿ, ಸಾಂಗತ್ಯ, ಚೌಪದಿಗಳಲ್ಲಿಯೇ ತಮ್ಮ ಒಲವನ್ನು ತೋರಿದ್ದು, ಯಕ್ಷಗಾನದ ಹಾಡಿನ ರಚನೆಗೂ ಹೆಚ್ಚಿನ ಪುರಸ್ಕಾರ ದೊರೆತಿದೆ.

ವಿಷಯದ ದೃಷ್ಟಿಯಿಂದ ಈ ಶತಮಾನದ ಕೃತಿಗಳಲ್ಲಿ 'ಮೌಲಿಕ' ವೆನ್ನುವುದು ಇಲ್ಲವೆಂದು ಅನ್ನಿಸಬಹುದಾಗಿದೆ. ರಾಮಾಯಣ ಮಹಾಭಾರತದ ಪ್ರಸಂಗಗಳು, ಅಷ್ಟಾದಶ ಪುರಾಣಗಳಲ್ಲಿ ಬಂದಿರುವ ಮಹಾತ್ಮದ ಕಥೆಗಳು: ಶ್ರೀ ವೈಷ್ಣವ, ವೀರಶೈವ ಹಾಗೂ ಜೈನ ಮತಗಳಿಗೆ ಸಂಬಂಧಿಸಿದ ಸಂಸ್ಕೃತ ಗ್ರಂಥಗಳ ಟೀಕಾನುವಾದ ಮತ್ತು ಶತಕಗಳು, ಸ್ತೋತ್ರಗಳು ಇವೇ ಹೆಚ್ಚಾಗಿ ಕಂಡುಬರುತ್ತವೆ. ಕೆಲವು ವೈದ್ಯ ಹಾಗೂ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಕೃತಿಗಳಿವೆ. ಹಾಗೂ ಜಯದೇವನ ಗೀತಗೋವಿಂದ ಹಾಗೂ ಕಾಳಿದಾಸನ ರಘುವಂಶ ಮೊದಲಾದವುಗಳು ಅನುವಾದಗೊಂಡದ್ದು ಈ ಸಂದರ್ಭದಲ್ಲಿಯೇ.

"ಹದಿನೆಂಟನೆಯ ಶತಮಾನದ ಇನ್ನೊಂದು ವೈಶಿಷ್ಟ್ಯವೆಂದರೆ ಉಕ್ತಿವಿಲಾಸಗಳ ಪರಂಪರೆ ಮುಮ್ಮಡಿ ಕೃಷ್ಣರಾಜರ ಅನೇಕ ಗದ್ಯ ಕೃತಿಗಳು' 'ಕೃಷ್ಣರಾಜ ವಾಣೀ ವಿಲಾಸ' ಅಥವಾ 'ಉಕ್ತಿವಿಲಾಸ' ಎಂಬ ಸದರಿನಲ್ಲಿ ರಚಿತವಾಗಿದ್ದು ೧೮ನೆಯ ಶತಮಾನದಲ್ಲಿಯೇ. ಕಳಲೆಯ ವೀರರಾಜ, ನಂಜರಾಜರು. ಚೆಲುವಾಂಬೆ, ಕತ್ತಿಯ ಗೋಪಾಲರಾಜ ಇವರ ಹೆಸರಿನಲ್ಲಿ ಇಂಥ ಉಕ್ತಿ ಅಥವಾ ವಾಣೀವಿಲಾಸಗಳು ಹೊರಬಂದಿವೆ. 'ಚಾಮರಾಜೋಕ್ತಿ ವಿಲಾಸ'ವೆಂಬ ರಾಮಾಯಣದ ಪ್ರಸಿದ್ಧ ಗದ್ಯಾನುವಾದವೂ ಕೂಡ ಈ ಕಾಲದ್ದೇ. ಆಗಿರುವುದಾಗಿದೆ."[೪] ಈ

ರೀತಿಯ ಸಾಹಿತ್ಯಕ ಚಟುವಟಿಕೆಯೂ ಕರ್ನಾಟಕದ ದಕ್ಷಿಣ ಭಾಗದ ಮೈಸೂರು ಪ್ರದೇಶದಲ್ಲಿ ನಡೆಯಿತು. ನಾಡಿನ ಉತ್ತರ ಭಾಗದಲ್ಲಿ ಅಂದಿನ ಸಂದರ್ಭದಲ್ಲಿ ನಿಜಾಮನ ಆಳ್ವಿಕೆಯಿದ್ದರೂ ಕೂಡ ದಾಸಪರಂಪರೆಯಲ್ಲಿ ಬರುವ ವಿಜಯದಾಸರು, ಗೋಪಾಲದಾಸರು, ಮೋಹನದಾಸರು ಇವರೆಲ್ಲರೂ ಸುಳಾದಿ, ಕೀರ್ತನೆ, ಹಾಡು, ಕಥನ ಕವನ ಹಾಗೆಯೇ ಗದ್ಯರೂಪದಲ್ಲಿಯೂ ಸಾಹಿತ್ಯವನ್ನು ರಚಿಸಿದರು.

ಹತ್ತೊಂಬತ್ತನೆಯ ಶತಮಾನ ನಮ್ಮ ರಾಷ್ಟ್ರಜೀವನದಲ್ಲಿಯೇ ತುಂಬ ವಿಶಿಷ್ಟವಾದ ಅವಧಿಯಾಗಿದೆ. ಭಾರತೀಯ ಭಾಷೆ–ಸಾಹಿತ್ಯಗಳ ನವೋದಯವು ಈ ಅವಧಿಯಲ್ಲಿ ಚಿಗುರೊಡೆಯಿತು. ನಾವು ಯಾವುದನ್ನು ಆಧುನಿಕ ಸಾಹಿತ್ಯ ಎಂದು ಕರೆಯುತ್ತೇವೆಯೋ ಅದರ ಆರಂಭವಾದದ್ದು ಹಾಗೂ ಹೊಸ ಹೊಸ ಸಾಹಿತ್ಯ ಪ್ರಕಾರಗಳು ಕಾಣಿಸಿಕೊಂಡದ್ದು ಈ ಕಾಲದಲ್ಲಿಯೇ. ಈ ಕಾಲದಲ್ಲಿ ಕಾಣಿಸಿಕೊಂಡ ಸಾಹಿತ್ಯದ ಮತ್ತು ಪುರಾಣ ಇತಿಹಾಸಗಳಿಂದ ದೂರವಾಗಿ ಸಮಾಜ ಜನಜೀವನಗಳಿಗೆ ಹತ್ತಿರವಾಯಿತು. ಮುದ್ರಣ ತಂತ್ರಜ್ಞಾನದಿಂದ ಗ್ರಂಥಪ್ರಕಟಣೆ, ನಿಯತಕಾಲಿಕೆಗಳು, ಪತ್ರಿಕೆಗಳು ಹೊರ ಬಂದವು. ಇವುಗಳಿಂದಾಗಿ ಸಾಹಿತ್ಯ ಅರಮನೆ ಗುರುಮನೆಗಳಿಂದ ಹೊರಬಂದು ಎಲ್ಲರ ಸ್ವತ್ತಾಯಿತು.

ಭಾರತದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಒದಗಿ ಬಂದ ಅಮೂಲ್ಯ ಸಾಮಾಗ್ರಿಯೆಂದರೆ ಮುದ್ರಣಯಂತ್ರ. ಯಾವ ದೇಶದಲ್ಲಿಯೆ ಆಗಲಿ ಮುದ್ರಣವು ಮೊದಲು ಕಾಲದಲ್ಲಿ ಆ ದೇಶವು ಪ್ರಗತಿ ಪಥನದಲ್ಲಿ ಮುನ್ನಡೆದುದು ಐತಿಹಾಸಿಕವಾಗಿ ಸಿದ್ಧ ಮಾತು. ಅದರಂತೆಯೇ ಭಾರತದಲ್ಲಿಯೂ ಕೂಡ ಹಾಗೆಯೇ ಆಯಿತು. ಈ ಮುದ್ರಣಯಂತ್ರವು ಶೈಕ್ಷಣಿಕ ಹಾಗೂ ಸಾಹಿತ್ಯಕ ರಂಗಗಳಲ್ಲಿ ಕ್ರಾಂತಿಯನ್ನುಂಟು ಮಾಡಿತು. ಒಂದು ಕೈಯಲ್ಲಿ ಬೈಬಲ್ ಅದರ ಬೆನ್ನಿಗೇ ಮುದ್ರಣ ಸಾಮಾಗ್ರಿಗಳನ್ನು ಹಿಡಿದುಕೊಂಡು ಬಂದ ಮಿಶನರಿಗಳು ಸ್ವಮತ ಪ್ರಸಾರದ ಕಾರ್ಯದಲ್ಲಿ ತೊಡಗಿದರು. ಈ ಉದ್ದೇಶದಿಂದ ಸಾಹಿತ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ನೇರವಾಗಿ ಪ್ರವೇಶಿಸಿದರು. ಹತ್ತೊಂಬತ್ತನೆಯ ಶತಮಾನದ ಭಾರತಕ್ಕೆ ಪಾಶ್ಚಾತ್ಯ ಸಂಪರ್ಕವು ನಾಲ್ಕು ಬಗೆಯಲ್ಲಿ ಒದಗಿ ಬಂದಿತು. ಒಂದು; ಆಡಳಿತ, ವ್ಯವಹಾರ ಎರಡು; ಮುದ್ರಣಯಂತ್ರ ಮೂರು : ಕ್ರಿಸ್ತಮತ ಪ್ರಚಾರ ನಾಲ್ಕು : ಹೊಸ ಶಿಕ್ಷಣ ಪದ್ಧತಿ ಮತ್ತು ಹೊಸ ವಿಚಾರ ಸರಣಿ.[೫] ಈ ಶತಮಾನದಲ್ಲಿ ಕಂಡುಬಂದ ಸಾಮಾಜಿಕ ಸ್ಥಿತ್ಯಂತರದ ಇನ್ನೊಂದು ವೈಶಿಷ್ಯವೆಂದರೆ, ಭಾರತೀಯರಲ್ಲಿ ಮೂಡಿ ಬಂದ ತಾಕಿಕ ಹಾಗೂ ವ್ಯಕ್ತಿಗತವಾದ ದೃಷ್ಟಿಕೋನ. ಇದುವರೆಗೆ ಮತಧರ್ಮದ ಆವರಣದಲ್ಲಿ ಬೆಳೆದು ಬಂದ ವ್ಯಕ್ತಿಯ ಮನೋವೃತ್ತಿಯು ಸಮಷ್ಟಿಯದಾಗಿತ್ತು. ಪಾಶ್ಚಾತ್ಯಾ ಪ್ರಭಾವದಿಂದ ಮೂಡಿದ ಲೌಕಿಕ ವಿಚಾರಗಳಿಂದಾಗಿ ಜೀವನ ಕ್ರಮವು ಹೆಚ್ಚು ಹೆಚ್ಚು ವ್ಯಕ್ತಿಪರವಾಗುಕ್ತ ನಡೆಯಿತು. ಮತ್ತು ಇಹಲೋಕದ ನಡವಳಿಕೆಗಳಿಗೆ ಪ್ರಾಧಾನ್ಯವನ್ನೀಯ ಬೇಕಾದ ಪರಿಸ್ಥಿತಿಯೂ ತಲೆದೋರಿತು. ಈ ವೈಯಕ್ತಿಕ ನಮೋಭಾವವೂ ಮೇಲೆ ಹೇಳಿದ ಜಿಜ್ಞಾಸಾ ಪ್ರವೃತ್ತಿಯೂ ಮಧ್ಯಮ ವರ್ಗೀಯರಲ್ಲಿಯೇ ಹೆಚ್ಚಾಗಿ ವ್ಯಕ್ತವಾದುವು.

## ೪.೨. ಮುದ್ರಣ ತಂತ್ರಜ್ಞಾನದ ವಿಕಾಸ

ಕೈಬರಹದ ಸ್ವರೂಪ ಹಾಗೂ ಅದರ ತಾಂತ್ರಿಕ ಕೌಶಲ್ಯಗಳಲ್ಲಿ ನಡೆವ ಸುಧಾರಣೆ ಹಾಗೂ ಬದಲಾವಣೆಗಳು ಕೇವಲ ಯಾಂತ್ರಿಕವಾದಂಥವಲ್ಲ. ಅವು ಒಂದು ವ್ಯಕ್ತಿ, ಸಮುದಾಯ, ಸಮಾಜ, ಕೌಶಲ್ಯ ಹಾಗೂ ಕ್ರಿಯಾತ್ಮಕ ಜ್ಞಾನದ ಸ್ವರೂಪದೊಂದಿಗೆ ಪೋಣಿಸಿಕೊಂಡಿರುತ್ತವೆ. ಬರವಣಿಗೆ ಹಾಗೂ ಮುದ್ರಣ ತಂತ್ರಜ್ಞಾನಗಳು ಆಧುನಿಕ ಸಂದರ್ಭದಲ್ಲಿ ಕೈಯ್ಯ ಕೌಶಲ್ಯದೊಂದಿಗೆ ಮನಸ್ಸಿನ ಸೌಂದರ್ಯವಾಗಿಯೂ ಅಭಿನೀತಗೊಂಡಿವೆ. ಸಾವಿರ ಕೋಟಿ ರೂಪಾಯಿಯ ವ್ಯವಹಾರಕ್ಕಾಗಿ ಇಂದು ಬಂಡವಾಳ ಆಕರ್ಷಿಸುತ್ತಿರುವ ಆಧುನಿಕ ಕನ್ನಡದ ಮುದ್ರಣ ತಂತ್ರಜ್ಞಾನಕ್ಕೆ ವಿಶ್ವಕರ್ಮರು ನೀಡಿದ ಕೊಡುಗೆ ಉಪೇಕ್ಷೆಗೆ ಗುರಿಯಾಗಿದ್ದು ದುರಂತವೇ ಸರಿ.

ಆಧುನಿಕಪೂರ್ವ ಹಾಗೂ ಆಧುನಿಕೋತ್ತರ ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಆರ್ಥಿಕ ಹಾಗೂ ರಾಜಕೀಯ ಅಧ್ಯಯನ ಹಾಗೂ ಚರ್ಚೆಗಳಲ್ಲಿ ಪಾಂಚಾಳ ಅಥವಾ ವಿಶ್ವಕರ್ಮ ಸಮುದಾಯದ ಕ್ರಿಯಾಶೀಲ ಕೌಶಲ್ಯಗಳ ಬಗ್ಗೆ ಗಾಢಮೌನ ಆವರಿಸಿದೆ. ಸಾಹಿತ್ಯ ಕಲೆಗಳು ಕೇವಲ ಭಾವನಾತ್ಮಕ ಸೌಂದರ್ಯಗಳಲ್ಲ. ಅವು ಪ್ರಖರ ಪ್ರಯೋಗಶೀಲ ಗುಣವುಳ್ಳವು. ಅವುಗಳನ್ನು ಧರ್ಮ ಅಥವಾ ಪ್ರಭುತ್ವದ ಜಡಪರಿಭಾಷೆಗಳಲ್ಲಾಗಲೀ ಅಥವಾ ತೀರ ಅಕಾಡೆಮಿಕ್ ಪರಿಭಾಷೆಗಳಲ್ಲಿ ನೋಡದೆ ಸಮುದಾಯದ ಸೃಷ್ಟಿಶೀಲ ಶಕ್ತಿಯಾಗಿ ಅಧ್ಯಯನ ಮಾಡಿದಾಗ ಕರ್ನಾಟಕ ಅಲ್ಲದೇ ಭಾರತದ ಮುದ್ರಣ ಚರಿತ್ರೆಯ ಹೊಸ ರೂಪವೊಂದನ್ನು ಪರಿಭಾವಿಸಿಕೊಳ್ಳಲು ಸಾಧ್ಯವಿದೆ.

ಭಾರತದಲ್ಲಿ ಮುದ್ರಣ ತಂತ್ರಜ್ಞಾನವು ಸ್ಥಾಪನೆಯಾಗಿ ಅವುಗಳು ಹಲವಾರು ಕಡೆಗಳಲ್ಲಿ ವಿಸ್ತಾರಗೊಳ್ಳಲು ಮಿಶನರಿ ಜನರ ಆಗಮನವೇ ಮುಖ್ಯಕಾರಣ. ಕರ್ನಾಟಕಕ್ಕೆ ಬಂದಿದ್ದ ಮಿಶನರಿಗಳು 'ಜೆಸುಯಿಟ್ ಸೊಸೈಟಿ' 'ಲಂಡನ್ ಮಿಶನ್' ವೆಸ್ಲಿಯನ್ ಮೆಥಾಡಿಸ್ಟ್ ಮಿಶನ್' ಹಾಗೂ 'ಜರ್ಮನ್ ಇವ್ಯಾಂಜೆ ಲಿಕಲ್ (ಬಾಸೆಲ್‌ಮಿಶನ್)' ಇವುಗಳು ಸಂಸ್ಥೆಗಳಾಗಿದ್ದವು. ಮೊದಲಿನದು ರೋಮನ್ ಕ್ಯಾಥೋಲಿಕ್‌ರಾದರೆ, ಉಳಿದವು ಪ್ರೋಟೆಸ್ಟಂಟ್ ಸಂಸ್ಥೆಗಳು. ನಮ್ಮ ನಾಡಿನಲ್ಲಿ ಮಿಶನರಿ ಚಟುವಟಿಕೆಯು ೧೭ನೆಯ ಶತಮಾನದಷ್ಟು ಹಿಂದಿನ ಕಾಲದ್ದು ಅದನ್ನು ಆರಂಭಿಸಿದವನು ಜೆಸುಯೆಟ್ ಪಾದ್ರಿಯಾದ ಲಿಯೊನಾರ್ಡೊ ಸಿನ್ನಾಮಿ (೧೬೦೯-೧೬೭೬) ಅವನು ಕಾಲವಾದ ಮೇಲೆ ಜೆಸುಯಿಟರ ಮತಾಂತರ ಕಾರ್ಯವು ಮುಂದುವರೆದು ಬೆಂಗಳೂರು ಮಂಗಳೂರುಗಳು ರೋಮನ್ ಕ್ಯಾಥೋಲಿಕ್ ವಸತಿಯ ಪ್ರಮುಖ ಕೇಂದ್ರಗಳಾದವು. ಕ್ರಿ.ಶ. ೧೮೪೦ ರಲ್ಲಿ ಜಾರ್ಬೊನಾ ಎಂಬುವವನು ಮೈಸೂರು ಸಂಸ್ಥಾನದ 'ವಿಕಾರ್ ಎಪೋಸ್ಟಿಲಿಕ್' ಆದಾಗಿನಿಂದ ಕ್ಯಾಥೋಲಿಕರ ಕನ್ನಡ ಚಟುವಟಿಕೆಗಳು ಕಂಡುಬಂದವು. ಒಂದು ಕಡೆ ಕರ್ನಾಟಕವು ಕ್ಯಾಥೋಲಿಕ್ ವಸತಿಯ ಪ್ರದೇಶಗಳ ನೆಲೆ ಹಾಗೆ ಮತ್ತೊಂದು ರೀತಿಯಲ್ಲಿ ಪ್ರೊಟೆಸ್ಟಂಟ್ ಮಿಶನರಿಗಳ ಕಾರ್ಯಾಚರಣೆಗಳ ಬಳಗಾದ ಆರಂಭದ ಭಾರತೀಯ

ಪ್ರದೇಶಗಳಲ್ಲಿ ಕರ್ನಾಟಕವೂ ಒಂದಾಯಿತು. ಮಿಶನರಿಗಳು ಸ್ಥಳೀಯ ಜನರನ್ನು ಕ್ರೈಸ್ತ ಧರ್ಮದ ಕಡೆ ಸೆಳೆಯುವ ಉದ್ದೇಶದಿಂದ ಸಾಮಾಜಿಕ ಹಾಗೂ ಶೈಕ್ಷಣಿಕ, ಸೇವೆಯ ಚಟುವಟಿಕೆಯ ಕಾರ್ಯವನ್ನು ಮಾಡತೊಡಗಿದರು. ಆದರೆ ಮತ ಪ್ರಚಾರ ಮಾಡಲು ಬರುತ್ತಿದ್ದವರಿಗೆ ಇಲ್ಲಿನ ನೆಲ, ಜನ ಎಲ್ಲವೂ ಕೂಡ ಹೊಸದಾಗಿತ್ತು. ಹಾಗೆಯೇ ಜನರೊಡನೆ ಸಂವಹನ ಮಾಡಲು ಬೇಕಾದ ಭಾಷೆಯು ಕೂಡ ಹೊಸದಾಗಿತ್ತು. ಇವೆಲ್ಲಾ ತೊಂದರೆಗಳ ಮಧ್ಯದಲ್ಲಿ ಅವರ ಸ್ವಂತದ ಭಾಷೆ ಭಾಷಾಭ್ಯಾಸ ಮತ್ತು ಪುಸ್ತಕ ರಚನೆ ನಡೆಯುತ್ತಿದ್ದವು. ಭಾಷೆಯ ವಿಶೇಷ ಅಧ್ಯಯನಕ್ಕೆ ಈಗಿನಂತೆ ಹಿಂದಿನ ಕೃತಿಗಳೆಲ್ಲವೂ ಮುದ್ರಣ ರೂಪದಲ್ಲಿ ದೊರೆಯುತ್ತಿರಲಿಲ್ಲ. ದೇಶಿಯ ವಿದ್ವಾಂಸರು ಮುಕ್ತ ಮನಸ್ಸಿನಿಂದ ಇವರಿಗೆ ನೆರವಾಗುತ್ತಿರಲಿಲ್ಲ. ಇಂತಹ ತೊಡಗಿನ ಪರಿಸ್ಥಿತಿಯಲ್ಲಿಯೂ ಕೆಲವು ಮಿಶನರಿಗಳು ಭಾರತೀಯ ಭಾಷೆಗಳಲ್ಲಿ ಪರಿಣಿತಿಯನ್ನು ಹೊಂದಿದುದ್ದು ಅಲ್ಲದೆ ಹಲವು ಮೇಲ್ಮಟ್ಟದ ಸಾಹಿತ್ಯದ ಕೃತಿಗಳನ್ನು ಕೊಡಮಾಡಿದುದು ಸಾಹಸದ ಕಾರ್ಯವಾಗಿತ್ತು. ಮಿಶನರಿಗಳ ಸಾಹಿತ್ಯ ಕಾರ್ಯವು ಒಂದು ನಿಶ್ಚಿತ ಕ್ರಮದಲ್ಲಿ ನಡೆದು ಬಂದಿತು. ತಮ್ಮ ಮಿಶನ್ ಕ್ಷೇತ್ರದ ಭಾಷೆಯನ್ನು ಕಲಿತ ಮೇಲೆ, ಬೈಬಲ್ ಹಾಗೂ ಮತ್ತು ತತ್ವದ ಪುಸ್ತಕಗಳನ್ನು ಅನುವಾದಿಸುವುದು. ಜೊತೆಗೆ ಆ ಭಾಷೆಯ ವ್ಯಾಕರಣ ಕೋಶಗಳನ್ನು ರಚಿಸುವುದು, ಇದು ಒಂದಿ ನಿಟ್ಟಿನ ಕೆಲಸವಾದರೆ ಮಿಶನ್ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಪಠ್ಯ ಪುಸ್ತಕ ರಚನೆಯೂ ನಡೆಯುತ್ತಿತ್ತು. ಇವೆಲ್ಲವುಗಳ ಪ್ರಕಟಣೆಗಾಗಿ ಮಿಶನ್ನಿನ ವತಿಯಿಂದ ಒಂದು ಅಚ್ಚುಕೂಟವನ್ನು ಸ್ಥಾಪಿಸಿ ಮುದ್ರಣ ವಿತರಣಗಳನ್ನು ಕೈಗೊಳ್ಳುವುದು. ಈ ಚೌಕಟ್ಟಿನಲ್ಲಿ ಮಿಶನರಿಗಳ ವಾಙ್ಮಯ ಕಾರ್ಯವು ಮುಂದುವರೆದು ನಮ್ಮ ದೇಶದ ಅನೇಕ ಭಾಷಾ ಸಾಹಿತ್ಯಗಳಲ್ಲಿ ಕೆಲವು ಹೊಸ ಪರಂಪರೆಗಳನ್ನು ಅವರು ಪ್ರಸ್ಥಾಪಿಸಿದರು. ಮಿಶನರಿಗಳ ಗಮನವನ್ನು ಮೊತ್ತ ಮೊದಲು ಸೆಳೆದ ಭಾರತೀಯ ಭಾಷೆಗಳೆಂದರೆ ಕೊಂಕಣಿ. ತಮಿಳು ಮತ್ತು ಬಂಗಾಲಿ, ಗೋವೆಯು (ಪೋಬ) ೧೬ನೆಯ ಶತಮಾನದಿಂದಲೇ ಪೋರ್ಚುಗೀಸರ ಗಂಡುಮೆಟ್ಟಿನ ಸ್ಥಳವಾಗಿದ್ದುದರಿಂದ ಕೊಂಕಣಿಯು ಪಾಶ್ಚಾತ್ಯ ಸಂಪರ್ಕ ಹೊಂದಿದ ಪ್ರಥಮ ಭಾರತೀಯ ಭಾಷೆಯಾಯಿತು. ಅಲ್ಲಿಯ ಜೆಸುಯಿಟ್ ಮಿಶನರಿಗಳು ಕೆಲವು ಕೊಂಕಣಿ ಭಾಷೆಯ ಪುಸ್ತಕಗಳನ್ನು ಮುದ್ರಿಸಿದರು.

### ೪.೩. ಸಾಹಿತ್ಯ ಕೃತಿಗಳ ಪ್ರಕಟಣೆ ಮತ್ತು ಮುದ್ರಣ ಯಂತ್ರ

ಹದಿನೇಳನೆಯ ಶತಮಾನದಲ್ಲಿ ಬಂಗಾಲವು ಪೋರ್ಚುಗೀಸ ಮಿಶನರಿಗಳ ಪ್ರದೇಶವಾಗಿತ್ತು. ಅವರು ಬಂಗಾಲಿ ಕೃತಿಗಳನ್ನು ಹೊರತಂದರು. ನಂತರ ಬಂಗಾಲವು ಬ್ರಿಟಿಷರ ಕೈವಶವಾದಾಗ ಬ್ರಿಟಿಷ್ ಮತ್ತು ಸ್ಕಾಟಿಕ್ ಮಿಶನರಿಗಳ ಸಾಹಿತ್ಯಕ ಚಟುವಟಿಕೆಗಳನ್ನು ಮುಂದುವರೆಸಿದರು. ಇವರಲ್ಲಿ ವಿಲಿಯಂ ಕ್ಯಾರಿಯು ಪ್ರಮುಖನಾದವನು. ಇವನು ಶ್ರೀರಾಮಪುರದಲ್ಲಿ ೧೮೦೦ ರಂದು ತನ್ನ ಮುದ್ರಣ-ಪ್ರಕಟನ ಕಾರ್ಯವನ್ನು ಕೈಗೊಂಡನು ಸಂಸ್ಕೃತ ಮತ್ತು ಬಂಗಾಲಿ ಭಾಷೆಗಳಲ್ಲಿ ಪ್ರೌಢಿಮೆಯನ್ನು ಸಂಪಾದಿಸಿದವನಾದ್ದರಿಂದ ಕಲ್ಕತ್ತೆಯ ಪೋರ್ಟ್ ವಿಲಿಯಂ

ಕಾಲೇಜಿನಲ್ಲಿ ಆ ಭಾಷೆಗಳ ವ್ಯವಹಾರಿಕ ಜ್ಞಾನವನ್ನು ಪಡೆದುಕೊಂಡು ಸುಮಾರು ಐವತ್ತು ಭಾಷೆಗಳಲ್ಲಿ ಬೈಬಲ್ ಅನುವಾದ ವ್ಯಾಕರಣ ಕೋಶಗಳ ರಚನೆ ಮತ್ತು ಮುದ್ರಣವನ್ನು ಕೈಗೊಂಡನು.

ವಿಲಿಯಂ ಕೇರಿಯು ತನ್ನ ನೇತೃತ್ವದಲ್ಲಿ ಬಂಗಾಲ, ಅಸ್ಸಾಮ, ಮುಂಬಾಯಿ, ಗುಜರಾತೀ ಮುಂತಾದ ಪ್ರದೇಶಗಳಲ್ಲಿನ ಆಯಾ ಪ್ರಾಂತ್ಯ ಭಾಷೆಗಳಲ್ಲಿ ಸಂಬಂಧಿಸಿದಂತೆ ಸಾಹಿತ್ಯ ಗ್ರಂಥಗಳನ್ನು ಬರೆಯಿಸುವುದುರ ಜೊತೆಗೆ ಮುದ್ರಣ ವ್ಯವಸ್ಥೆಯನ್ನು ಮಾಡಿದನು. ಇತರ ಭಾಷಾ ಸಾಹಿತ್ಯಗಳಂತೆ ಕನ್ನಡ ಭಾಷಾ ಸಾಹಿತ್ಯದ ಹಾಗೂ ಭಾಷಾಭ್ಯಾಸದ ಪ್ರಕಟಣಾ ಕಾರ್ಯವು ಆಡಳಿತಕ್ಕಾಗಿಯೂ ಧರ್ಮ ಪ್ರಸಾರಕ್ಕಾಗಿಯೂ ಅನಿವಾರ್ಯತೆಯಿಂದಾಗಿ ಬ್ರಿಟಿಷ್ ಅಧಿಕಾರಿಗಳು ಮತ್ತು ಮಿಶನರಿಗಳಿಂದ ಜರುಗಿತು. ಈ ಸಂದರ್ಭದಲ್ಲಿ ಕನ್ನಡ ವ್ಯಾಕರಣ ಶಬ್ದಕೋಶಗಳು ಹೊರ ಮುದ್ರಣಗೊಂಡವು.

'ವಿಲಿಯಂ ಕೇರಿಯು' ಭಾರತೀಯ ಮತ್ತು ಏಶಿಯದ ಕೆಲವು ಭಾಷೆಗಳಲ್ಲಿ ಪುಸ್ತಕಗಳನ್ನು ಬರೆದು ಮುದ್ರಿಸುವ ಒಂದು ಯೋಜನೆಯನ್ನು ಮಾಡಿದನು. ಈ ಯೋಜನೆಯಲ್ಲಿ ಕನ್ನಡ ಭಾಷೆಯ ಗ್ರಂಥಗಳನ್ನು ಮುದ್ರಿಸುವ ಉದ್ದೇಶದಿಂದ ತಂತ್ರಜ್ಞಾನವನ್ನು ಕನ್ನಡ ಭಾಷೆಗೂ ವಿಸ್ತರಿಸುವ ಯೋಚನೆಯಿಂದ ಒಬ್ಬ ಮುನುಶಿಯನ್ನು ಸಂಬಳಕ್ಕೆ ಇಟ್ಟುಕೊಂಡು ಕನ್ನಡವನ್ನು ಕಲಿತನು. ೧೮೦೯ರ ವೇಳೆಗೆ ತನ್ನ ಮುನಶಿಯ ಸಹಾಯದಿಂದ ಬೈಬಲ್ಲಿನ ಕನ್ನಡ ಅನುವಾದವನ್ನು ಮುಗಿಸಿದರೂ ಸಹ ಕನ್ನಡ ಮೊಳೆಗಳು ಸಿದ್ಧವಾಗಿರಲಿಲ್ಲ.[೬] ಕ್ರಿ.ಶ. ೧೮೧೭ರ ಸುಮಾರಿಗೆ ಅವನ ಕೆಲಸಗಾರರಲ್ಲಿ ಒಬ್ಬನಾದ ಮನೋರರನೆಂಬ ವಂಗೀಯನಿಂದ ಕನ್ನಡದ ಮೊಳೆಗಳನ್ನು ಸಿದ್ಧಪಡಿಸಿದನು. "ನಂತರ ಕನ್ನಡ ಭಾಷೆಯ ರಚನೆಯ ಕುರಿತಂತೆ ಆತ ಇಂಗ್ಲೀಷಿನಲ್ಲಿ 'A Grammer of Karntaka Language' ಎಂಬ ತನ್ನ ವ್ಯಾಕರಣ ಗ್ರಂಥವನ್ನು ಬಂಗಾಲದ ಶ್ರೀರಾಮಪುರದ ಪ್ರೆಸ್ಸಿನಲ್ಲಿ ಮುದ್ರಿಸಿದನು."[೭] ಕನ್ನಡ ಭಾಷಿಯ ರಚನೆಯನ್ನು ಕುರಿತಂತೆ ಈ ಗ್ರಂಥ ಕನ್ನಡದ ಮೊತ್ತ ಮೊದಲ ಮುದ್ರಿತ ಕೃತಿಯಾಗಿದೆ. ಹಾಗೂ ಮುದ್ರಣದ ಸೌಭಾಗ್ಯವನ್ನು ಕಂಡ ಕನ್ನಡದ ಮೊದಲ ಕೃತಿ ಎಂಬ ಕೀರ್ತಿಗೂ ಪಾತ್ರವಾಯಿತು.

ಬಂಗಾಲದ ಶ್ರೀರಾಮಪುರದಲ್ಲಿ ಈ ಕೃತಿಯು ಪ್ರಕಟವಾಯಿತು. ಆದರೂ "ವಿಲಿಯಂ ಕೇರಿಗೆ ಕನ್ನಡವನ್ನು ಕುರಿತು ಈ ಇಂಗ್ಲೀಷ್ ಗ್ರಂಥ ಅದು ಬಳಕೆಯಲ್ಲಿರುವ ಪ್ರದೇಶದ ನಡುವೆ ಪ್ರಚುರವಾದರೆ ಕರ್ಣಾಟ ಭಾಷೆಯ ಕಲಿಕೆಯ ಬಗೆಗಿನ ಆಸಕ್ತಿ ಹಾಗೂ ಉತ್ಸುಕತೆ ಹೆಚ್ಚಾಗಬಹುದೆಂಬ ಆಶಾವಾದವು ಆತನದಾಗಿತ್ತು. ಹಾಗೆಯೇ ಪಾರಂಪರಿಕ ವ್ಯಾಕರಣ ರಚನೆಯನ್ನು ಮುರಿದು ಅಂದು ಬಳಕೆಯಲ್ಲಿದ್ದ ಭಾಷಾಶಾಸ್ತ್ರ (Philogy) ಹಿನ್ನಲೆಯಲ್ಲಿ ಅಷ್ಟವಿಧ ವರ್ಗೀಕರಣ ಪದ್ಧತಿಯನ್ನು ಮೊದಲ ಬಾರಿಗೆ ಕನ್ನಡಕ್ಕೆ ಅಳವಡಿಸಿದ ಕೀರ್ತಿ ಅವನದು. ಕನ್ನಡ ಪದ ಮತ್ತು ವಾಕ್ಯಗಳನ್ನು ಅಚ್ಚಿನ ಮೊಳೆಗೆ ಅಳವಡಿಸಿದ ಕೀರ್ತಿ

ವಿಲಿಯಂ ಕೇರಿಗೆ ಸಲ್ಲುತ್ತದೆ. ಹೀಗೆ ಕನ್ನಡ ಪದ ಮತ್ತು ವಾಕ್ಯಗಳನ್ನು ಅಚ್ಚಿನ ಮೊಳೆಗೆ ಅಳವಡಿಸಿದ ಮೊದಲ ಪ್ರಯತ್ನವು ಹೌದು."[೮] ವಿಲಿಯಂ ಕೇರಿಯು ಕನ್ನಡ ಭಾಷಾ ಹಾಗೂ ಸಾಹಿತ್ಯವನ್ನು ಹೊಸ ದೃಷ್ಟಿಕೋನದಿಂದ ಪರಿಶೀಲಿಸುವ ಪ್ರಯತ್ನ ಹಾಗೂ ಕನ್ನಡ ಭಾಷೆ ಮತ್ತು ಸಾಹಿತ್ಯ ಕೃತಿಗಳ ಮುದ್ರಣಕ್ಕೆ ಮಾಡಿದ ತಂತ್ರಜ್ಞಾನದ ವಿಸ್ತರಣೆ ಕನ್ನಡ ಸಾಹಿತ್ಯ ಬೆಳವಣಿಗೆ ಹಾದಿಯ ಮುಖವಾದ ಮೈಲಿಗಲ್ಲ.

'ಎ ಗ್ರಾಮರ್ ಆಫ್ ಕರ್ನಾಟ ಲಾಂಗ್ವೇಜ್' ಕೃತಿಯ ಮುದ್ರಣದ ನಂತರ ೧೮೨೦ ರಲ್ಲಿ 'ಜಾನ್ ಮೆಕ್ಕೆರಲ್ ಎಂಬುವನಿಂದ 'A Grammer of Karnata Language' ಎಂಬ ಪುಸ್ತಕವು ಕಾಲೇಜ್ ಪ್ರೆಸ್ಸಿನಿಂದ ಹೊರ ಬಂದಿತು. ಇವರೆಡೂ ವ್ಯಾಕರಣ ಪುಸ್ತಕಗಳು ಇಂಗ್ಲೀಷಿನಲ್ಲಿ ಬರೆಯಲ್ಪಟ್ಟಿದ್ದು ಅವುಗಳಲ್ಲಿಯ ಉದಾಹರಣೆಗಳನ್ನು ಕನ್ನಡದಲ್ಲಿ ಕೊಡಲಾಗಿದೆ. ಮದ್ರಾಸಿನ ಕಾಲೇಜು ಪ್ರೆಸ್‌ನಲ್ಲಿ ಅಚ್ಚಾದ ಅನಂತರದ ಕನ್ನಡದ ಗ್ರಂಥವೆಂದರೆ ವಿಲಿಯಂ ರೀವ್ ವಿರಚಿತ ಇಂಗ್ಲೀಷ್ ಕನ್ನಡ ಶಬ್ದಕೋಶ(೧೮೨೪). ಇದು ಹೊಸಗನ್ನಡ ಕಾಲದ ಮೊತ್ತ ಮೊದಲಿನ ಕೋಶ ರಚನೆಯ ಪ್ರಯತ್ನವಾಗಿದೆ. ಮುಂದೆ ಬಂಗಾಲದ ಶ್ರೀರಾಮಪುರ ಮತ್ತು ಮದ್ರಾಸಿನಲ್ಲಿ ಕನ್ನಡ ಮುದ್ರಣ ಕಾರ್ಯವು ಹೆಚ್ಚಾಗಿ ನಡೆಯದೆ ನಿಂತು ಹೋಗಿ ಕರ್ನಾಟಕದ ಬಳ್ಳಾರಿಯಲ್ಲಿ ಯಶಸ್ವಿಯಾಯಿತು.

ಧರ್ಮ ಪ್ರಚಾರಕ್ಕಾಗಿ ಜಾನ್ ಹ್ಯಾಂಡ್ಸ್ ಎಂಬುವವನು ಬಳ್ಳಾರಿಗೆ ೧೮೨೦ರ ಸಂದರ್ಭದಲ್ಲಿ ಬಂದನು. ಇವನಿಗೆ ಧರ್ಮಪ್ರಚಾರಕ್ಕಾಗಿ ಬೈಬಲ್ಲಿನ ಸಾವಿರಾರು ಪ್ರತಿಗಳ ಅವಶ್ಯಕತೆ ಉಂಟಾಯಿತು. ಆಗ ಹೊಸ ಒಡಂಬಡಿಕೆ ಎಂಬ ಹೆಸರಿನಲ್ಲಿ ಬೈಬಲ್ಲಿನ ಗ್ರಂಥವನ್ನು ಸಂಪೂರ್ಣವಾಗಿ ಕನ್ನಡ ಭಾಷೆ ಮತ್ತು ಲಿಪಿಯಲ್ಲಿ ೧೮೨೦ ರಲ್ಲಿ ಮದ್ರಾಸಿನ ಕಮರ್ಶಿಯಲ್ ಪ್ರೆಸ್ ಎಂಬಲ್ಲಿ ಮುದ್ರಣ ಮಾಡಿಸಿದನು. ಈ ಕೃತಿಯು ಸಂಪೂರ್ಣವಾಗಿ ಕನ್ನಡ ಭಾಷೆ ಮತ್ತು ಲಿಪಿಯಲ್ಲಿರುವ ಆದ್ಯಗ್ರಂಥ ಎಂಬ ಹೆಸರು ಪಡೆಯಿತು. 'ಧರ್ಮ ಪ್ರಚಾರಕ್ಕಾಗಿ ಇನ್ನೂ ಹೆಚ್ಚಿನ ಪುಸ್ತಕಗಳು ಬೇಕಾದಾಗ ಜಾನ್ ಹ್ಯಾಂಡ್ಸ್‌ನು ಬಳ್ಳಾರಿ ಮತ್ತು ಮದ್ರಾಸ್‌ಗಳ ನಡುವೆ ಓಡಾಡಬೇಕಿತ್ತು. ಆದುದರಿಂದ ಈ ಓಡಾಟದ ತೊಂದರೆಯನ್ನು ತಪ್ಪಿಸಲು ಬಳ್ಳಾರಿಯಲ್ಲಿಯೇ ಮುದ್ರಣಯಂತ್ರವನ್ನು ಸ್ಥಾಪಿಸಲು ಪ್ರಯತ್ನಿಸಿದನು ಇವನ ಪ್ರಯತ್ನದ ಫಲವಾಗಿ ೧೮೨೭ರಲ್ಲಿ ಮುದ್ರಣಯಂತ್ರ ಸ್ಥಾಪಿತವಾಯಿತು.[೯] ಕರ್ನಾಟಕದಲ್ಲಿ ಕನ್ನಡ ಗ್ರಂಥಗಳ ನಿಯಮಿತವಾದ ಮುದ್ರಣವು ಮೊದಲಾದದರಿಂದ ಈ ವರ್ಷವು ಐತಿಹಾಸಿಕವಾಗಿ ಮಹತ್ವವುಳ್ಳದಾಗಿದೆ.

'ಬಳ್ಳಾರಿ ಮಿಶನ್ ಪ್ರೆಸ್ಸಿನಲ್ಲಿ ಕನ್ನಡ ತೆಲಗು ಎರಡು ಭಾಷೆಗಳಲ್ಲಿ ಪುಸ್ತಕಗಳ ಮುದ್ರಣ ನಡೆದಿದ್ದರೂ ಕನ್ನಡದ ಮೊಳೆಗಳು ಪ್ರತ್ಯೇಕವಾಗಿ ಇರಲಿಲ್ಲವಾದ್ದರಿಂದ ತೆಲುಗು ಲಿಪಿಯಲ್ಲಿಯೇ ಕನ್ನಡ ಗ್ರಂಥಗಳನ್ನು ಮುದ್ರಿಸಲಾಗುತ್ತಿತ್ತು. ಕ್ರಿ.ಶ. ೧೮೩೭ ರಲ್ಲಿ ಜಾನ್ ಹ್ಯಾಂಡ್ಸ್‌ನು ಲಂಡನ್ನಿನಿಂದ ಕನ್ನಡದ ಮೊಳೆಗಳನ್ನು ಮಾಡಿಸಿ ತಂದನು. ಜೊತೆಗೆ ಮುದ್ರಕನನ್ನು ಕರೆಯಿಸಿದನು. ಹ್ಯಾಂಡ್ಸ್‌ನ

ಉತ್ತಾರಾಧಿಗಳಾದ ಜಾನ್ ರೀಡ್ ಮತ್ತು ಪೇನ್ ಇವರ ನೇತೃತ್ವದಲ್ಲಿ ಮುದ್ರಣ ಕಾರ್ಯವು ಬಳ್ಳಾರಿಯ ಪ್ರೆಸ್‌ನಲ್ಲಿ ೧೮೪೦ ರ ವರೆಗೂ ಸಾಗಿತು. ನಂತರ 'ಪೇನ್' ಕಾಲರಾ ಕಾಯಿಲೆಯಿಂದ ಮರಣ ಹೊಂದಿದ ಮೇಲೆ ಕ್ರಿ.ಶ. ೧೮೪೨ ರಲ್ಲಿ ಕ್ರಮೇಣ ಕುಂಠಿತಗೊಂಡು ೧೮೫೪ರ ಸುಮಾರಿಗೆ ನಿಂತುಹೋಯಿತು.[೧೦] ಬಳ್ಳಾರಿಯಲ್ಲಿ ಮುದ್ರಣಯಂತ್ರ ನಿಂತುಹೋಗುವ ಹೊತ್ತಿಗಾಗಲೇ ಧರ್ಮಪ್ರಸಾರ ಕಾರ್ಯಕ್ಕಾಗಿಯೇ ಬಂದಿದ್ದ ಇತರ ಮಿಶನರಿಗಳಾದ ವೆಸ್ಲಿಯನ್ನರು ಮತ್ತು ಬಾಸೆಲ್ ಮಿಶನ್ನನವರು ಬೆಂಗಳೂರು ಮತ್ತು ಮಂಗಳೂರುಗಳಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿದರು. 'ಕ್ರಿ.ಶ. ೧೮೪೦ ರಲ್ಲಿ ವೆಸ್ಲಿಯನ್ನರು ಬೆಂಗಳೂರಿನಲ್ಲಿ ಕ್ರಿ.ಶ. ೧೮೫೧ ರಲ್ಲಿ ಬಾಸೆಲ್ ಮಿಶನ್ನಿನವರು ಮಂಗಳೂರಿನಲ್ಲಿ ಸ್ಥಾಪಿಸಿದರು. ವೆಸ್ಲಿಯನ್ನರು 'ಬೈಬಲ್' ಗ್ರಂಥವನ್ನು ಮಾತ್ರ ಮುದ್ರಿಸುತ್ತಿದ್ದರು. ಆದರೆ ಬಾಸೆಲ್ ಮಿಶನ್ನಿನವರು ಕನ್ನಡ ಲಿಪಿ ಸುಧಾರಣೆಯ ಮಹತ್ ಕಾರ್ಯವನ್ನು ಮಾಡತೊಡಗಿದ್ದುದು ಮುಖ್ಯ ಸಂಗತಿಯಾಗಿದೆ. ಉದಾ : ಈ=ಇೀ; ಕೂ=ಕುೀ; ಅಕ್ಕ=ಅಕ್‌ಕ; ಸೂರ್ಯ=ಸುೀರ್‌ಯ ಸ್ವಾತಂತ್ರ್ಯ=ಸ್‌ವಾತಂತ್‌ರ್‌ಯ ಇತ್ಯಾದಿ ಇವುಗಳಲ್ಲಿ ಒತ್ತಕ್ಷರಗಳನ್ನು ಬರೆಯುವುದೇ ಒಂದು ಸಾಲಿನಲ್ಲಿ ಬರೆಯುವುದು ಎದ್ದು ತೋರುವ ಸುಧಾರಣೆಯಾಗಿದ್ದಿತು.[೧೧] ಮೊಗ್ಲಿಂಗ್ ಸಂಪಾದಿಸಿದ ರಾಜೇಂದ್ರನಾಮೆಯಲ್ಲಿ (ಕ್ರಿ.ಶ. ೧೮೫೨) ಇದು ಒಂದು ಕನ್ನಡದಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಿದೆ. ಲಿಪಿ ಸೌಷ್ಟವದ ದೃಷ್ಟಿಯಿಂದ ಇಲ್ಲಿಯ ಮೊಳೆಗಳು ಬಾಸೆಲ್ ಮಿಶನ್ನಿಗೆ ಸರಿಮಿಗಿಲೆನಿಸಿವೆ. ಕ್ರಿ.ಶ. ೧೮೯೦ರ ಸುಮಾರಿಗೆ ತಮಗೆ ಬೇಕಾಗಿರುವ ತಮ್ಮದೇ ಆದ ರೀತಿಯಲ್ಲಿ ಮೊಳೆ ತಯಾರಿಕೆಯ ವಿಭಾಗವನ್ನು ಆರಂಭಿಸಿದರು. ಇದೇ ಸಂದರ್ಭಕ್ಕೆ ಅಕ್ಷರ ಶಿಲ್ಪಿಯೆನಿಸಿದ ಅತ್ತಾವರ ಅನಂತಚಾರಿಯು ಕೆಲವು ವರ್ಷ ಕೆಲಸಮಾಡಿ ವಿವಿಧ ಗಾತ್ರಗಳ ಹಾಗೂ ಮೇಲ್ಮಟ್ಟದ ಮೊಳೆಗಳನ್ನು ಸಿದ್ಧಗೊಳಿಸಿದನು. ಎಲ್ಲೆಡೆ ಕಾಣುವ ಕನ್ನಡ ಮೊಳೆಗಳಿಗೆ ಅನಂತಚಾರಿಯ ಕೌಶಲ್ಯವೇ ಹಿನ್ನಲೆಯಾಗಿದ್ದು ಇದರಿಂದ ಮುದ್ರಣ ಕಾರ್ಯದಲ್ಲಿ ಮಂಗಳೂರು ಕರ್ನಾಟಕದಲ್ಲಿ ಉತ್ತಮ ಸ್ಥಾನ ಹೊಂದಿದವು.

ಮಿಶನರಿ ಮುದ್ರಣದ ಜೊತೆಗೆ ಸರಕಾರಿ ಅಚ್ಚುಕೂಟಗಳು ಪ್ರಾರಂಭವಾದವು. ಮದ್ರಾಸ ಮುಂಬಯಿ ಮತ್ತು ಮೈಸೂರು ಈ ಮೂರು ಅಧಿಪತ್ಯಗಳಲ್ಲಿ ಆಡಳಿತಕ್ಕಾಗಿಯೂ ಶೈಕ್ಷಣಿಕ ಕಾರ್ಯಕ್ಕಾಗಿಯೂ ಮುದ್ರಣವು ಅನಿವಾರ್ಯವಾಗಿದ್ದರಿಂದ ಆ ಸರಕಾರಗಳು ಮೊಳೆಗಳ ತಯಾರಿಕೆಯಿಂದ ಮೊದಲ್ಗೊಂದು ಗ್ರಂಥಗಳ ದಿಸೆಯಲ್ಲಿ ಕಾರ್ಯ ಪ್ರಾರಂಭಿಸಿದವು. ಮುಂಬೈ ಪ್ರಾಂತ್ಯದ ಕಲ್ಲಚ್ಚಿನ ಪ್ರೆಸ್‌ನಲ್ಲಿ ೧೮೫೬ ರಲ್ಲಿ ಸಣ್ಣ ಹಿತೋಪದೇಶ ಎಂಬ ಪುಸ್ತಕವನ್ನು ಪ್ರಕಟಿಸಿದರು. ಸರಕಾರಿ ಅಂಗ ಸಂಸ್ಥೆಯಾಗಿದ್ದ ಎಜುಕೇಶನ್ ಸೊಸೈಟಿಯವರು ನಡೆಸುತ್ತಿದ್ದ ಪ್ರೆಸ್‌ನಲ್ಲಿ ವೆಂಕಟ ರಂಗೋಕಟ್ಟೀಯವರ 'ಅರೆಬಿಯನ್ ನೈಟ್ಸ್‌ನ' ಅನುವಾದ ಪುಸ್ತಕ ಕ್ರಿ.ಶ. ೧೮೬೬ ರಲ್ಲಿ ಮುದ್ರಣವಾಯಿತು. ಹಾಗೂ ೧೮೬೯ ರಲ್ಲಿ ಶಾಕುಂತಲದ ಮೊಟ್ಟ ಮೊದಲಿನ ಕನ್ನಡ ಅನುವಾದವೆನಿಸಿದ ಚುರಮುರಿ ಶೇಷಗಿರಿರಾಯರ ಶಾಕುಂತಲ ನಾಟಕ ಮುದ್ರಣವಾಯಿತು.

ನಂತರ ಮುಂಬೈ ಸರಕಾರದವರು ಮಂಗಳೂರು ಧಾರವಾಡ ಹಾಗೂ ಬೆಂಗಳೂರಿನ ಕಡೆ ಹೊರಳಿದರು. ಬೆಂಗಳೂರು ನಗರದಲ್ಲಿ 'ಓರ್ವ' ಮೆಜಿಸ್ಟ್ರೇಟನು ಸರಕಾರದ ವತಿಯಿಂದ ಕ್ರಿ.ಶ. ೧೮೪೨-೪೩ ರಲ್ಲಿ ಕಲ್ಲಚ್ಚಿನ ಮುದ್ರಣವನ್ನು ಆರಂಭಿಸಿದನು. ಮೈಸೂರು ಸಂಸ್ಥಾನದ ಸರಕಾರೀ ಮುದ್ರಣಾಲಯವು ಕ್ರಿ.ಶ. ೧೮೪೦ರ ಸುಮಾರಿಗೆ ಜಾನ್‌ಗ್ಯಾಕಿಟ್‌ನ ನೇತೃತ್ವದಲ್ಲಿ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂತು. ಇಲ್ಲಿ ಕನ್ನಡ ಶಾಸನಗಳ ಹಳೆಯ ಕಾವ್ಯಗಳ ಮುದ್ರಣ ಆರಂಭವಾಯಿತು. 'ಹಿತಭೋಧಿನಿ' ಎಂಬುದು ಸುಪ್ರಸಿದ್ಧ ಪತ್ರಿಕೆ. ಮೈಸೂರು ನಗರದಲ್ಲಿ ಈ ಸರಕಾರಿ ಮುದ್ರಣಾಲಯದ ಶಾಖೆಯನ್ನು ತೆರೆಯಲಾಯಿತು. ಕ್ರಿ.ಶ. ೧೮೫೦ ಮತ್ತು ೧೮೬೦ರ ದಶಕಗಳಲ್ಲಿ ಮುಮ್ಮಡಿ ಕೃಷ್ಣರಾಜರ ಹೆಸರಿನಲ್ಲಿ ಕೆಲವು ಕೃತಿಗಳು ಅಚ್ಚಾಗಿವೆ. ಅವುಗಳಲ್ಲಿ 'ಸಂಖ್ಯಾರತ್ನ ಕೋಶ' ಕ್ರಿ.ಶ. ೧೮೬೦ರ ಸುಮಾರಿಗೆ ಮುದ್ರಿತವಾದ ಮುಮ್ಮಡಿ ಕೃಷ್ಣರಾಜರ ಇನ್ನೊಂದು ಕೃತಿ ಸೌಗಂಧಿಕಾ ಪರಿಣಯವು 'ಅರ್ಧಫುಲ್‌ಸ್ಕೇಪ್' ಆಕಾರದಲ್ಲಿ ೧೨೭೦ ಪುಟಗಳನ್ನು ಒಳಗೊಂಡಿದೆ[೨] ಹಾಗೂ ಚಿತ್ರಗಳಿಂದ ನಿಬಿಡವಾಗಿದೆ. ಇಲ್ಲಿಯವರೆಗೂ ಅಕ್ಷರಗಳನ್ನು ಮಾತ್ರ ಮುದ್ರಣ ಮಾಡುತ್ತಿದ್ದ ಮುದ್ರಣಾಲಯಗಳು ನಂತರ ಚಿತ್ರವನ್ನು ಸಹ ಮುದ್ರಣ ಮಾಡುತ್ತಿರುವುದು ಮುದ್ರಣವು ಪ್ರಬುದ್ಧವಾಗಿತ್ತು ಎನ್ನುವುದಕ್ಕೆ ನಿದರ್ಶನ.

ಸರಕಾರಿ ಅಚ್ಚುಕೂಟಗಳಂತೆಯೇ, ಖಾಸಗಿ ವ್ಯಕ್ತಿಗಳಿಗೂ ಮುದ್ರಣ ಚಟುವಟಿಕೆಗಳನ್ನು ಕಂಡು ಆಸಕ್ತಿ ಉಂಟಾಗಿ ಇದನ್ನು ಲಾಭದಾಯಕ ಉದ್ಯಮವೆನ್ನುವಂತೆ ತೋರಿ ವೈಯಕ್ತಿಕ ಮುದ್ರಣಗಳ ಸ್ಥಾಪನೆಯಾದವು. ಇಂತಹ ವೈಯಕ್ತಿಕ ಮುದ್ರಣಗಳು ಮುಂಬಯಿ ಕರ್ನಾಟಕದವರಲ್ಲಿ ಇದೇ ಸಂದರ್ಭದಲ್ಲಿ ನಾಡಿನ ಅನೇಕ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳು ವ್ಯವಸ್ಥಿತವಾಗಿ ನೆಲೆಗೊಂಡಿದ್ದವು. ಇದರಿಂದ ಸಾಕ್ಷರತೆ ಹೆಚ್ಚುತ್ತಿದ್ದು ಸರಕಾರವು ಪಠ್ಯಪುಸ್ತಕಗಳನ್ನು ಒದಗಿಸುವ ವಿಚಾರದಲ್ಲಿ ಪೂರ್ಣವಾಗಿ ಕೈಗೊಂಡಿರಲಿಲ್ಲ. ಒಂದು ಕಡೆ ನವೀನ ಅಕ್ಷರಸ್ಥರ ಲಘು ವಾಚನಕ್ಕಾಗಿ ಪುಸ್ತಕಗಳು ಬೇಕೆನಿಸಿದವು. ಜನಸಾಮಾನ್ಯರ ಬಾಯಲ್ಲಿ ನಲಿಯುತ್ತಿದ್ದ ಸರ್ವಜ್ಞನ ವಚನಗಳು ಮತ್ತು ಲಾವಣಿ, ದುಂದುಮೆ ಪದಗಳು-ಅದರಂತೆ ಜೈಮಿನಿ ಭಾರತ, ರಾಜಶೇಖರ ವಿಳಾಸ, ಕುಮಾರವ್ಯಾಸ. ಭಾರತ, ಮೊದಲಾದ ರಸಭರಿತ ಕಾವ್ಯಗಳು, ಧಾರ್ಮಿಕ ಗ್ರಂಥಗಳು, ಸ್ತೋತ್ರಗಳು ಅಲ್ಲದೇ ಶೃಂಗಾರದ ಹಾಗೂ ನೀತಿ ಬೋಧಕವಾದ ಪುಸ್ತಕಗಳು ಮುದ್ರಣಗೊಂಡವು.[೧೩]

ಮುದ್ರಣ ಯಂತ್ರಗಳು ನಾಡಿನೆಲ್ಲೆಡೆ ಹಲವಾರು ಕಡೆಗಳಲ್ಲಿ ಸ್ಥಾಪನೆಯಾದಂತೆ ಸಾಹಿತ್ಯಕ ಚಟುವಟಿಕೆಗಳೂ ಕೂಡ ಶ್ರೀಘ್ರವಾಗಿ ನಡೆಯಲಾರಂಭಿಸಿದವು. ಕ್ರೈಸ್ತ ಮಿಶನರಿಗಳಿಂದ, ದೇಶಿ ಪಂಡಿತರಿಂದ, ವಿದ್ವಾಂಸರಿಂದ ಹಾಗೂ ಹಸ್ತಪ್ರತಿ ಸಂಸ್ಥೆಗಳಿಂದ, ಆಧುನಿಕ ವಿದ್ವಾಂಸರಿಂದ ಸಾಹಿತ್ಯ ವಿಷಯಕ್ಕೆ ಸಂಬಂಧಪಟ್ಟಂತೆ ಹಸ್ತಪ್ರತಿಗಳ ಸಂಗ್ರಹ, ಸಂಪಾದನೆ, ಮತ್ತು ಪ್ರಕಟಣೆ ಈ ಮೂರು ಹಂತದಲ್ಲಿ ಸಾಹಿತ್ಯ ಕೃತಿಗಳು ಹೊರಬಂದವು.

ವಿಲಿಯಂ ಕೇರಿಯು ಪ್ರಕಟಿಸಿದ 'ಎ ಗ್ರಾಮರ್ ಆಫ್ ಕರ್ನಾಟ ಲಾಂಗ್ವೇಜ್' ಎಂಬ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಕೃತಿಯ ಮುದ್ರಣ ಪೂರ್ವದಲ್ಲಿ ಬ್ರಿಟಿಷ್ ಅಧಿಕಾರಿಗಳಾಗಿ ಕರ್ನಾಟಕಕ್ಕೆ ಬಂದ ಕೆಲವರು ಕನ್ನಡ ಭಾಷೆ, ಸಾಹಿತ್ಯ ಇತಿಹಾಸಕ್ಕೆ ಸಂಬಂಧಪಟ್ಟಂತಹ ದಾಖಲೆಗಳನ್ನು ಸಂಗ್ರಹ ಮಾಡಿದ್ದರು. ಅವರಲ್ಲಿ ಮೆಕೆಂಝಿ, ಮತ್ತು ಬುಕನನ್ನರ ಪಾತ್ರ ಮುಖ್ಯವಾದುದು. "ಕ್ರಿ.ಶ. ೧೭೮೩ ರಲ್ಲಿ ಮದ್ರಾಸ್ ಕೆಲಸದ ಅವಧಿಯಲ್ಲಿ ದಕ್ಷಿಣ ಭಾರತದ ೪೦ ಸಾವಿರ ಮೈಲು ಪ್ರದೇಶವನ್ನು ಸುತ್ತಿ ಶಾಸನ, ಹಸ್ತಪ್ರತಿ ಹಾಗೂ ಪುರಾತನ ವಸ್ತುಗಳನ್ನು, ಐತಿಹ್ಯ, ಸ್ಥಳಪುರಾಣ ಮೊದಲಾದವುಗಳನ್ನು ಕಲೆ ಹಾಕಿದನು. ಮೈಸೂರಿನ ಸರ್ವೆ ಮಾಡುವ ಕಾಲದಲ್ಲಿ ಮೆಕೆಂಝಿ ೧೭೦೦ ಶಿಲಾಲೇಖ, ಮತ್ತು ತಾಮ್ರ ಶಾಸನ ೬೦೦ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದನು."[೧೪] ಹಸ್ತಪ್ರತಿಗಳನ್ನು ಸಂಗ್ರಹಿಸಿದುದಲ್ಲದೆ ಮೆಕೆಂಝಿಯು ತನಗೆ ದೊರೆತಿದ್ದ ಕನ್ನಡ ಕೃತಿಗಳನ್ನು ಪುರಾಣ, ಇತಿಹಾಸ, ಕಾವ್ಯ, ಕಥನ, ಶಾಸ್ತ್ರಗಳು, ಜೈನವಾಙ್ಮಯ ಎಂಬುದಾಗಿ ವಿಂಗಡಿಸಿದ್ದಾನೆ. ಮುದ್ರಣವಿಲ್ಲದ ಕಾಲದಲ್ಲಿ, ಜನರಲ್ಲಿ ಕನ್ನಡ ಕೃತಿಗಳಾವುವು ಎಂಬ ಸ್ಥೂಲ ಕಲ್ಪನೆಯನ್ನು ಮೆಕೆಂಝಿ ಕನ್ನಡ ಕೃತಿಗಳ ವಿಂಗಡನಾ ಪರಿಚಯದ ಕಾರ್ಯ ಮುಖ್ಯವಾಗಿದೆ. ಇದಲ್ಲದೆ ದೇವಚಂದ್ರನ ರಾಜಾವಳೀ ಕಥೆಯ ರಚನೆಯಲ್ಲೂ ಮೆಕೆಂಝಿ ಪ್ರಮುಖ ಪಾತ್ರ ವಹಿಸಿದ್ದಾನೆ. ಕನ್ನಡ ನಾಡಿಗೆ ಮುದ್ರಣ ತಂತ್ರಜ್ಞಾನ ಬರುವುದಕ್ಕಿಂತಲೂ ಮುಂಚೆ ಮೆಕೆಂಝಿಯು ಮಾಡಿದ ಸಂಗ್ರಹ ಕನ್ನಡ ಸಾಹಿತ್ಯ ವಿಷಯಕ್ಕೆ ಸಂಬಂಧಪಟ್ಟಂತಹ ಹಸ್ತಪ್ರತಿ ಸಂಗ್ರಹ ಕಾರ್ಯ ಮುಂದಿನ ಅನೇಕ ಮಿಶನರಿ ಧರ್ಮ ಪ್ರಚಾರಕರು ಹಾಗೂ ಅಧಿಕಾರಿಗಳಲ್ಲಿ ಆಸಕ್ತಿ ಮೂಡಿ ಗ್ರಂಥ ಸಂಪಾದನೆ ಕಾರ್ಯದಲ್ಲಿ ತೊಡಗಿ ಹಲವಾರು ಕೃತಿಗಳನ್ನು ಪ್ರಕಟಿಸಿದರು.

ಬಾಸೆಲ್‌ಮಿಶನ್ನಿನಲ್ಲಿ ಧರ್ಮ ಪ್ರಚಾರ ಕಾರ್ಯಕ್ಕಾಗಿ ಹರ್ಮನ್ ಮೊಗ್ಲಿಂಗ್‌ನು ಕ್ರಿ.ಶ. ೧೮೩೬ ರ ಕೊನೆಯಲ್ಲಿ ಮಂಗಳೂರಿಗೆ ಬಂದನು. ಇವನು 'ಬಿಬ್ಲಿಯಾಥಿಕಾ ಕರ್ನಾಟಿಕಾ ಎಂಬ ಮಾಲಿಕೆಗಳನ್ನು ಆರಂಭಿಸಿ ಅದರಲ್ಲಿ ತಾನು ಪತ್ತೆ ಹಚ್ಚಿದ ಕೃತಿಗಳನ್ನು ಪ್ರಕಟಿಸುತ್ತಾ ಬಂದನು. ೧೮೪೮ರ ಲ್ಲಿ 'ಜೈಮಿನಿ ಭಾರತ' ೧೮೪೯ ರಲ್ಲಿ 'ತೊರವೆ ರಾಮಾಯಣ' ೧೮೫೨ ರಲ್ಲಿ 'ದಾಸರ ಪದಗಳು' ೧೮೬೫ ರಲ್ಲಿ 'ಹರಿಭಕ್ತಿಸಾರ', ಕುಮಾರವ್ಯಾಸ ಭಾರತ ೧೮೫೦ ರಲ್ಲಿ 'ಬಸವಪುರಾಣ', ೧೮೫೧ ರಲ್ಲಿ 'ಚೆನ್ನಬಸವಪುರಾಣ'[೧೫] ಮುಂತಾದ ಹಲವಾರು ಪ್ರಾಚೀನ ಕೃತಿಗಳನ್ನು ಬೆಳಕಿಗೆ ತಂದನು. ಈ ಸಂದರ್ಭದಲ್ಲಿಯೇ ಜಾನ್‌ಗ್ಯಾರೆಟ್‌ನಿಂದ ೧೮೬೮ ರಲ್ಲಿ ಹಲವು ಹಸ್ತಪ್ರತಿಗಳ ಸಂಪಾದನಾ ನೆರವಿನಿಂದಾಗಿ ಶಬ್ದಮಣಿದರ್ಪಣವು ಪ್ರಕಟವಾಯಿತು. ಮೊಗ್ಲಿಂಗ್‌ನು ಕನ್ನಡ ಕೃತಿಗಳನ್ನು ಪ್ರಕಟಣೆ ಮಾಡುವುದರ ಜೊತೆಗೆ ತನ್ನ ಕೆಲವೊಂದು ಕೃತಿಗಳನ್ನು ರಚಿಸಿದನು. 'ಜಾತಿ ವಿಚಾರಣೆ' (೧೮೪೫) ದೇವ ವಿಚಾರಣೆ (೧೮೫೨) ಯಾತ್ರಿಕನ ಸಂಚಾರ ಇವಲ್ಲದೆ ಕನ್ನಡ ಕನ್ನಡ ಪತ್ರಿಕಾ ಪ್ರಪಂಚಕ್ಕೂ ಅವರೇ ಮೊದಲಿಗರಾಗಿ ಕ್ರಿ.ಶ. ೧೮೪೩-೪೪ ರಲ್ಲಿ ಮಂಗಳೂರು ಸಮಾಚಾರದ ಪ್ರಕಟನೆ ಮಾಡಿದರು.

ಶುದ್ಧ ಸಾಹಿತ್ಯದ ದೃಷ್ಟಿಯಿಂದ. ಮೊಗ್ಲಿಂಗ್ ಸಲ್ಲಿಸಿದ ಸೇವೆ ಶ್ರೇಷ್ಠವಾದುದಾಗಿದೆ. ಮೊಗ್ಲಿಂಗ್‌ರ ನಂತರ ಗಾಡ್ ಪ್ರೈ ವೈಗ್ಲೆಯು ZDMG ಪತ್ರಿಕೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಕುರಿತು ಸವಿವರವಾದ ಲೇಖನವನ್ನು ೧೮೪೬ರಲ್ಲಿ. ಬರೆದನು. ಇದು ವೈಗ್ಲೆ ಕನ್ನಡಕ್ಕಾಗಿ ಮಾಡಿದ ಒಂದು ಮಹತ್ವಪೂರ್ಣವಾದ ಕಾರ್ಯ. ಕನ್ನಡ ಸಾಹಿತ್ಯವು ವಿಶಾಲವು ಪ್ರೌಢವೂ ಆಗಿದ್ದು ಮಿಶನರಿಗಳಿಗೆ ತಮ್ಮ ಧರ್ಮ ಪ್ರಚಾರ ಕಾರ್ಯದಲ್ಲಿ ಅದನ್ನು ಅಭ್ಯಾಸ ಮಾಡಲು ವೇಳೆಸಿಗುತ್ತಿಲ್ಲವೆಂಬ ಕಾರಣದಿಂದ ಅದರ ಸಾಹಿತ್ಯ ಚರಿತ್ರೆಯನ್ನು ತಾನು ಕೊಡುತ್ತಿರುವುದಾಗಿ ಆ ಲೇಖನದಲ್ಲಿ ಹೇಳಿಕೊಂಡಿದ್ದಾನೆ. ವೈಗ್ಲೆಯಂತೆಯೇ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಿದವರಲ್ಲಿ ಫರ್ಡಿನಾಂಡ್ ಕಿಟೆಲ್ ಕೂಡ ಒಬ್ಬರು. ಕ್ರಿ.ಶ. ೧೮೭೨ ರಲ್ಲಿ 'ಶಬ್ದಮಣಿದರ್ಪಣ'ವನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದರು. ಕ್ರಿ.ಶ. ೧೮೭೨ ಕ್ಕೂ ಮೊದಲು ಕೆಲವು ಹಳಗನ್ನಡ ಕೃತಿಗಳು ಪ್ರಕಟವಾಗಿದ್ದರೂ ಒಂದು ಶಾಸ್ತ್ರೀಯವಾದ ವ್ಯವಸ್ಥಿತ ರೂಪದಲ್ಲಿ ಪ್ರಕಟಗೊಂಡಿರಲಿಲ್ಲ. ಆದರೆ ಕಿಟೆಲ್‌ರವರು ವಿವಿಧ ಹಸ್ತಪ್ರತಿಗಳ ಕೂಲಂಕಷ ಪರಿಶೀಲನೆ, ಪಾಠಾಂತರಗಳ ಅಡಿಟಿಪ್ಪಣಿ, ಪಠ್ಯಭಾಗದ ಸುಸ್ಪಷ್ಟರೂಪ, ಸವಿವರ ಪೀಠಿಕೆ, ಅನುಬಂಧ ಈ ಬಗೆಯ ಗ್ರಂಥ ಸಂಪಾದನೆಯ ಮಾರ್ಗವನ್ನು ಕನ್ನಡಗರಿಗೆ ತೋರಿಸಿಕೊಟ್ಟರು. "ಆಧುನಿಕ ರೀತಿಯಲ್ಲಿ ಸಂಪಾದಿತವಾದ ಮೊತ್ತ ಮೊದಲಿನ ಪ್ರಕಟಣೆಯೇ ಶಬ್ದಮಣಿದರ್ಪಣ. ಈ ಕೃತಿಯು ವ್ಯಾಕರಣದ ಅಧ್ಯಯನ ಸಂಶೋಧನೆಗೆ ತಾಯಿಬೇರಾಗಿದೆ."[೯] ಮತ್ತೊಂದು ಕೃತಿ ನಾಗವರ್ಮನ 'ಛಂದೋಂಬುಧಿಯನ್ನು ೧೮೭೫ ರಲ್ಲಿ ಪ್ರಕಟಿಸಿದರು. ಇವರ ಮತ್ತೊಂದು ಮಹತ್ವದ ಕೆಲಸವೆಂದರೆ ಕನ್ನಡ-ಇಂಗ್ಲಿಷ್ ಶಬ್ದಕೋಶ. ಇಂತಹ ಅಮೂಲ್ಯವಾದ ಸಾಹಿತ್ಯಕ ಕೊಡುಗೆ ಕನ್ನಡ ಭಾಷೆಗೆ ನೀಡಿದ್ದು ಬಾಸೆಲ್ ಮಿಶನ್ನಿನ ಮುಖಾಂತರ. ಹೊಸಗನ್ನಡ ಸಾಹಿತ್ಯರಂಗದಲ್ಲಿ ಇತರ ಯಾವುದೇ ಮಿಶನರಿ ಸಂಸ್ಥೆಗಳಿಗಿಂತ ಬಾಸೆಲ್ ಮಿಶನ್ನಿನ ಪಾತ್ರ ಹಿರಿದಾಗಿದೆ. ಈ ಮಿಶನ್ನಿನ ಮುಖಾಂತರ ಧರ್ಮ ಪ್ರಚಾರಕ್ಕೆಂದು ಬಂದಿದ್ದ ಅನೇಕ ಮೇಧಾವಿಗಳು ಗ್ರಂಥ ರಚನೆ ಮತ್ತು ಮುದ್ರಣ ಕ್ಷೇತ್ರದಲ್ಲಿ ದುಡಿದರು. ಅರವತ್ತು ವರ್ಷಗಳ ಕಾಲಾವಾಧಿಯಲ್ಲಿ ಅನೇಕ ಹೊಸ ವಿಚಾರಗಳನ್ನು, ನವೀನ ರೂಪಗಳನ್ನು ಸಾಹಿತ್ಯ ರಂಗದಲ್ಲಿ ಪ್ರತಿಷ್ಠಾಪಿಸಿ ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತ ಸ್ಥಾನ ಪಡೆದಿದ್ದಾರೆ.

ಕಿಟಲ್ ನಂತರ ಬಿ.ಎಲ್.ರೈಸರು ಮೊಗ್ಲಿಂಗ್‌ನ 'ಬಿಬ್ಲಿಯಾಥಿಕಾ ಕರ್ನಾಟಕಾ' ಮಾತಿಯನ್ನು ಮುಂದುವರೆಸಿ ೧೮೯೦ ರಲ್ಲಿ' ಪಂಪರಾಮಾಯಣ, ೧೮೮೪ ರಲ್ಲಿ 'ಕರ್ನಾಟಕ ಭಾಷಾ ಭೂಷಣ', ೧೮೯೦ ರಲ್ಲಿ ಶಬ್ದಾನು ಶಾಸನ ೧೮೯೮ ರಲ್ಲಿ ವಿಕ್ರಮಾರ್ಜುನ ವಿಜಯ ಕಿಟೆಲ್ ಅವರ ಸಂಪಾದನಾ ಮಾರ್ಗವನ್ನು ಅನುಸರಿಸಿ ಸಂಪಾದಿಸಿದರು. ಬಿ.ಎಲ್.ರೈಸರಂತೆ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕೆಲಸ ಮಾಡಿದವರಲ್ಲಿ ಜೆ.ಎಫ್.ಫ್ಲೀಟ್. ಜಾನಪದ ಹಾಡುಗಳನ್ನು ಸಂಗ್ರಹಿಸಿ ಪ್ರಕಟಸಿದರು. ಅವುಗಳಲ್ಲಿ ಲಾವಣಿ ಅಥವಾ ಕಥನ ಕವನಗಳು. "ಕಿತ್ತೂರ ದೇಸಗತಿಯ ಈರವ್ವ, ಸಂಗೊಳ್ಳಿ ರಾಯಣ್ಣ, ನರಗುಂದದ ಬಂಡಾಯ, ಬಾದಾಮಿ

ಕೋಟೆಯ ಪತನ ಬ್ರಿಟಿಷರು ವಿರುದ್ಧ ಸೆಣಸಿದ ವೀರರ ಕುರಿತಾದ ಲಾವಣಿಗಳು. ಈಲಾವಣಿಗಳು ಬ್ರಿಟಿಷರನ್ನು ನೇರವಾಗಿ ಇಲ್ಲವೆ ಪರ್ಯಾಯವಾಗಿ ಟೀಕಿಸಿದವುಗಳು. ಆದಾಗ್ಯೂ ಇಂತಹ ಲಾವಣಿಗಳನ್ನು ಕ್ರೂಢೀಕರಿಸಿ, ಅವುಗಳನ್ನು ಹಾಡುಗಾರರಿಂದ ಹಾಡಿಸಿ, ಪ್ರಕಟಣೆ ಮಾಡಿದುದು ಫ್ಲಿಟರಿಗಿದ್ದ ಕನ್ನಡ ಸಾಹಿತ್ಯದ ಬಗೆಗಿದ್ದ ಪ್ರೀತಿಯನ್ನು ಸಾಕ್ಷೀಕರಿಸುವಂತಹದು."[೧೭] ಹೀಗೆ ಕ್ರೈಸ್ತ ಮಿಶನರಿಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡಗೆ ಅವಿಸ್ಮರಣೀಯವಾದುದಾಗಿದೆ. ಪಾಶ್ಚಿಮಾತ್ಯ ವಿದ್ವಾಂಸರ ಕನ್ನಡ ಸಾಹಿತ್ಯ ಕೃತಿಯ ಪ್ರಕಟಣೆ (ಯಂತೆ) ಕಾರ್ಯದ ರೀತಿಯಲ್ಲಿ ಅವರ ಪರಿಶ್ರಮ ಸಾಧನೆಯ ತಳಹದಿ ನಮ್ಮ ವಿದ್ವಾಂಸರು ಗ್ರಂಥ ಸಂಪಾದನೆಯ ಎರಡನೆಯ ಘಟ್ಟವನ್ನು ಆರಂಭಿಸಿದರು. ನಮ್ಮ ಪ್ರಾಚೀನ ಕೃತಿಗಳು ಒಂದೊಂದಾಗಿ ಪ್ರಕಟಣೆಗೊಳ್ಳುತ್ತಿದ್ದಂತೆ ಇದುವರೆಗೆ ಓಲೆಗರಿ ಗ್ರಂಥಗಳಲ್ಲಿ ಕಾಗದದ ಹಸ್ತಪ್ರತಿಗಳಲ್ಲಿ ಓದುತ್ತಿದ್ದವರು ಅವುಗಳನ್ನು ಸಂಗ್ರಹಿಸಲು ತೊಡಗಿದರು. ಇದನ್ನು ಗಮನಿಸಿದರ ವ್ಯಾಪಾರಸ್ಥರು. ಪ್ರಕಟಣೆಯನ್ನು ಒಂದು ಉದ್ಯಮವನ್ನಾಗಿ ಮಾಡತೊಗಿದರು. ಓಲೆಗರಿಗಳನ್ನು ಓದಿ 'ಪ್ರತಿಮಾಡಬಲ್ಲ' ಪಂಡಿತರನ್ನು ಗುರುತಿಸಿ ಅವರಿಂದ ಪ್ರತಿಮಾಡಿಸುತ್ತಿದ್ದರು. ನಂತರ ಯಥಾವತ್ತಾಗಿ ಮುದ್ರಿಸಿತೊಡಗಿದರು. ಹೀಗೆ ಮುದ್ರಣಗೊಂಡ ಪುಸ್ತಕಗಳು ಪಾಶ್ಚಿಮಾತ್ಯ ವಿದ್ವಾಂಸರು ತೋರಿಸಿಕೊಟ್ಟ ಪೀಠಿಕೆ, ಪಾಠಾಂತರ, ಪರಿಷ್ಕರಣವಾಗಲೀ ಸಂಪಾದನೆಯ ವಿಧಾನವಾಗಲೀ ಇಲ್ಲದೆ ಹಸ್ತಪ್ರತಿಯ ಯಥಾ ನಕಲಾಗಿ ಮುದ್ರಣಗೊಂಡವು. ಈ ಬಗೆಯ ಕೃತಿಗಳೆಲ್ಲ ಸಾಧಾರಣವಾಗಿ ಕಲ್ಲಚ್ಚಿನ ಪ್ರತಿಗಳಾಗಿದ್ದ ಇವು ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಣಗೊಂಡು ಮಾರಾಟವಾದವು.

ಗ್ರಂಥಗಳ ಸಂಪಾದನೆ ಮತ್ತು ಅವುಗಳ ಪ್ರಕಟಣೆ ಮುಂದುವರೆದು ಕೆಲವು ವಿದ್ವಾಂಸರು ಗ್ರಂಥ ಸಂಪಾದನಾ ಕಾರ್ಯವನ್ನು ಶಾಸ್ತ್ರಬದ್ಧಗೊಳಿಸಿ ಪ್ರಕಟಿಸುವ ಪ್ರಯತ್ನ ಮಾಡಿದರು. "ಬೆಂಗಳೂರಿನಲ್ಲಿ ಎಂ.ಎ. ರಾಮಾನುಜ ಅಯ್ಯಂಗಾರ್ ಮತ್ತು ನರಸಿಂಹಚಾರ್ ಹಾಗೂ ಬಿಜಾಪುರದಲ್ಲಿ ಫ.ಗು.ಹಳಕಟ್ಟಿ ಅವರುಗಳು ಆ ಕಾಲದಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ಅಸಾಧಾರಣ ಸೇವೆ ಸಲ್ಲಿಸಿದರು. ರಾಮಾನುಜ ಅಯ್ಯಂಗಾರ್ ಮತ್ತು ನರಸಿಂಹಚಾರ್ ಅವರು ೧೮೯೭ ರಲ್ಲಿ ಆರಂಭಿಸಿದ 'ಕರ್ನಾಟಕ ಕಾವ್ಯಮಂಜರಿ' ಎಂಬ ಮಾಸಿಕ ಪತ್ರಿಕೆಯ ಮೂಲಕ ಅನೇಕ ಪ್ರಾಚೀನ ಕೃತಿಯನ್ನು ಪ್ರಕಟಣೆ ಮಾಡಿದರು. ಈ ಪತ್ರಿಕೆಯೇ (ಕಾವ್ಯ) ಕರ್ನಾಟಕ ಕಾವ್ಯ ಕಲಾನಿಧಿಯಾಗಿ ಮಾರ್ಪಟ್ಟಿತು."[೧೮] ಈ ಪತ್ರಿಕೆಯ ಮೂಲಕ ಎಲ್ಲೋ ಒಂದು ಮೂಲೆಯಲ್ಲಿ ಸಂಗ್ರಹವಾಗಿ ಬೆಳಕಿಗೆ ಬಾರದೆ ಅಥವಾ ವಿನಾಶದ ಸ್ಥಿತಿಯಲ್ಲಿದ್ದ ಹಸ್ತಪ್ರತಿಗಳು ಕೃತಿಯ ಅಥವಾ ಗ್ರಂಥದ ರೂಪ ಪಡೆದು ಹೊರಬಂದವು. ಈ ದಿಸೆಯಲ್ಲಿ 'ಕಬ್ಬಿಗರ ಕಾವ' 'ಲೀಲಾವತಿ ಪ್ರಬಂಧ', 'ಕರ್ಣಾಟಕ ಪಂಚತಂತ್ರ', 'ಗಿರಿಜಾ ಕಲ್ಯಾಣ'. 'ದಿವ್ಯಸೂರಿಚರಿತ್ರೆ' 'ಯಶೋಧ ಚರಿತೆ' ಹದಿಬದಿಯ ಧರ್ಮ, ಚಿಕ್ಕದೇವರಾಯ ಭಿನ್ನಪದ ಇತ್ಯಾದಿ ಕೃತಿಗಳು ಪ್ರಕಟಣೆಗೊಂಡವು. ಈ ಅವಧಿಯಲ್ಲಿಯೇ "ಫ.ಗು.ಹಳಕಟ್ಟಿ ಸ್ವಂತ ಮುದ್ರಣಾಲಯ ಮಾಡಿಕೊಂಡು ಉತ್ತರ ಕರ್ನಾಟಕದಾದ್ಯಂತ ಹಸ್ತಪ್ರತಿಗಳನ್ನು ಸಂಗ್ರಹಿಸಿ' ಶಿವಾನುಭವ' ಮಾಸಿಕದ ಮೂಲಕ

ಹಲವಾರು ಗ್ರಂಥಗಳನ್ನು ಪ್ರಕಟಿಸಿದರು. ಶರಣರ ವಚನಗಳನ್ನು ಬಹಳ ಪರಿಶ್ರಮದಿಂದ ಪ್ರಕಟಿಸಿದ್ದರು. ಈ ಕಾರ್ಯಕ್ಕಾಗಿಯೇ ಅವರು 'ವಚನಸಾಹಿತ್ಯದ ಪಿತಾಮಹ' ಎಂಬ ಹೆಸರು ಪಡೆದರು. 'ಹರಿಹರನ ರಗಳೆ', 'ವಚನಗಳ ಸಂಕಲ', 'ಶೂನ್ಯಸಂಪಾದನೆ' ಮುಂತಾದ ಹಲವಾರು ಪ್ರಮುಖ ಗ್ರಂಥಗಳನ್ನು ಪ್ರಕಟಿಸಿದರು. ಉತ್ತಂಗಿ ಚನ್ನಪ್ಪನವರು ಸರ್ವಜ್ಞನ ವಚನಗಳನ್ನು ಪರಿಷ್ಕರಿಸಿ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದರು."[೧೯]

ಪ್ರಾಚೀನ ಸಾಹಿತ್ಯವನ್ನು ಒಳಗೊಂಡ ಹಸ್ತಪ್ರತಿಗಳ ಸಂಗ್ರಹ ಸಂಪಾದನೆ, ಸಂರಕ್ಷಣೆಯನ್ನು ಮಾಡುವ ನಿಟ್ಟಿನಲ್ಲಿ ಹಸ್ತಪ್ರತಿ ಸಂಸ್ಥೆಗಳು ಹುಟ್ಟಿಕೊಂಡವು. ಅವುಗಳಲ್ಲಿ "ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್", ಮತ್ತು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಗಳು ಪ್ರಮುಖವಾದವು. ಈ ಸಂಸ್ಥೆಗಳಲ್ಲಿ ಅಧಿಕಾರಿಗಳಾಗಿ ನೇಮಕಗೊಂಡ ವಿದ್ವಾಂಸರು ಈ ಸಂಸ್ಥೆಗಳಲ್ಲಿರುವ ಅಪ್ರಕಟಿತ ಹಸ್ತಪ್ರತಿಗಳನ್ನು ಪರಿಷ್ಕರಿಸಿ ಪ್ರಕಟಿಸಿದರು. ಹಾಗೆಯೇ ಇತರ ವಿದ್ವಾಂಸರನ್ನು ಈ ರೀತಿಯ ಕಾರ್ಯದಲ್ಲಿ ತೊಡಗಿಸಿದರು. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾ ಕೇಂದ್ರ ಈ ಕಾರ್ಯವನ್ನು ಅತ್ಯಂತ ಶ್ರದ್ಧೆ ಮತ್ತು ಅಭಿಮಾನದಿಂದ ವ್ಯವಸ್ಥಿತವಾಗಿ ಮಾಡಿತು. "ಆರ್. ನರಸಿಂಹಾಚಾರ್, ಬೆಳ್ಳಾವೆ ವೆಂಕಟನಾರಾಯಣಪ್ಪ, ಆರ್. ಶಾಮಾಶಾಸ್ತ್ರಿ ಮುಂತಾದ ವಿದ್ವಾಂಸರು 'ಕನ್ನಡ ಗ್ರಂಥಮಾಲೆ'ಯಲ್ಲಿ 'ಕೆಳದಿ ನೃಪವಿಜಯ', 'ಉದ್ಭಟ ಕಾವ್ಯ' (೧೯೨೧) 'ಧರ್ಮಾಮೃತ (೧೯೨೪) 'ಕುಮಾರವ್ಯಾಸ ಭಾರತ'ದ ಪರ್ವಗಳು (೧೯೧೨) 'ಅನಂತನಾಥ ಪುರಾಣ (೧೯೩೦) ಇನ್ನೂ ಮುಂತಾದ ಕೃತಿಗಳನ್ನು ಪ್ರಕಟಿಸಿದ್ದಾರೆ."[೨೦]

ಇದೇ ಕಾಲದಲ್ಲಿ ಕರ್ನಾಟದ ಹೊರಗೆ ಮದರಾಸು ವಿಶ್ವವಿದ್ಯಾನಿಲಯದ ವಿಭಾಗವು ಪ್ರಾಚೀನ ಕನ್ನಡ ಗ್ರಂಥಗಳ ಪ್ರಕಟನೆಯ ಕಾರ್ಯವನ್ನು ಮಾಡಿತು. ಮದ್ರಾಸಿನ ಗೌರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ ಲೈಬ್ರರಿಯು "ಓರಿಯಂಟಲ್ ಮ್ಯಾನ್‌ಸ್ಕ್ರಿಪ್ಟ್ ಸೀರಿಸ್" ಎಂಬ ಮಾಲೆಯಲ್ಲಿ ಹಲವಾರು ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದೆ. ಲೋಕೋಪಕಾರ (೧೯೫೦) ಮಂಗರಾಜ ನಿಘಂಟು (೧೯೫೧) ಮನ್ಮಥ ವಿಜಯ (೧೯೫೪) ಜೀವಸಂಬೋಧನೆ (೧೯೫೫) ಶ್ರೀಮದ್ರಾಮಾಣಯದ ಕೆಲವು ಕಾಂಡಗಳನ್ನು ಹಾಗೂ ಇನ್ನಿತರ ಕೆಲವು ಕಾವ್ಯಗಳನ್ನು ಪ್ರಕಟಿಸಲಾಗಿದೆ. ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಸಿರೀಸ್' ಮಾಲೆಯಂತೆಯೇ ಕನ್ನಡ ಗ್ರಂಥಮಾಲೆಯ ಮುಖಾಂತರ ಹಲವಾರು ಕೃತಿಗಳನ್ನು ಪ್ರಕಟಿಸಲಾಯಿತು. ೧೯೩೦ ರಲ್ಲಿ ಕವಿರಾಜಮಾರ್ಗ ಕೃತಿಯು ಪ್ರಕಟಣೆಯಾಯಿತು. ಈ ಕೃತಿಯು ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯಾಗಿದೆ. ಇದೇ ಸಂದರ್ಭದಲ್ಲಿ "ಶಬ್ದಮಣಿದರ್ಪಣ (೧೯೪೦) ನೇಮಿನಾಥ ಪುರಾಣ (೧೯೪೦) ಅಭಿನವಾಭಿ ನಂದನ (೧೯೫೨) ವರ್ಧಮಾನ ಪುರಾಣ (೧೯೫೩) ಜಾತಕ ತಿಲಕ (೧೯೫೫) ಶ್ರೀ ವಿಷ್ಣುಪುರಾಣ (೧೯೫೭) ಹೀಗೆ ಹಲವಾರು ಪುಸ್ತಕಗನ್ನು ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ವಿಭಾಗ ಬೆಳಕಿಗೆ ತಂದಿದೆ. ಈ ಪುಸ್ತಕಗಳನ್ನು ಪ್ರಕಟಣೆಗೆ ಶ್ರೀ. ಎ.

ವೆಂಕಟರಾವ್ ಎಚ್. ಶೇಷ ಅಯ್ಯಂಗಾರ್, ಎಂ. ಮರಿಯಪ್ಪಭಟ್ಟ, ಎಂ. ಗೋವಿಂದರಾವ್, ಅವರುಗಳ ಸೇವೆ ತುಂಬಾ ಇದೆ.[೨೧]

ಮುದ್ರಣ ತಂತ್ರಜ್ಞಾನ ನಮ್ಮ ನಾಡಿಗೆ ಒಂದಾಗಿನಿಂದಲೇ ಪಾಶ್ಚಾತ್ಯ ವಿದ್ವಾಂಸರು ಕನ್ನಡ ಕೃತಿಗಳ ಸಂಪಾದನೆ ಮತ್ತು ಪ್ರಕಟಮಾಡುವ ಕಾರ್ಯ ಮುಂದುವರೆದು 'ಅದು ಗ್ರಂಥ ಸಂಪಾದನಾ' ಎನ್ನುವ ಒಂದು ಶಾಸ್ತ್ರೀಯ ಅಧ್ಯಯನದ ರೂಪ ಪಡೆಯಿತು. ಇದಕ್ಕೆ ದೇಸಿ ವಿದ್ವಾಂಸರು ಕೂಡ ಶ್ರಮಿಸಿದರು. ಪಾಶ್ಚಿಮಾತ್ಯರು ಹಾಕಿದ ತಳಹದಿಯ ಮೇಲೆ ೧೯೩೦ ರಿಂದಲೇ ಕನ್ನಡ ಮತ್ತು ಇಂಗ್ಲೀಷ್ ಭಾಷೆ, ಸಾಹಿತ್ಯಗಳನ್ನು ಅಧ್ಯಯನ ಅತ್ಯಂತ ವ್ಯವಸ್ಥಿತವಾಗಿ ಆಧುನಿಕ ವಿದ್ವಾಂಸರಿಂದ ನಡೆಯಿತು. 'ಗ್ರಂಥಸಂಪಾದನೆ' ಒಂದು ಶಾಸ್ತ್ರವಾಗಿ ಈ ಅವಧಿಯಿಂದಲೇ ಬೆಳೆಯಿತು. ಈ ಗ್ರಂಥಸಂಪಾದನಾ ಶಾಸ್ತ್ರದಲ್ಲಿ ದುಡಿದವರು ಮದ್ರಾಸು ವಿಶ್ವವಿದ್ಯಾಲಯದ ಪ್ರೊ.ಎಂ. ಮರಿಯಪ್ಪ ಭಟ್ಟರು, ಧಾರವಾಡದ ಶಿ.ಶಿ.ಬಸವನಾಳ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿದ್ವಾಂಸರಾದ ಆರ್. ನರಸಿಂಹಚಾರ್ ಎನ್. ಅನಂತರಂಗಾಚಾರ್, ಪ್ರೊ.ತೀ.ನಂ. ಶ್ರೀಕಂಠಯ್ಯ, ಡಾ.ಡಿ.ಎಲ್. ನರಸಿಂಹಾಚಾರ್, ಪ್ರೋ.ಎ.ಆರ್. ಕೃಷ್ಣಶಾಸ್ತ್ರೀ, ಪ್ರೊ.ಟಿ.ಎಸ್.ವೆಂಕಣ್ಣಯ್ಯ ಮುಂತಾದವರು. ಇವರುಗಳು ಪಾಶ್ಚಿಮಾತ್ಯ ಸಾಹಿತ್ಯದಲ್ಲಿ ಒಂದು ಪ್ರತ್ಯೇಕ ಅಧ್ಯಯನ ಶಾಖೆಯಾಗಿ ಬೆಳೆದಿದ್ದ ಗ್ರಂಥಸಂಪಾದನಾ ಶಾಸ್ತ್ರದ ಬಗ್ಗೆ ಪರಿಚಯ ಮಾಡಿಕೊಂಡಿದ್ದು ಆ ಸಂಬಂಧ ಗ್ರಂಥಗಳನ್ನು ಅಭ್ಯಾಸ ಮಾಡಿದ್ದು ಈ ವಿದ್ವಾಂಸರು ಅದೇ ಬಗೆಯ ಶಿಸ್ತುಬದ್ಧತೆ, ವೈಜ್ಞಾನಿಕ ಮಾದರಿಯ ಸಂಪಾದನಾ ಕಾರ್ಯ ಕನ್ನಡ ಕೃತಿಗಳಿಗೂ ಲಭ್ಯವಾಗಬೇಕೆಂಬ ಆಸೆಯಿಂದ ಮೊದಲೇ ಸಂಪಾದನೆಗೆ ಎತ್ತಿಕೊಂಡು ೧೯೨೦ ರಿಂದ ೧೯೬೦ರ ವರೆಗೆ ಕನ್ನಡದ ಬಹುಪಾಲು ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದನೆ ಮಾಡಿ ಪ್ರಕಟಿಸಿದರು. 'ಟಿ.ಎಸ್. ವೆಂಕಣ್ಣಯ್ಯನವರ ಬಸವದೇವರಾಜರಗಳೆ ಡಿ.ಎಲ್.ಎನ್.ರವರು. ವಡ್ಡಾರಾಧನೆ (೧೯೪೯) ತೀ.ನಂ.ಶ್ರೀ ಯವರ ನಂಬಿಯಣ್ಣನ ರಗಳೆ (೧೯೪೧) ಮುಂತಾದ ಕೃತಿಗಳು ಸಂಪಾದನೆಗೊಂಡು ಪ್ರಕಟಗೊಂಡವು. ಶಿ.ಶಿ. ಬಸವನಾಳ ಅವರು ೧೯೫೧ ರಲ್ಲಿ ಬಸವಣ್ಣನವರ ಷಟ್ಸ್ಥಲ ವಚನಗಳು ಸಂಪಾದನೆ ಮಾಡಿ ಪ್ರಕಟಸಿದ್ದಾರೆ. ಈ ವಿದ್ವಾಂಸರಂತೆಯೇ ನಂದೀಮಠ ಮತ್ತು ಭೂಸನೂರು ಮಠ ಅವರುಗಳು ಗಿರಿಜಾಕಲ್ಯಾಣ (೧೯೪೧) ಮತ್ತು "ಶೂನ್ಯ ಸಂಪಾದನೆಯನ್ನು ಸಂಪಾದಿಸಿದ್ದಾರೆ. ಆರ್. ನರಸಿಂಹಾಚಾರ್‌ರವರು ಕನ್ನಡ ಸಾಹಿತ್ಯ ಇತಿಹಾಸದ ಕುರಿತಂತೆ 'ಕವಿ ಚರಿತ್ರೆ' ಎಂಬ ಕೃತಿ ರಚಿಸಿದರು. ಈ ಅವಧಿಯಲ್ಲಿಯೇ ವ್ಯಾಕರಣ, ಭಾಷಾಶಾಸ್ತ್ರ, ಛಂದಸ್ಸು, ಅಲಂಕಾರಶಾಸ್ತ್ರ, ಶಾಸನಶಾಸ್ತ್ರ ಮುಂತಾದ ಹೊಸ ಹೊಸ ಶಿಸ್ತುಗಳು ಕನ್ನಡ ಸಾಹಿತ್ಯದಲ್ಲಿ ಶಾಸ್ತ್ರೀಯವಾಗಿ ರೂಪುಗೊಂಡವು."[೨೨]

ಮಿಶನರಿಗಳ ಧರ್ಮ ಪ್ರಚಾರದ ಕಾರ್ಯಕ್ಕೆ ನಿಯೋಜನೆಗೊಂಡು ನಮ್ಮ ನಾಡಿಗೆ ಬಂದ ಮಿಶನರಿ ಪಾದ್ರಿಗಳಿಗೆ ನಮ್ಮ ಭಾಷೆ ಮತ್ತು ಸಾಹಿತ್ಯದ ಕುರಿತಾದ ಅಗತ್ಯತೆ ಮತ್ತು ಸಾಂದರ್ಭಿಕ ಆಸಕ್ತಿಯು ಸಾಹಿತ್ಯ ಬೆಳವಣಿಗೆ ಕಾರ್ಯಕ್ಕೆ ನಾಂದಿಯಾಗಿ ಮುದ್ರಣ ತಂತ್ರಜ್ಞಾನದಿಂದ

ಎಲ್ಲೊ ಒಂದು ಕಡೆ ಉಳಿದಿದ್ದ ಹಲವಾರು ಹಸ್ತಪ್ರತಿಗಳಲ್ಲಿನ ಸಾಹಿತ್ಯ ಮತ್ತು ಜ್ಞಾನವು ಜಾತಿ, ವರ್ಗ ಮೀರಿ ಪುಸ್ತಕ ಅಥವಾ ಗ್ರಂಥರೂಪದಲ್ಲಿ ಹಲವಾರು ಮಂದಿಗೆ ತಲುಪಿದ್ದು ಕ್ರಾಂತಿಕಾರಕ ಬದಲಾವಣೆ. ಗ್ರಂಥಗಳ ಪ್ರಕಟಣೆಯಂತೆ ದಿನನಿತ್ಯದ ಸುದ್ದಿ ಸಮಾಚಾರಗಳ ತಿಳಿಯುವ ಅನುಕೂಲಕ್ಕಾಗಿ ಅದೇ ಸಂದರ್ಭದಲ್ಲಿ ಪತ್ರಿಕೆಗಳ ಪ್ರಕಟಣೆ ಮತ್ತು ಮುದ್ರಣ ಕಾರ್ಯ ಆರಂಭವಾಯಿತು. ಈ ಪತ್ರಿಕೆಗಳೂ ಕೂಡ ಸಾಹಿತ್ಯದ ಬೆಳವಣಿಗೆಗೆ ತುಂಬಾ ಸಹಕಾರಿಯಾದವು.

### ೪.೪. ಅಚ್ಚುಮೊಳೆ ಮತ್ತು ಅಕ್ಕಸಾಲಿಗರು

ಮುದ್ರಣ ಎನ್ನುವುದಕ್ಕೆ ಸುಮಾರು ಸಾವಿರ ವರ್ಷದಷ್ಟು ಹಿಂದಿನ ಇತಿಹಾಸವಿದ್ದರೂ ಅದು ಅಚ್ಚುಮೊಳೆಗಳ ಮೂಲಕ ಜಗತ್ತನ್ನು ಪ್ರಭಾವಿಸಿದ್ದು ಕ್ರಿ.ಶ. ೧೪೫೦ ರಿಂದ. ಮಧ್ಯಯುಗದ ಯುರೋಪನಲ್ಲಿ ಕಮ್ಮಾರಿಕೆ ಹಾಗೂ ಅಕ್ಕಸಾಲಿಕೆಯನ್ನು ಕುಲಕಸುಬು ಮಾಡಿಕೊಂಡಿದ್ದ ಗುಟೆನ್‌ಬರ್ಗ್ (ಸು. ೧೩೯೮-೧೪೬೮) ಎಂಬಾತ ೧೪೫೦ರಲ್ಲಿ ರೋಮನ್ ಲಿಪಿಯ ಎರಕದ ಅಚ್ಚಿನ ಮೊಳೆಗಳನ್ನು ಕಂಡುಹಿಡಿದ. ಅವನು ಈ ಆವಿಷ್ಕಾರ ಮುದ್ರಣ ತಾಂತ್ರಿಕತೆಯನ್ನು ಪಸರಿಸುವುದಾಗಿತ್ತು. ಇದರ ನಂತರ ಯುರೋಪ ಭಾರತ ಹಾಗೂ ಕರ್ನಾಟಕದಲ್ಲಿ ಎರಕದ ಅಚ್ಚುಮೊಳೆಗಳ ತಯಾರಿಕೆಯ ವಿವಿಧ ಪ್ರಯತ್ನಗಳೂ ನಡೆದವು.

ಇದರ ಮೊದಲು ಮುದ್ರಣ ವಿಧಾನವನ್ನು ಮೊದಲು ಕಂಡುಹಿಡಿದವನು ಚೀನಾ ದೇಶದ ಪಿ. ಷಿಂಗ್ ಎಂಬ ಅಕ್ಕಸಾಲಿಗನಂತೆ. ಅವನು ಅಕ್ಷರಗಳನ್ನು ಸಣ್ಣ ಸಣ್ಣ ಮರದ ದಿಮ್ಮಿಗಳ ಮೇಲೆ ಕೆತ್ತಿ ಅದರಿಂದ ಕಾಗದದ ಮೇಲೆ ಅಚ್ಚೊತ್ತಿತ್ತಿದ್ದನು. ಈ ವಿಧಾನದಿಂದ ಅಚ್ಚಾದ ವೃತ್ತ ಪತ್ರಿಕೆಯೊಂದು ಆ ದೇಶದ ರಾಜಧಾನಿಯಾದ ಪಿಕಿಂಗ್ ಪಟ್ಟಣದಲ್ಲಿ ಕ್ರಿ.ಶ. ೯೧೦ನೆಯ ಇಸ್ವಿಯ ಹಿಂದೆಯೇ ಪ್ರಕಟವಾಗುತ್ತಿತ್ತು. ಇಲ್ಲಿಂದ ಶುರುವಾದ ಅಕ್ಷರ ಮುದ್ರಣ ಕಲೆಯು ಕ್ರಿ.ಶ. ಸುಮಾರು ೧೪೬೦ರ ಹೊತ್ತಿಗೆ ಯುರೋಪ ಖಂಡದ ಜರ್ಮನಿ, ಹಾಲೆಂಡ ಮೊದಲಾದ ದೇಶಗಳಲ್ಲಿ ಪ್ರಚಲಿತವಾಗುತ್ತದೆ. ಪಿ. ಷಿಂಗ್ ಆಗಲಿ ನಂತರ ಜಾನ್‌ಗುಟೆನ್ ಬರ್ಗನಾಗಲೀ ಪ್ರತಿ ಅಕ್ಷರಕ್ಕೂ ಪ್ರತ್ಯೇಕ ಮೊಳೆಗಳನ್ನು ಅಚ್ಚು ಹೊಯ್ದು ನಿರ್ಮಿಸಿದ್ದ ವಿಚಾರ ತಿಳಿದುಬರುತ್ತದೆ. ಗುಟೆನ್‌ಬರ್ಗ್ ಮುದ್ರಣ ಯಂತ್ರವನ್ನು ಕಂಡುಹಿಡಿಯಲಿಲ್ಲ ಬದಲಾಗಿ ಅಚ್ಚಿನ ಮೊಳೆಗಲನ್ನು ಎರಕಹೊಯ್ಯುವ ಎರಕದ ಅಚ್ಚನ್ನು ಮತ್ತು ರಂಧ್ರಕದಿಂದ ಅಚ್ಚಿನ ಮೊಳೆಗಳನ್ನು ಮಾಡುವ ವಿಧಾನವನ್ನು ಕಂಡುಹಿಡಿದು ಮುದ್ರಣ ಕಲೆಯ ತಾಂತ್ರಿಕ ಬೆಳವಣಿಗೆಗೆ ಕಾರಣನಾದ. ಈ ಕಾರಣದಿಂದಲೇ ಗುಟೆನ್‌ಬರ್ಗನನನ್ನು ಮುದ್ರಣ ಕಲೆಯ ಜನಕನೆಂದು ಕರೆಯುತ್ತಾರೆ.

೧೮೩೦ ರಿಂದ ೧೯೦೦ರ ವರೆಗಿನ ಎಪ್ಪತ್ತು ವರ್ಷದಲ್ಲಿ ಕಲ್ಲಚ್ಚು ಮುದ್ರಣ ಪ್ರಭಾವಿಯಾಗಿ ಬೆಳೆಯಿತು. ಬರವಣಿಗೆ ಹಾಗೂ ಪ್ರಕಟಣೆ ಇತಿಹಾಸದಲ್ಲಿ ಕಲ್ಲಚ್ಚಿಗೆ ಒಂದು ಮಹತ್ವದ ಸ್ಥಾನವಿದೆ. ಮುತ್ತಿನಂತಹ ಕನ್ನಡಾಕ್ಷರ ಆಧಾರಿತ ಕಲ್ಲಚ್ಚು ಮುದ್ರಣ ೧೯ ರಿಂದ ೨೦ನೆಯ

ಶತಮಾನದ ಹೊತ್ತಿಗೆ ಜ್ಞಾನ ಪ್ರಸಾರದ ಮುಖ್ಯ ಮಾಧ್ಯಮವಾಗಿ ಬೆಳೆಯಿತು. ಆಗ ಕನ್ನಡ ಲಿಪಿ ಬರೆಯುವ ಹಾಗೂ ಅಚ್ಚಿನ ಮೊಳೆಗಳನ್ನು ತಯಾರಿಸುವ ಕಲಾಕಾರರಿಗೆ ಮುದ್ರಾಕ್ಷರ ಶಾಲೆಗಳಲ್ಲಿ ಬಹಳ ಬೇಡಿಕೆಯಿತ್ತು. ಮಂಗಳೂರಿನ (೧೮೨೮) ರೋಮನ್ ಕ್ಯಾಥೋಲಿಕ್ ಕ್ರೈಸ್ತ ಮಿಶನರಿಯ ಪಾದ್ರಿಗಳು ತಮ್ಮ ಪ್ರೆಸ್ಸಿನ ಅಚ್ಚುಮೊಳೆಗಳ ಅಗತ್ಯಕ್ಕಾಗಿ ಅಂದವಾಗಿ ಬರೆಯುವ ಹಾಗೂ ಅಚ್ಚು ಮೊಳೆಗಳನ್ನು ತಯಾರಿಸುವ ಕನ್ನಡ ಲಿಪಿಕಾರರನ್ನು ಹುಡುಕುವಾಗ ಅವರ ಕಣ್ಣಿಗೆ ಬಿದ್ದವರು ಮೂಡಬಿದ್ರೆಯ ಅತ್ತಾವರದ ವಿಶ್ವಕರ್ಮ ಕುಲದ ಅನಂತಾಚಾರಿ ಅವರು.

ವಿಶ್ವಕರ್ಮ ಪ್ರಮುಖ ಗುರುಪರಂಪರೆಯ ಆನೆಗೊಂದಿ ಪೀಠದ ಅನುಯಾಯಿಗಳಾಗಿದ್ದ ಅನಂತಾಚಾರಿ ಅವರ ಹಿರಿಯರು ಕಾರ್ಕಳ ತಾಲ್ಲೂಕಿನ ಪಡಿಮಾರ್ನಾಡು ಗ್ರಾಮದ ಅಲಂಗಾರು ಎಂಬಲ್ಲಿ ನೆಲೆಸಿದ್ದರು. ಆ ಕಾಲದಲ್ಲಿ ಇದೊಂದು ಭೂಮಾಲಿಕ ಶ್ರೀಮಂತ ಕುಟುಂಬವಾಗಿತ್ತು. ಅಂತಹ ಕುಟುಂಬದಲ್ಲಿ ಕ್ರಿ.ಶ. ೧೮೬೧ರಲ್ಲಿ ಅನಂತಾಚಾರಿ ಅವರು ಜನಿಸಿದರು. ಔಪಚಾರಿಕ ಆಧುನಿಕ ಶಿಕ್ಷಣದೊಂದಿಗೆ ಕುಲಕಸುಬಾದ ಕಮ್ಮಾರಿಕೆಯನ್ನು ಮೈಗೂಡಿಸಿಕೊಂಡು ಬೆಳೆದರು. 'ಕುಲುಮೆಯಿಲ್ಲದೆ ಕುಲವಿಲ್ಲ ಗೋತ್ರವಿಲ್ಲ ಹಲವು ಪರಿಯ ಆಯುಧಗಳಿಲ್ಲ' ಎನ್ನುವ ತಿಂಥಿಣಿ ಮೌನೇಶ್ವರರ ಮಾತಾಗಲಿ 'ಕಮ್ಮಾರರಿಲ್ಲದೆ ಖಡ್ಗಾದಿಶಾಸ್ತ್ರಗಳಾಗವು' ಎನ್ನುವ ಕನ್ನಡದ ಪ್ರಸಿದ್ಧ ಕವಿ ನಯಸೇನನ ಮಾತಾಗಲೀ ಕಮ್ಮಾರಿಕೆಗಿದ್ದ ಕೌಶಲ್ಯ ಹಾಗೂ ಸೃಷ್ಟಿ ಶಕ್ತಿಯನ್ನು ಹೇಳುತ್ತವೆ. ಜಗತ್ತಿನ ಸೃಷ್ಟಿಗೆ ಮೂಲವಾದ ಹಾರೆ, ಗುದ್ದಲಿ, ಕತ್ತಿ, ಕೊಡಲಿಯಂತಹ ಬಹುಪಯೋಗಿ ಸಲಕರಣೆಗಳನ್ನು ರೂಪಿಸುವಲ್ಲಿ ಅನಂತಾಚಾರಿ ಅವರು ಚೆನ್ನಾಗಿ ಪಳಗಿದ್ದರು. ಜೊತೆಗೆ ಮುದ್ದಾದ ಹಾಗೂ ಸುಂದರವಾದ ಕನ್ನಡ ಅಕ್ಷರ ಬರೆಯುವುದರಲ್ಲಿ ಸಿದ್ಧಹಸ್ತರಾಗಿದ್ದರು. ಆದರೆ ವಾಸವಿದ್ದ ಹಳ್ಳಿಯಲ್ಲಿ ಇಂಥ ಕೌಶಲ್ಯಕ್ಕೆ ಪ್ರೋತ್ಸಾಹವಿರಲಿಲ್ಲ. ತನ್ನ ಸೃಷ್ಟಿಶೀಲತೆಗೆ ತಕ್ಕ ಜಾಗ ಹುಡುಕುತ್ತ ಹೊರಟ ಅನಂತಾಚಾರಿ ಕ್ರಿ.ಶ. ೧೮೭೪ರ ಹೊತ್ತಿಗೆ ಮಂಗಳೂರಿನ ಬಲ್ಮಠದಲ್ಲಿನ ಬಾಸೆಲ್‌ಮಿಶನ್ ಕಬ್ಬಿಣ ಕಾರ್ಖಾನೆಯಲ್ಲಿ ಉದ್ಯೋಗಕ್ಕೆ ಸೇರಿಕೊಳ್ಳುತ್ತಾರೆ.

ಬಾಸೆಲ್‌ಮಿಶನ್ ಪ್ರೆಸ್‌ನವರು ನಡೆಸುತ್ತಿದ್ದ (೧೮೪೧) ಮಂಗಳೂರಿನ ಛಾಪಖಾನೆಗೆ ವಿದೇಶದಿಂದ ಕನ್ನಡದ ಮುದ್ರಣ ಮೊಳೆಗಳನ್ನು ತರಿಸಿಕೊಳ್ಳುತ್ತಿದ್ದರು. ಅನಂತಾಚಾರಿ ಅವರ ಸುಂದರ ಕನ್ನಡ ಕೈಬರಹ ಹಾಗೂ ಉಕ್ಕಿನ ಕೆಲಸದ ಕೌಶಲ್ಯವನ್ನು ಗಮನಿಸಿದ ಬಾಸೆಲ್ ಮಿಶನ್ನಿನವರು ಅನಂತಾಚಾರಿ ಅವರನ್ನು ಕಾರ್ಖಾನೆಯಿಂದ ಛಾಪಖಾನೆಗೆ ವರ್ಗಾಯಿಸುತ್ತಾರೆ. ಅತ್ತಾವರದಲ್ಲಿ ಅವರಿಗೊಂದು ವಾಸಯೋಗ್ಯ ಮನೆಯನ್ನೂ ಕಟ್ಟಿಸಿಕೊಡುತ್ತಾರೆ.

ಛಾಪಖಾನೆಗೆ ಬಂದ ಮೇಲೆ ಅನಂತಾಚಾರಿ ಅವರು ಎರಕಹೊಯ್ದು ಕನ್ನಡದ ಸುಂದರ ಅಚ್ಚಿನ ಮೊಳೆಗಳನ್ನು ತಯಾರಿಸುವ ಕೌಶಲ್ಯವನ್ನು ಕರಗತ ಮಾಡಿಕೊಳ್ಳುತ್ತಾರೆ. ಇದರಿಂದ ಬಾಸೆಲ್‌ಮಿಶನ್ ಸಂಸ್ಥೆ ಮುದ್ರಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿ ಕಾಣುತ್ತದೆ ಮತ್ತು ಆರ್ಥಿಕವಾಗಿ

ಸದೃಢವೂ ಆಗುತ್ತದೆ. ಇಷ್ಟಾದರೂ ಈ ಅಚ್ಚು ಮೊಳೆಗಳ ಮೂಲಶಿಲ್ಪಿ ಅನಂತಾಚಾರಿಗೆ ಸಂಬಂಳದ ಹೊರತು ಯಾವ ಗೌರವವೂ ಸಿಗಲಿಲ್ಲ. ಮುಂದೆ ಮಂಗಳೂರಿನ ಕೊಡಿಯಾಲ ಬೈಲಿನಲ್ಲಿದ್ದ ಕೆಥೋಲಿಕ್‌ರ ಕರೆಯಂತೆ ಅವರ ಮುದ್ರಣಾಲಯಕ್ಕೆ ಸೇರಿಕೊಳ್ಳುತ್ತಾರೆ. ಶ್ರೀಯುತರ ಕೆಲಸಕ್ಕೆ ಇಲ್ಲೊಂದು ಗೌರವ ಹಾಗೂ ಹೆಸರು ಪ್ರಾಪ್ತವಾಗುತ್ತದೆ. ಅನಂತಾಚಾರಿ ಅವರು ತಯಾರಿಸಿದ ಅಚ್ಚಿನ ಮೊಳೆಗಳಿಗೆ 'ಅನಂತ ಶೇಡೆಡ್' ಎಂದು ಹೆಸರಿಡುತ್ತಾರೆ. ಇದರಿಂದ ಅಚ್ಚು ಮೊಳೆಗಳ ಮೇಲೆ ಮೊದಲಬಾರಿಗೆ ಅನಂತಾಚಾರಿ ಅವರು ತಮ್ಮ ಸ್ವಾಮ್ಯ ಪಡೆಯುತ್ತಾರೆ. ಅನಂತಾಚಾರಿ ತಯಾರಿಸುತ್ತಿದ್ದ ಅಚ್ಚಿನ ಮೊಳೆಗಳು ಹೆಚ್ಚು ಕೌಶಲ್ಯಶೀಲವು ಬೆಲೆಯುಳ್ಳವೂ ಆಗಿದ್ದವು. ಈ ಪ್ರಸಂಗ ಬಹು ವೇಗವಾಗಿ ದೇಶಾದ್ಯಂತ ಅವರ ಕೀರ್ತಿ ಪಸರಿಸಲು ಕಾರಣವಾಯಿತು.

ಅನಂತಾಚಾರಿ ಅವರು ಕನ್ನಡ ಅಚ್ಚು ಮೊಳೆಯ ತಯಾರಿಕೆ ನೈಪುಣ್ಯತೆ ಅವರನ್ನು ಕನ್ನಡೇತರ ಭಾಷೆಗಳಿಗೂ ಅಚ್ಚು ಮೊಳೆಗಳನ್ನು ತಯಾರಿಸಿಕೊಡುವಷ್ಟು ಬೆಳೆಸಿತು. ಇದರಿಂದ ಪ್ರಭಾವಿತರಾದ ಆ ಕಾಲದಲ್ಲಿ ಮುಂಬೈನಲ್ಲಿ ಪ್ರಸಿದ್ಧವಾಗಿದ್ದ ನಿರ್ಣಯಸಾಗರ ಪ್ರೆಸ್ಸಿನ ಮಾಲೀಕ ತುಕಾರಾಮ ಜಾವಾಡಿಯವರು ಮಂಗಳೂರಿನಲ್ಲಿರುವ ಆಚಾರ್ಯರನ್ನು ಭೇಟಿ ಮಾಡಿ ಮರಾಠಿ ಅಚ್ಚು ಮೊಳೆಗಳನ್ನು ತಯಾರಿಸಿಕೊಡಲು ವಿನಂತಿಸಿಕೊಳ್ಳುತ್ತಾರೆ. ಕೊಡಿಯಾಲಬೈಲ ಮಾಲೀಕರ ಅನುಮತಿಯ ಮೇರೆಗೆ ಅನಂತಾಚಾರಿ ಅವರು ಮುಂಬೈಗೆ ಹೋಗಿ ಅಲ್ಲಿ ಮರಾಠಿಯೊಂದಿಗೆ ಗುಜರಾತಿ ಅಚ್ಚುಮೊಳೆಗಳ ತಯಾರಿಕೆಯಲ್ಲಿಯೂ ನೈಪುಣ್ಯತೆಯನ್ನು ಸಾಧಿಸುತ್ತಾರೆ. ಇದು ಆಚಾರ್ಯರ ಜೀವನದಲ್ಲಿ ಮತ್ತೊಂದು ಹೊಸ ಮೈಲುಗಲ್ಲಾಗುತ್ತದೆ.

ಅನಂತಾಚಾರ್ಯರ ಅಚ್ಚು ಮೊಳೆಗಳ ಕೌಶಲ್ಯಯುತ ಹಾಗೂ ವೈಜ್ಞಾನಿಕ ತಾಂತ್ರಿಕತೆಯ ಸುದ್ದಿ ಹೈದ್ರಾಬಾದ್ ನಿಜಾಮನವರೆಗೂ ತಲುಪುತ್ತದೆ. ಹೈದ್ರಾಬಾದ್ ನಿಜಾಂನಿಂದ ಉರ್ದು ಹಾಗೂ ತೆಲುಗು ಅಚ್ಚುಮೊಳೆಗಳನ್ನು ತಯಾರಿಸಿಕೊಡಬೇಕೆಂಬ ಬೇಡಿಕೆ ಬರುತ್ತದೆ. ಅನಂತಾಚಾರಿ ಅವರು ಅದನ್ನೂ ಪೂರೈಸುತ್ತಾರೆ. ಆಚಾರ್ಯರು ಅಲ್ಲಿಂದ ಧಾರವಾಡಕ್ಕೆ ಬಂದು ಕೆಲಕಾಲ ಅಲ್ಲಿದ್ದು ಪುನಃ ಮಂಗಳೂರಿಗೆ ಬರುತ್ತಾರೆ.

ಈ ತಿರುಗಾಟ ಹಾಗೂ ನಿರಂತರ ದುಡಿಮೆಯಿಂದಾಗಿ ಅಷ್ಟೊತ್ತಿಗೆ ಅನಂತಾಚಾರಿ ಅವರಿಗೆ ವಯೋಸಹಜ ದೇಹಾಯಾಸ ಹಾಗೂ ದೃಷ್ಟಿದೋಷಗಳು ಕಾಣಿಸುತ್ತವೆ. ಆದರೂ ಛಲಬಿಡದ ವಿಕ್ರಮನಂತೆ ಸ್ವಂತ ಮುದ್ರಣಾಲಯವೊಂದನ್ನು ಕಂಕನಾಡಿನಲ್ಲಿ ಸ್ಥಾಪಿಸುತ್ತಾರೆ. ಕೆಲ ಕಾಲ ನಡೆಸಿ ವಯಸ್ಸು ಮತ್ತು ಆರ್ಥಿಕ ಮುಗ್ಗಟ್ಟಿನ ಕಾರಣದಿಂದ ಅದನ್ನು ಮಾರಿ ಆಯುರ್ವೇದ ಔಷಧಿ ತಯಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಕ್ರಿಯಾಶೀಲ ಕೆಲಸ ಮಾಡುವ ಅದಮ್ಯ ಉತ್ಸಾಹವಿದ್ದರೂ ಆದರೆ ದೇಹ ಹಾಗೂ ದೃಷ್ಟಿಗಳ ಅಸಹಕಾರ ಅವರನ್ನು ನಿಸ್ಸಹಾಯಕರನ್ನಾಗಿಸುತ್ತದೆ. ಅವಸಾನದಂಚಿನಲ್ಲಿ ಅನೇಕ ದೈಹಿಕ ಹಾಗೂ ಆರ್ಥಿಕ ತೊಂದರೆಗಳೊಂದಿಗೆ ಬಳಲಿ ಕ್ರಿ.ಶ. ೧೯೪೪ರಲ್ಲಿ ಮಂಗಳೂರಿನಲ್ಲಿ ತೀರಿಕೊಳ್ಳುತ್ತಾರೆ.

ಆಧುನಿಕ ಕನ್ನಡ ಹಾಗೂ ಆ ಮೂಲಕ ಮರಾಠಿ, ಗುಜರಾತಿ, ಉರ್ದು, ತೆಲುಗು ಅಚ್ಚು ಮೊಳೆಗಳ ಜನಕರಾಗಿ, ಕೌಶಲ್ಯ ಹಾಗೂ ತಾಂತ್ರಿಕ ನೈಪುಣ್ಯತೆಯನ್ನು ಮೆರೆದರೂ ಈ ಯಾವ ಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ಅಥವಾ ಮುದ್ರಣ ತಂತ್ರಜ್ಞಾನದಲ್ಲಿ ಅನಂತಾಚಾರಿ ಅವರ ಕುರಿತು ದಾಖಲಾತಿಯಾಗಲೀ ಗಂಭೀರ ಚರ್ಚೆಗಳಾಗಲೀ ನಡೆಯದಿರುವುದು ಖೇದವೆನಿಸುತ್ತದೆ.[೨೩]

**೪.೫. ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ**

ಮುದ್ರಣ ತಂತ್ರಜ್ಞಾನದ ಸಹಾಯದಿಂದ ರೂಪುಗೊಂಡ ಒಂದು ವಿಶಿಷ್ಟ ಅಭಿವ್ಯಕ್ತಿ ಮಾಧ್ಯಮವೇ ಪತ್ರಿಕೆ. ಇಂದು ಸಮೂಹ ಮಾಧ್ಯಮಗಳಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಈ ಪತ್ರಿಕೆಯನ್ನು ಪರಿಚಯಿಸಿದವರು ಧರ್ಮಪ್ರಚಾರಕ್ಕಾಗಿ ಬಂದ ಮಿಶನರಿ ಪಾದ್ರಿಗಳು. ಧರ್ಮ ಪ್ರಚಾರದ ಆರಂಭದಲ್ಲಿ ಧರ್ಮಪ್ರಚಾರದ ಕಾರ್ಯಕ್ಕಾಗಿ ಬೈಬಲ್ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿ ಮುದ್ರಣ ತಂತ್ರಜ್ಞಾನದ ಸಹಾಯದಿಂದ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ಬಂಗಾಲದಲ್ಲಿ ಉಗಮಗೊಂಡ ಪತ್ರಿಕೆಯ ಪ್ರಭಾವವು ಕರ್ನಾಟಕದಲ್ಲಿನ ಮಿಷನರಿಗಳ ಧರ್ಮ ಪ್ರಚಾರಕರ ಮೇಲೂ ಬೀರಿ ಇಲ್ಲಿಯೂ ಪತ್ರಿಕೆಗಳ ಉಗಮಕ್ಕೂ ನಾಂದಿಯಾಯಿತು. ಹರ್ಮನ್ ಮೊಗ್ಲಿಂಗ್‌ರ ಪ್ರಯತ್ನದಿಂದಾಗಿ ಮಂಗಳೂರಿನಲ್ಲಿ ೧೮೪೪ರಲ್ಲಿ 'ಮಂಗಳೂರು ಸಮಾಚಾರ' ಪತ್ರಿಕೆ ಪ್ರಕಟಣೆಯಾಯಿತು.

ಸಮೂಹ ಮಾಧ್ಯಮಗಳಲ್ಲಿಯೇ ವಿದ್ಯುನ್ಮಾನೇತರ ಮಾಧ್ಯಮಗಳಲ್ಲಿ ಒಂದಾದ ಪತ್ರಿಕೆಯು ದಿನನಿತ್ಯದ ಸುದ್ದಿ ಸಮಾಚಾರಗಳನ್ನು ಜನರಿಗೆ ತಲುಪಿಸುವಲ್ಲಿ ತುಂಬಾ ಯಶಸ್ಸನ್ನು ಪಡೆದಿರುವಂತಹದು. ಯಾವುದೇ ಒಂದು ವಿಷಯ ಅಥವಾ ವಿಚಾರವನ್ನು ಏಕಕಾಲದಲ್ಲಿ ಹಲವರಿಗೆ ಮುಟ್ಟಿಸುವ ಪರಿಣಾಮಕಾರಿಯಾದ ಮಾಧ್ಯಮ ಪತ್ರಿಕೆ. "ಭಾರತದಲ್ಲಿ ಮೊಟ್ಟ ಮೊದಲ ಪತ್ರಿಕೆಯನ್ನು ಪ್ರಾರಂಭಿಸಿದ ಕೀರ್ತಿ ಈಸ್ಟ್ ಇಂಡಿಯಾ ಕಂಪನಿಯ ನೌಕರನಾಗಿ ಸೇವೆ ಸಲ್ಲಿಸಿದ್ದ ಜೇಮ್ಸ್ ಆಗಸ್ಟಸ್ ಹಿಕ್ಕಿಗೆ ಸಲ್ಲುತ್ತದೆ. ಈತ ೧೭೮೦ ಜನವರಿ ೨೯ ರಂದು ಕಲ್ಕತ್ತಾ ನಗರದಲ್ಲಿ ದಿ ಚಿಂಗಾರ್ ಗೆಜೆಟ್ ಅಥವಾ ಡಿ. ಕಲ್ಕತ್ತಾ ಜನರಲ್ ಅಡ್ವರ್ಟೈಸರ್ ಎಂಬ ಹೆಸರಿನಲ್ಲಿ ಪತ್ರಿಕೆಯನ್ನು ಇಂಗ್ಲೀಷ್ ಭಾಷೆಯಲ್ಲಿ ಹೊರತಂದನು. ಆದುದರಿಂದ ಜೇಮ್ಸ್ ಆಗಸ್ಟಸ್ ಹಿಕ್ಕಿಯನ್ನು ಭಾರತೀಯ ಪತ್ರಿಕೋದ್ಯಮದ ಪಿತಾಮಹ ಎಂದು ಕರೆಯಲಾಗಿದೆ."[೨೪] ದ. ಬೆಂಗಾಲಿ ಗೆಜೆಟ್ ಪತ್ರಿಕೆಯ ನಂತರ ಭಾರತದಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ ಪತ್ರಿಕೆಗಳು ಪ್ರಾರಂಭವಾದವು. ದಿನ ಕಳೆದಂತೆ ಜನರಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಿದಂತೆ ಓದುಗ ವಲಯವು ಹೆಚ್ಚಾಗಿ ಪತ್ರಿಕೆಗಳ ಬೆಳವಣಿಗೆ ದಿನದಿಂದ ದಿನಕ್ಕೆ ವೃದ್ಧಿಯಾಯಿತು. ದೇಶ ವಿದೇಶಗಳ ಹಾಗೂ ಸ್ಥಳೀಯ ವೃತ್ತಾಂತಗಳನ್ನು ಕಾಗದದಲ್ಲಿ ಮುದ್ರಿಸಿ ಜನರಿಗೆ ಹಂಚುವ ವ್ಯಾಪಾರವು ಒಂದು ಉದ್ಯಮವಾಗಿ ಬೆಳೆಯತೊಡಗಿತು. ದಿನ ನಿತ್ಯದ ವಿಷಯಗಳನ್ನು ಜನರಿಗೆ ಮುಟ್ಟಿಸುವುದೇ ಪತ್ರಿಕೆಯ ಮುಖ್ಯ ಕಾರ್ಯವಾಗಿತ್ತು.

ಒಂದು ಆಡಳಿತ ವ್ಯವಸ್ಥೆಯ ಆಜ್ಞೆಗಳು ಅಥವಾ ನಿಯಮಗಳು ಅಥವಾ ಕಾನೂನುಗಳು, ಯಾವುದೇ ಪ್ರದೇಶದಲ್ಲಿ ನಡೆದ ಹಿಂಸಾಚಾರದ ಘಟನೆಗಳು ಆಡಳಿತದ ಅಧಿಕಾರಿಗಳು ಮಾಡುವ ಕಾಮಗಾರಿಯ ಉದ್ಘಾಟನೆ, ಯಾವುದೇ ಒಂದು ಸಮುದಾಯದವರು ಆಚರಿಸುವ ಹಬ್ಬ ಹರಿದಿನ ಅಥವಾ ಇತರ ಜಯಂತಿಗಳು, ಕೃಷಿ ಬಗೆಗಿನ ವಿಷಯಗಳು, ಉದ್ಯೋಗದ ಬಗ್ಗೆ ಮಾಹಿತಿ ಹೀಗೆ ಹಲವಾರು ವಿಷಯಗಳನ್ನು ಸಾಮೂಹಿಕ ವಲಯಕ್ಕೆ ತಲುಪಿಸುತ್ತಲೇ ಭಾಷೆ, ಸಾಹಿತ್ಯ, ಸಂಸ್ಕೃತಿಗೆ ಸಂಬಂಧಪಟ್ಟ ವಿಷಯಗಳು ಪತ್ರಿಕೆಯಲ್ಲಿ ಪ್ರಕಟವಾಗುವ ಪ್ರಯತ್ನವು ಸಾಹಿತ್ಯ ಬೆಳವಣಿಗೆಗೆಯ ಕುರಿತಂತೆ ಬಹಳ ಮುಖ್ಯವಾದ ಅಂಶವಾಗಿದೆ.

ಪತ್ರಿಕೆಗಳಲ್ಲಿ ಸಾಹಿತ್ಯದ ಕುರಿತಾದ ವಿಷಯಗಳು ಮನರಂಜನೆಯ ಆಕರ್ಷಣೆಯಿಂದಲೇ ಮೊದಲಾಯಿತೆನ್ನ ಬಹುದು ಕತೆ, ಕವನ, ನಗೆಹಣಿ ಮುಂತಾದವು. ದಿನಪತ್ರಿಕೆಗಳ ಸಾಪ್ತಾಹಿಕ ಪುರವಣಿಗಳು, ಮಾಸ ಪತ್ರಿಕೆಗಳು, ವಾರ ಪತ್ರಿಕೆಗಳು, ಮುಂತಾದವುಗಳಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ವಿಷಯಗಳು ಪ್ರಕಟಗೊಳ್ಳುತ್ತವೆ. ಇಲ್ಲಿ ಓದುಗನದು ಮುಖ್ಯಪಾತ್ರವಾಗಿರುತ್ತದೆ. ಓದುಗೆ ವಲಯ ಹೆಚ್ಚಿದಂತೆಲ್ಲಾ ಪತ್ರಿಕೆಗಳ ಚಂದಾದಾರರು ಸಂಖ್ಯೆಯೂ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಾರೆ. ಪತ್ರಿಕಾ ಕ್ಷೇತ್ರದಲ್ಲಿನ ಇಂತಹ ಸಕಾರಾತ್ಮಕ ಬೆಳವಣಿಗೆ ಸಾಹಿತ್ಯ ಬೆಳವಣಿಗೆಯ ಕೈಗನ್ನಡಿ.

ಸಾಹಿತ್ಯ ಪತ್ರಿಕೆಗಳ ಅದರದೇ ಆದ ಲಕ್ಷಣಗಳಿವೆ. ಸಾಹಿತ್ಯ ಪತ್ರಿಕೆಗಳು ಸಾಹಿತ್ಯಕ ಚರ್ಚೆ, ವಿಮರ್ಶೆ, ಸಿದ್ಧಾಂತಗಳ ಪ್ರಕಟಣೆಗೆ ಮೀಸಲಾದವು. ಸಮಾಜದಲ್ಲಿಯ ನಿದಿರ್ಷ್ಟ ವರ್ಗದವರು ಮಾತ್ರ ಇದರ ಓದುಗರು ಇದು ನಮ್ಮ ಸಂಸ್ಕೃತಿಯ ದಾಖಲೆಯಾಗಿ ಉಳಿಯುತ್ತದೆ. ಪ್ರಸಾರದ ಸಂಖ್ಯೆಯನ್ನು ಗಮನಿಸಿದಾಗ ಸಾಹಿತ್ಯ ಪತ್ರಿಕೆಗಳ ಪ್ರಸಾರ ಸಂಖ್ಯೆ ಸಾಮಾನ್ಯವಾಗಿ ಕಡಿಮೆ ಇರುತ್ತದೆ. ಹೆಚ್ಚಾಗಿ ಮಾಸಿಕ, ತ್ರೈಮಾಸಿಕ, ದ್ವೈಮಾಸಿಕ ಅರ್ಧವಾರ್ಷಿಕ, ವಾರ್ಷಿಕ, ಸಂಚಿಕೆಗಳಾಗಿರುತ್ತವೆ. ಲೇಖಕರ ಅಭಿರುಚಿಯ ನಿರ್ಮಾಣದಲ್ಲಿ ಸಂಸ್ಕೃತಿಯನ್ನು ಕಾಯ್ದುಕೊಳ್ಳುವಲ್ಲಿ ಮಾತ್ರ ಇವು ಪ್ರಮುಖ ಪಾತ್ರ ವಹಿಸುತ್ತವೆ. ಸಾಹಿತ್ಯ ಪತ್ರಿಕೆಗಳು ಅಂದಂದಿನ ಸಾಹಿತ್ಯ ಕೃತಿಗಳು, ಸಾಹಿತ್ಯ ಚಳುವಳಿಗಳ ವಿವರಗಳನ್ನು ತಿಳಿಸುವ ಅಪರೂಪದ ದಾಖಲೆಗಳಾಗಿವೆ. ಸಾಹಿತ್ಯ ಪತ್ರಿಕೆಗಳು ಓದುಗ ಅಥವಾ ಸಹೃದಯ ಮತ್ತು ಸಾಹಿತ್ಯ ಬರೆಯುವಂತವರಿಗೂ ಪ್ರೇರಣೆಗಳಾಗುತ್ತವೆ. 'ಸ್ಟಾಂಡ್ ಮ್ಯಾಗಜಿನ್' ಎಂಬ ಆಂಗ್ಲ ಮಾಸ ಪತ್ರಿಕೆಯನ್ನು ನೋಡಿದ್ದರಿಂದ ತಮಗೆ ಸಣ್ಣಕಥೆ ಬರೆಯುವುದಕ್ಕೆ ಪ್ರೇರಣೆ ದೊರೆಯಿತು ಎಂದು ಮಾಸ್ತಿಯವರು ಹೇಳಿದ್ದಾರೆ.

ಭಾರತದ ಸಂದರ್ಭದಲ್ಲಿ ಸಾಹಿತ್ಯ ಪತ್ರಿಕೆಯ ಬೆಳವಣಿಗೆಯ ಇತಿಹಾಸವನ್ನು ನೋಡಿದರೆ ಇಂಗ್ಲೀಷ್ ಪತ್ರಿಕೆಗಳೇ ಭಾರತದಲ್ಲಿ ಸಾಹಿತ್ಯ ಪತ್ರಿಕೆಗಳ ಮೇಲೆ ಪ್ರಭಾವ ಬೀರಿವೆ ಎನ್ನಬಹುದು. ಹಾಗೂ ಸಾಹಿತ್ಯ ಪತ್ರಿಕೆಗಳ ಪ್ರಕಟಣೆಯ ಆರಂಭ ಭಾರತದಲ್ಲಿ ಇಂಗ್ಲೀಷ್ ಭಾಷೆಯ ಪತ್ರಿಕೆಯಿಂದಲೇ ಆಯಿತು. "೧೭೮೫ರಲ್ಲಿ ಪ್ರಕಟವಾದ 'ಏಶಿಯಾಟಿಕ್ ಮಿಸೆಲನಿ' ಎಂಬ ಆಂಗ್ಲಭಾಷೆಯ ಪತ್ರಿಕೆಯ ಭಾರತದ ಮೊದಲ ಸಾಹಿತ್ಯ ಪತ್ರಿಕೆ."[೨೫]

"೧೮೫೯ ರಲ್ಲಿ ಮಂಗಳೂರಿನಲ್ಲಿ ರೆ.ಜಾನ್ ಮ್ಯಾಕ್ (Rev. John Mack) ಎಂಬುವರು ಆರಂಭಿಸಿದ ಪತ್ರಿಕೆ 'ಸಚಿತ್ರ ಕನ್ನಡ ಸಾಹಿತ್ಯ ಪತ್ರಿಕೆ'ಯು ಐತಿಹಾಸಿಕವಾಗಿ ಕನ್ನಡದ ಮೊದಲ ಸಾಹಿತ್ಯ ಪತ್ರಿಯಾಗಿದೆ."[೨೬] ಈ ಪತ್ರಿಕೆಯ ಪ್ರಕಟಣೆಯಲ್ಲಿ ರೆ.ಜಾನ್‌ಮ್ಯಾಕ್‌ಗೆ ಸಹಾಯಕರಾಗಿ ಹಾಗೂ ಸಂಪಾದಕರಾಗಿಯು ರೆ.ಎಫ್.ಕಿಟ್ಟೆಲ್ ಇದ್ದರು. ಈ ಪತ್ರಿಕೆಯು ೧೮೬೨ ರವರೆಗೂ ನಡೆಯಿತು. ಪ್ರತಿ ತಿಂಗಳು ಪ್ರಕಟವಾಗುತ್ತಿದ್ದು ಬೈಬಲ್ ಮತ್ತು ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು ಪ್ರಕಟಗೊಳ್ಳುತ್ತಿದ್ದವು. ಈ ಪ್ರತಿಕೆಯನ್ನು ದಿ ಇಲ್‌ಸ್ಟೇಟಿಡ್ ಕೆನರೀಸ್ ಜನರಲ್ (The illurtrated canarese journal) 'ವಿಚಿತ್ರ ವರ್ತಮಾನ ಸಂಗ್ರಹ' ಎಂಬುದಾಗಿಯೂ ಕರೆಯಲಾಗುತ್ತಿತ್ತು. ಕತೆಗಳೂ, ನೀತಿಕತೆಗಳೂ, ಪದ್ಯಗಳೂ. ಇತ್ಯಾದಿಗಳನ್ನು ಪ್ರಕಟಿಸುವ ಮೂಲಕ ಅದು ಸಾಹಿತ್ಯದ ಪೋಷಣೆ ಮಾಡಿತು.

"೧೮೭೪ ರಿಂದ 'ಕರ್ನಾಟಕ ಜ್ಞಾನ ಮಂಜರಿ' ಎಂಬ ಪತ್ರಿಕೆಯು ಬೆಳಗಾವಿಯಿಂದ ಪ್ರಕಟವಾಗಯಿತ್ತಿತ್ತು."[೨೭] ಇದು ಕೂಡ ಸಾಹಿತ್ಯ ಪತ್ರಿಕೆಯಾಗಿತ್ತು. ೧೯೮೩ರಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ಹಿತಭೋದಿನಿ' ಎಂಬ ಪತ್ರಿಕೆಯು ಕೂಡ ಅಂದಿನ ಸಂದರ್ಭದ ಸಾಹಿತ್ಯ ಪತ್ರಿಕೆ. ೧೮೯೨ ರಲ್ಲಿ 'ಗ್ರಾಜುಯೆಟ್ ಟ್ರೇಡಿಂಗ್ ಅಸೋಸಿಯೇಷನ್ (ಜಿಟಿಎ)'ದವರು 'ಕರ್ನಾಟಕ ಗ್ರಂಥಮಾಲೆ' ಮತ್ತೊಂದು ಮುಖ್ಯವಾದ ಸಾಹಿತ್ಯ ಪತ್ರಿಕೆ ಹೊರಬಂದಿತು. ಆನಂತರಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘದವರು ೧೮೯೬ ರಲ್ಲಿ 'ವಾಗ್ಭೂಷಣ' ಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯ ಸಾಹಿತ್ಯಕ ಕ್ಷೇತ್ರದಲ್ಲಿ ಸಾಕಷ್ಟು ಕಾರ್ಯನಿರ್ವಹಿಸಿತು. ೧೯೦೦ ರಲ್ಲಿ 'ಸುವಾಸಿನಿ' ಮತ್ತು ೧೯೦೫ ರಲ್ಲಿ ಶ್ರೀ ಕೃಷ್ಣಸೂಕ್ತಿ ಎಂಬ ಪತ್ರಿಕೆಗಳು ಸಾಹಿತ್ಯ ಪತ್ರಿಕೆಗಳು ಎನಿಸಿಕೊಂಡು ಸಾಕಷ್ಟು ಸಾಹಿತ್ಯ ಪರ ಕೆಲಸಗಳನ್ನು ಮಾಡಿವೆ. ಈ ಎಲ್ಲಾ ಪತ್ರಿಕೆಗಳು ಒಂದೊಂದು ರೀತಿಯಲ್ಲಿ ಸಾಹಿತ್ಯ ಬೆಳವಣಿಗೆ ಪೂರವಾಗಿಯೇ ಕಾರ್ಯನಿರ್ವಹಿಸಿವೆ.

ಪ್ರತಿಯೊಂದು ಸಾಹಿತ್ಯ ಪತ್ರಿಕೆಯು ಪ್ರಕಟಮಾಡಿರುವಂತಹ ಸಾಹಿತ್ಯ ಕುರಿತಾದ ವಿಷಯಗಳಿಂದಲೇ ಸಾಹಿತ್ಯ ಪತ್ರಿಕೆ ಎಂಬ ಕೀರ್ತಿಗೆ ಒಳಗಾಗಿರುವಂತಹದ್ದು ತಂತ್ರಜ್ಞಾನದ ಆವಿಷ್ಕಾರದಿಂದ ಸಮಾಜಕ್ಕೆ ಆಗುವ ಉಪಯೋಗ, ಕೊಡುಗೆಯ ಪ್ರಾರಂಭಿಕ ಹಂತದಲ್ಲಿ ಜನರಲ್ಲಿ ಹೊಸ ಹೊಸ ವಿಷಯ-ವಿಚಾರಗಳನ್ನು ತಲುಪಿಸಿ ಅವರಲ್ಲಿ ಸುತ್ತ-ಮುತ್ತಲಿನ ಪರಿಸರದ ಜ್ಞಾನವನ್ನು ತಿಳಿಸುವುದರೊಂದಿಗೆ ಒಂದು ಭಾಷೆಯನ್ನಾಡುವ ಜನರಲ್ಲಿ ತಮ್ಮ ಭಾಷೆಯ ಸಾಹಿತ್ಯದ ಸವಿಯನ್ನು ಹನಿಹನಿಯಾಗಿ ಉಣಬಡಿಸಿದ ಪ್ರಯತ್ನ ಸಾಹಿತ್ಯ ಪತ್ರಿಕೆಗಳಿಂದ ಆಯಿತು. ಅದು ಬೀಜದಿಂದ ವೃಕ್ಷದ ಹಾಗೆ ಸಾಂದರ್ಭಿಕ ಕೆಲವು ಪ್ರಯತ್ನದಿಂದಲೇ ಆಯಿತು. ಇದಕ್ಕೆ ನಮ್ಮನಾಡಿನಲ್ಲಿ ಪ್ರಾರಂಭವಾದ ಸಾಹಿತ್ಯ ಪತ್ರಿಕೆಗಳ ಪ್ರಯತ್ನ ಬಹುಮುಖ್ಯವಾಗಿರುವಂತಹದ್ದು.

೧೮೭೪ ರಿಂದ ಪ್ರಕಟವಾದ 'ಕರ್ನಾಟಕ ಜ್ಞಾನಮಂಜರಿ' ಮಾಸ ಪತ್ರಿಕೆಯಲ್ಲಿ ಸಾಹಿತ್ಯಕ ವೈಜ್ಞಾನಿಕ ಲೇಖನಗಳು ಪ್ರಕಟಗೊಂಡಿವೆ. ಇದರ ಒಂದು ಸಂಚಿಕೆಯಲ್ಲಿ ಮಾಲಕಾಗ್ನಿಮಿತ್ರ ನಾಟಕ, ಕುರಿತಂತೆ ಲೇಖನ ಪ್ರಕಟಗೊಂಡಿವೆ. ೧೮೮೩ ರಲ್ಲಿ ಬೆಂಗಳೂರಿನಿಂದ ಆರಂಭವಾದ 'ಹಿತಬೋದಿನಿ' ಪತ್ರಿಕೆ ಎಂ.ಬಿ.ಶ್ರೀನಿವಾಸಯ್ಯಂಗಾರ್ ಮತ್ತು ಎಂ.ಎಸ್. ಪುಟ್ಟಣ್ಣ ಇವರ ಸಂಪಾದಕತ್ವದಲ್ಲಿ ನಡೆಯಿತು. ಇದರಲ್ಲಿ ಶಾಸ್ತ್ರಗಳಲ್ಲಿರುವ ವಿಷಯಗಳನ್ನು ಹೇಳುವುದಲ್ಲದೆ ವಿನೋದಕರವಾದ ಮತ್ತು ನೀತಿ ಪ್ರದರ್ಶಕವಾಗಿರುವ ಕಥೆಗಳು ಪ್ರಕಟವಾದವು. ಮೈಸೂರಿನ ಕೆಲವು ಪದವೀಧರರು ಸೇರಿಕೊಂಡು ೧೮೯೨ ರಲ್ಲಿ ಗ್ರಾಜುಯೇಟ್ ಟ್ರೇಡಿಂಗ್ ಅಸೋಸಿಯೇಶನ್ (G.T.A)ಸ್ಥಾಪಿಸಿಕೊಂಡು ಈ ಅಸೋಸಿಯೇಶನ್‌ನಲ್ಲಿ 'ಕರ್ನಾಟಕ ಗ್ರಂಥಮಾಲೆ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯ ಮೂಲಕ ಹಳೆಯ ಕೃತಿಗಳ ಸಾರವನ್ನು ಜನತೆಗೆ ನೀಡಿದರು. ಅಲ್ಲದೆ ಹೊಸ ಗದ್ಯಗಳ ಕೃತಿಗಳನ್ನು ಇಂಗ್ಲೀಷ್ ಕೃತಿಗಳ ರೂಪಾಂತರವನ್ನು ಮಾಡಿ ಸಾಹಿತ್ಯ ಅಧ್ಯಯನಕ್ಕೆ ಪ್ರೇರಣೆ ನೀಡಿದರು. ಮೈಸೂರು ಸಂಸ್ಥಾನದಲ್ಲಿ ಹಿರಿಯ ಅಧಿಕಾರಿಗಳಾಗಿದ್ದ ಎಂ ಶಾಮರಾಯರು 'ವಿದ್ಯಾದಾಯನೀ' ಎಂಬ ಸಾಹಿತ್ಯ ಮತ್ತು ಶೈಕ್ಷಣಿಕ ಪತ್ರಿಕೆಯನ್ನು ತಂದು ಸಾಹಿತ್ಯಕ ಕಾರ್ಯ ಮಾಡಿದ್ದಾರೆ. ಎಂ.ಎ. ರಾಮಾನುಜಯ್ಯಂಗಾರ್ ಹಾಗೂ ಎಸ್.ಜಿ. ನರಸಿಂಹಚಾರ್ಯರು 'ಕರ್ನಾಟಕ ಕಾವ್ಯ ಮಂಜರಿ' ಎಂಬ ಪತ್ರಿಕೆಯಿಂದ ಪ್ರಾಚೀನ ಕಾವ್ಯಗಳನ್ನು ಪ್ರಕಟಿಸಿದ್ದಾರೆ.

"ಉತ್ತರ ಕರ್ನಾಟಕದಲ್ಲಿ ೧೮೯೪ ರಲ್ಲಿ ಬಿಜಾಪುರದ ಹೈಸ್ಕೂಲೊಂದರಲ್ಲಿ ಶಿಕ್ಷಕರಾಗಿದ್ದ ಮೂವರು ಯುವ ಮಿತ್ರರು ಸಂಸ್ಕೃತ, ಇಂಗ್ಲೀಷ್ ಕೃತಿಗಳ ಸಾರವನ್ನು ಕನ್ನಡದಲ್ಲಿ ಸರಳ ಗದ್ಯದಲ್ಲಿ ಕೊಡಬೇಕು ಎಂದು ಯೋಚಿಸಿ ಅವುಗಳ ಪ್ರಕಟಣೆಗಾಗಿ 'ಕರ್ನಾಟಕ ಭಾಷಾ ಸೇವಕ' ಎಂಬ ಪತ್ರಿಕೆಯನ್ನು ಆರಂಭಿಸುತ್ತಾರೆ. ಶೇಷಗಿರಿರಾವ್ ಕೊಣ್ಣೂರ್ ಬರೆದ 'ಕೇಡು ತಂದ ಉಂಗುರ' (ಶಾಕುಂತಲ ಕಥೆ) ಹಣಮಂತರಾವ್ ಸಾಗರ ಇವರ 'ಅಂತಪುರದ ರಹಸ್ಯ (Lovers of Harm) ಇದರ ಭಾಷಾಂತರ ಮತ್ತು ಕೃಷ್ಣರಾವ್ ಹುನಗುಂದ ಇವರ 'ಕುರುಹಿನ ಬಿಕುಳಹಾರ' ('ಮಾಲತೀ ಮಾಧವ' ಕಥಾನುವಾದ) ಧಾರವಾಹಿಯಾಗಿ ಬಂದು ನಂತರ ಪುಸ್ತಕ ರೂಪದಲ್ಲಿ ಬಂದವು. ಹಾಗೆಯೇ ಕೃಷ್ಣರಾವ್ ಹುನಗುಂದ ಇವರು ಮುದ್ರರಾಕ್ಷಸದ ಅನುವಾದ ಪ್ರಾರಂಭಿಸಿದರು."[೨೮]

"ಧಾರವಾಡದ ವಿದ್ಯಾವರ್ಧಕ ಸಂಘದಿಂದ ೧೮೯೬ರಲ್ಲಿ 'ವಾಗ್ಭೂಷಣ' ಪ್ರತಿಕೆ ಆರಂಭವಾಯಿತು. ಹಲವು ರೀತಿಯ ಸಾಹಿತ್ಯ ಚರ್ಚೆಗಳು ವಿಮರ್ಶೆಗಳು ಹೊಸ ಬರೆಹಗಳು ಈ ಪತ್ರಿಕೆಯಲ್ಲಿ ಪ್ರಕಟಣೆಯಾದವು. ಈ ಪತ್ರಿಕೆಯ ಪ್ರಕಟಕರು ಬಹುಮಾನ ಘೋಷಣೆ ಮಾಡಿ ಹೊಸ ಗ್ರಂಥಗಳನ್ನು ಬರೆಯಿಸುವ ಕಾರ್ಯವನ್ನು ಆರಂಭಿಸಿದರು. ವಿದ್ಯಾವರ್ಧಕ ಸಂಘವು ಈ ಪತ್ರಿಕೆಯ ಮೂಲಕ ೮೫ ಪುಸ್ತಕಗಳನ್ನು ಹಾಗೂ ಸ್ವತಂತ್ರವಾಗಿ ೧೧ ಪುಸ್ತಕಗಳನ್ನು ಪ್ರಕಟಿಸಿತು. ಹಲವು ಸ್ವತಂತ್ರ ವಿಚಾರಧಾರೆಯ ಜೊತೆಗೆ ಗಳಗನಾಥರ ಮೊದಲ

ಕಾದಂಬರಿ 'ಪದ್ಮನಯನ' ಧಾರಾವಾಹಿಯಾಗಿ ಈ ಪತ್ರಿಕೆಯಲ್ಲಿ ಪ್ರಕಟಗೊಂಡಿತು. ನವೋದಯ ಕಾವ್ಯಕ್ಕೆ ಹೊಸ ದಿಕ್ಕನ್ನು ತೋರಿಸಿದ ಪ್ರಾಸ ಸಂಬಂಧಿ ನಾಗ್ವಾದದಲ್ಲಿ ಈ ಪತ್ರಿಕೆಯನ್ನು ವೇದಿಕೆಯನ್ನು ಒದಗಿಸಿಕೊಟ್ಟಿತು. ಈ ಸಂದರ್ಭದ ಉತ್ತರ ಕರ್ನಾಟಕದ ಸಾಂಸ್ಕೃತಿಕ ಬದುಕಿನಲ್ಲಿ 'ವಾಗ್ಭೂಷಣ' ಪತ್ರಿಕೆ ಬಹುದೊಡ್ಡ ಪಾತ್ರ ನಿರ್ವಹಿಸಿತು."[೨೫]

'ಸುವಾಸಿನಿ' ಎಂಬ ಸಾಹಿತ್ಯ ಪತ್ರಿಕೆ ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ ೧೯೦೦ ರಲ್ಲಿ ಪ್ರಾರಂಭವಾಯಿತು. ಪಂಜೆ ಮಂಗೇಶರಾಯರು ಉಳ್ಳಾಲ ಬಿ.ವೆಂಕಟಚಾರ್ಯ, ನರಹರಯ್ಯ, ಆರ್ ಶ್ರೀನಿವಾಸರಾವ್, ಎಂ.ಎಸ್. ಶ್ರೀನಿವಾಸರಾವ್‌ರೊದ್ದ, ಇನಮತಿ, ಕೆ.ವಿ.ಶಾಸ್ತ್ರಿ ಸೇರಿದಂತೆ ಕನ್ನಡ ನಾಡಿನ ವಿವಿಧ ಭಾಗಗಳ ಲೇಖಕರು ಈ ಪತ್ರಿಕೆಯಲ್ಲಿ ಲೇಖನ ಬರೆಯುತ್ತಿದ್ದರು. 'ಬೆನಗಲ್ ರಾಮರಾಯರ' 'ರಾಧಾ ಮಾಧವ' ಬಿ. ವೆಂಕಟಾಚಾರ್ಯರ 'ಉನ್ಮಾದಿನಿ' ಕಾದಂಬರಿಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. 'ಮರಳಿ ನೀ ತಮ್ಮನ ಕರೆಯಪ್ಪಾ' (oh. Call my brother back to me) 'ಉತ್ತಮ ರಾಜ್ಯ (The better Land) ಇತ್ಯಾದಿ ಅನುವಾದಿತ ಕವನಗಳು 'ಪ್ರಥುಲಾ', 'ದುರ್ಗಾವತಿ', ನನ್ನ 'ಚಿಕ್ಕತಂದೆ', 'ನನ್ನ ಚಿಕ್ಕತಾಯಿ', 'ನನ್ನ ಹೆಂಡತಿ' ಮೊದಲಾದ ಕತೆ ಕವನಗಳು ಪ್ರಕಟವಾದವು. ರಾ.ಕೃ.ಇನಾಮಿತ ಅವರ ಐತಿಹಾಸಿಕ ಕಾದಂಬರಿ 'ಆರ್ಯಾವರ್ತನ' ಮೊದಲ ಚಕ್ರವರ್ತಿ ಇದರಲ್ಲಿ ಪ್ರಕಟವಾಯಿತು. ಹಲವಾರು ಅಡಿಟಿಪ್ಪಣಿಗಳನ್ನು ಈ ಕಾದಂಬರಿಗೆ ಕೊಡಲಾಗಿತ್ತು. 'ರಾವಬಹದ್ದೂರ' 'ವೀರೇಶಲಿಂಗಂ' 'ಪಂತುಲು' 'ರಾಜಾ ರವಿವರ್ಮ' ಎನ್ನಿಬೆಸೆಂಟರವರ ಸೇರಿದಂತೆ ಮೊದಲಾದವರ ಚರಿತ್ರೆಯು ಹಾಗೂ 'ಭೂಮಿಶಾಸ್ತ್ರ' ಎಂಬ ಶಾಸ್ತ್ರೀಯ ಗ್ರಂಥ ಗ್ರಂಥವೊಂದು ಸಚಿತ್ರವಾಗಿ ಧಾರವಾಹಿಯಾಗಿ ಪ್ರಕಟವಾಗಿದೆ. 'ಕಬ್ಬಿಣದ ಬುದ್ದಿವಾದ' ಎಂಬ ನೀತಿ ಹೇಳುವ ದೀರ್ಘ ಕವನ ಪ್ರಕಟವಾಗಿದೆ. 'ಸಾಹಿತ್ಯಕ ವಾಗ್ವಾದಗಳಿಗೂ ವೇದಿಕೆಯಾದ ಈ ಪತ್ರಿಕೆ ಕಾದಂಬರಿ ಪ್ರಕಾರ ಕನ್ನಡದಲ್ಲಿ ನೆಲೆಕಂಡುಕೊಳ್ಳುತ್ತಿದ್ದಾಗ ಆ ಪ್ರಕಾರಕ್ಕೆ 'ಕಾದಂಬರಿ' ಎಂಬ ಹೆಸರು ಸೂಕ್ತವೆ ಎಂಬ ಜಿಜ್ಞಾಸೆ ನಡೆದಿದ್ದು ಈ ಪತ್ರಿಕೆಯಲ್ಲಿ. ಸಾಹಿತ್ಯ ಪತ್ರಿಕೆಗಳಲ್ಲಿ ಸಾಹಿತ್ಯದ ವಿಷಯದ ಜೊತೆಗೆ ಸಮಾಜ ಸುಧಾರಣೆ ಕುರಿತಂತೆ ಕೆಲವು ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟವಾದವು. ಮುಂಬಯಿಯ 'ಕನ್ನಡ ಸುವಾರ್ತೆ'ಯಲ್ಲಿ ವಿಧವಾ ಪುನರ್ ವಿವಾಹದ ಬಗ್ಗೆ ಸಾರತ್ವದ ಸಮಾಜದವರು ಕೈಗೊಂಡ ನಿರ್ಣಯಗಳು ಬಂದಿವೆ. ಇವೆಲ್ಲಾ ಮುಂದೆ ಗುಲ್ವಾಡಿ ವೆಂಕಟರಾಯರು 'ಇಂದಿರಾಬಾಯಿ' ಕಾದಂಬರಿ ಬರೆಯುವುದಕ್ಕೆ ಪ್ರೇರಣೆ ಒದಗಿಸಿದವು.

ಇದೇ ಸಂದರ್ಭದಲ್ಲಿ "ಪತ್ರಿಕೆಗಳ ಮೂಲಕ ಗದ್ಯದ ಹಲವು ರೀತಿಯಲ್ಲಿ ಬಳಕೆಯಾಯಿತು. 'ಹಲವು ವಿಷಯಗಳಿಗೆ ಅಭಿವ್ಯಕ್ತಿ ನೀಡುವಾಗ ಭಾಷೆಗೆ ಹೊಸ ಕಸುವು ದೊರೆಯಿತು'. ಪದ್ಯದಲ್ಲಿ ತಟ್ಟನೆ ಗೋಚರವಾಗುವ ಹೊಸತನ ಇದ್ದರೂ ರೂಪ ಮಾತ್ರ ಹಳೆಯದೇ ಇತ್ತು. ಉದಾ : ೧೮೮೬ ರ ಸೆಪ್ಟೆಂಬರ್ ತಿಂಗಳಿನಲ್ಲಿ 'ಹಿತಬೋಧಿನಿಯಲ್ಲಿ' 'ಮಂಗಳಾಭಿಮಾನಿ' ಎನ್ನುವರು ಬರೆದಿರುವ ಪದ್ಯ ಉದಾ :

ಉಕ್ಕುವ ಸಂತೋಷದಿ ತಾ!
ನಕ್ಕನ ಕಂಡೋಡಿ ಬಂದು ಪೇಳ್ದಳ್ ನೀನಂ
ದುಕ್ಕಿಪೆಯಕ್ಕಾ ? ಭಾವನು
ದಿಕ್ಕರಿಸಿಸದನೇನು, ನಾನು ಕೇಳುವೆನವನಂ

ತಂಗಿ/ತಮ್ಮಗೆ ಅಕ್ಕನ ನೋಡಿದ ಸಂತೋಷ, ಆಕೆಯ ದುಃಖ ಕಂಡು ಆಗುವ ದುಗುಡ ಭಾವನ ಮೇಲೆ ಅನುಮಾನ, ಅವನನ್ನು ತಾನು ವಿಚಾರಿಸುವೆನೆಂಬ ಸಮಾಧಾನದ ಭರವಸೆ ಇವೆಲ್ಲವನ್ನು ಅತ್ಯಂತ ಪರಿಣಾಮಕಾರಿಯಾಗಿ ಈ ಪದ್ಯದಲ್ಲಿ ಸೆರೆಹಿಡಿಯಲಾಗಿದೆ. ಆದರೆ ಬಳಸಿದ್ದ ಕಂದ ಪದ್ಯವನ್ನು ಕಾವ್ಯದ ವಸ್ತು ಭಾವಗಳೆಲ್ಲ ಬದಲಾದರೂ ರೂಪ ಮಾತ್ರ ಬೇರೆ.

ಇಷ್ಟೇ ಉತ್ತಮವಾದ ಪದ್ಯಗಳು ಎಲ್ಲಾ ಸಮಯದಲ್ಲೂ ಎಲ್ಲರಿಂದಲೂ ಬಂದವು ಎಂದಲ್ಲ; ಉತ್ತಮ ಪದ್ಯಗಳು ಬರದೆ ಇದ್ದಾಗ ಟೀಕೆಗಳೂ ಬಂದಿವೆ. ಸಾಹಿತ್ಯದ ಸಂಕ್ರಮಣದ ಕಾಲದಲ್ಲಿ ಉತ್ತಮ ಕೃತಿಗಳ ಜೊತೆಯಲ್ಲಿ ನಿಕೃಷ್ಟ ಕೃತಿಗಳೂ ಬರುವುದು ಸಹಜವಾಗಿರುತ್ತದೆ. ಆದುದರಿಂದ ಸಾಹಿತ್ಯ ಪತ್ರಿಕೆಗಳು ಇಂಥ ಕಳೆಯನ್ನು ಕೆಲಸಮಾಡಿವೆ."[೩೦]

ಬಂಗಾಳ ವಿಭಜನೆಯಿಂದ ಏಕೀಕರಣದ ವರೆಗಿನ ಕಾಲಘಟ್ಟ ರಾಜಕೀಯ, ಸಾಂಸ್ಕೃತಿಕ ರಂಗದಲ್ಲಿ ಅತ್ಯಂತ ಮಹತ್ವದ ಕಾಲವಾಗಿದೆ. ಈ ಕಾಲಘಟ್ಟದಲ್ಲಿಯೂ ಪತ್ರಿಕೆ ಮತ್ತು ಸಾಹಿತ್ಯದ ಆಶಯ ಒಂದೇ ಆಗಿತ್ತು. ಈ ಐದು ದಶಕಗಳ ಅವಧಿಯಲ್ಲಿ "ಆಧುನಿಕ ಕನ್ನಡ ಸಾಹಿತ್ಯದ ಮೂರು ಪ್ರಮುಖ ಪಂಥಗಳು ಪ್ರಾರಂಭಗೊಂಡವು. ನವೋದಯ, ನವ್ಯ, ಪ್ರಗತೀಶೀಲ ಪಂಥಗಳು ತಮ್ಮ ನೆಲೆಗಳನ್ನು ಭದ್ರಪಡಿಸಿಕೊಂಡಿದ್ದು ಪತ್ರಿಕೆಗಳ ಮೂಲಕವೇ. ಈ ಸಾಹಿತ್ಯ ಪಂಥಗಳ ತತ್ವಗಳು, ಸಾಹಿತ್ಯ ಮೀಮಾಂಸೆ, ವಿಮರ್ಶೆಗಳೆಲ್ಲ ಪತ್ರಿಕೆಯ ಮಾಧ್ಯಮದಿಂದಲೇ ಸ್ಥಾಪನೆಗೊಂಡವು. ಏಕೀಕರಣದ ವರೆಗಿನ ಪತ್ರಿಕೆಗಳಲ್ಲಿ ಮತ್ತು ಸಾಹಿತ್ಯದಲ್ಲಿ ನಾಡಿನ ಏಕೀಕರಣದ (ವರೆಗಿನ) ನುಡಿಯನ್ನು ಬಲಗೊಳಿಸಬೇಕೆಂಬ ಕಳಕಳಿ ಒಟ್ಟೊಟ್ಟಿಗೆ ಕಂಡುಬರುತ್ತದೆ. ಹಾಗೆಯೇ ಜೊತೆಯಲ್ಲಿ ದೇಶದ ಸ್ವಾತಂತ್ರ್ಯ ಹೋರಾಟದ ಬಗೆಗೆ ಗಾಂಧೀ ಚಿಂತನೆಗಳ ಬಗೆಗೆ ಸಾಹಿತಿಗಳು ಕೃತಿ ರಚನೆ ಮಾಡಿದ್ದಾರೆ. ಸ್ವಾತಂತ್ರ್ಯದ ಬಗೆಗಿನ ಕೃತಿಗಳಲ್ಲಿ ಬಸವರಾಜ ಕಟ್ಟೀಮನಿಯವರ 'ಮಾಡಿ ಮಡಿದವರು' ಪ್ರಮುಖವಾದುದು."[೩೧]

ಈ ಅವಧಿಯ ಕೊನೆಯಲ್ಲಿ ಪತ್ರಿಕೆ ನಡೆಸುವುದು ಲಾಭದಾಯಕ ಉದ್ಯೋಗವನ್ನಾಗಿ ಪರಿಗಣಿಸಲಾಯಿತು. ನುಡಿ ಸೇವೆಯೇ ನಾಡಸೇವೆ ಅದು ದೇಶ ಸೇವೆಯ ಇನ್ನೊಂದು ರೂಪ ಎಂಬ ಭಾವನೆ ಈ ಅವಧಿಯಲ್ಲಿತ್ತು. ದೇಶಕ್ಕೆ ಸ್ವಾತಂತ್ರವು ಬಂತು ನಾಡು ಏಕೀಕರಣವೂ ಆಯಿತು. ಪತ್ರಿಕೆಗಳ ಬಹುದೊಡ್ಡ ಜವಾಬ್ದಾರಿ ಮುಗಿದಂತೆ ಭಾಸವಾಯಿತು. ಇಂಥ ಒಂದು ನಿರ್ವಾತ ಸಮಯದಲ್ಲಿ ಸಾಹಿತ್ಯದ ಮುಖ್ಯ ಕಾಳಜಿಗಳನ್ನು ಪ್ರತಿಪಾದಿಸಬೇಕಾದ ಅಗತ್ಯ ಕೆಲವರಿಗೆ ತೋರಿತು. ಹೀಗಾಗಿ ಕೇವಲ ಸಾಹಿತ್ಯ ಚಳವಳಿಗಳ ಪ್ರತಿಪಾದನೆಗೆ ಪತ್ರಿಕೆಗಳು ನಂತರದ ಅವಧಿಯಲ್ಲಿ ಕಂಡುಬಂದವು.

ಏಕೀಕರಣದ ಕಾಲಘಟ್ಟದ ಐದು ದಶಕದ ಅವಧಿಯಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಉಗಮಗೊಂಡ ನವೋದಯ, (ನವ) ಪ್ರಗತಿಶೀಲ, ನವ್ಯ ಈ ಸಾಹಿತ್ಯ ಪಂಥಗಳ ತತ್ವಗಳು, ಸಾಹಿತ್ಯ ಮೀಮಾಂಸೆ, ವಿಮರ್ಶೆಗಳೆಲ್ಲ ಪತ್ರಿಕೆಯ ಮಾಧ್ಯಮದಿಂದಲೇ ಸ್ಥಾಪನೆಗೊಂಡವು. ಹಾಗೂ ಈ ಸಾಹಿತ್ಯ ಪಂಥಗಳ ಬೆಳವಣಿಗೆಗೆ ತುಂಬಾ ಸಹಕಾರಿಯಾಗಿ ಪತ್ರಿಕೆಗಳು ಕಾರ್ಯನಿರ್ವಹಿಸಿದವು.

ಐತಿಹಾಸಿಕವಾಗಿ ಬಿ.ಎಂ.ಶ್ರೀಯವರ ಗೀತೆಗಳು ಪ್ರಕಟವಾದದ್ದು ೧೯೨೧ರಲ್ಲಿ ಆಗ ಅದರಲ್ಲಿ ೧೨ ಗೀತೆಗಳಿದ್ದು ಮತ್ತು ೨೪ ಗೀತೆಗಳು ಡಿ.ವಿ. ಗುಂಡಪ್ಪನವರ 'ಕರ್ನಾಟಕ ಜನಜೀವನ' ಪತ್ರಿಕೆಯಲ್ಲಿ '೧೯೨೪ ರಲ್ಲಿ ಪ್ರಕಟವಾಯಿತು. ಮೈಸೂರು ಭಾಗದಲ್ಲಿ ತೀ.ನಂ.ಶ್ರೀ ಕುವೆಂಪು ಮೊದಲಾದವರ ಇದರ ಪ್ರಭಾವಕ್ಕೆ ಒಳಗಾದರು. ಈ ವೇಳೆಗಾಗಲೇ ಬೇಂದ್ರೆಯವರ (ಬೇಂದ್ರೆ) ಮೊದಲ ಕವಿತೆ 'ತುತ್ತೂರಿ' 'ಪ್ರಭಾತ' ಕವಿತೆಯಲ್ಲಿ ಪ್ರಕಟವಾಗಿತ್ತು. ೧೯೨೨ ರಲ್ಲಿ ಅವರ ಕೃಷ್ಣಕುಮಾರಿ ಕವನ ಸಂಕಲನ ಪ್ರಕಟವಾಗಿದೆ. ಹಾಗೆಯೇ ೧೯೧೯ರ ಸುಮಾರಿನಲ್ಲಿ 'ಸ್ವಧರ್ಮ' ಪತ್ರಿಕೆಯಲ್ಲಿ 'ಬೆಳಗು' ಕವಿತೆ ಪ್ರಕಟವಾಗಿದೆ. ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಅಥವಾ ನವೋದಯ ಯುಗದಲ್ಲಿ ಸಾಹಿತ್ಯ ಪ್ರೇರಣೆ ಅಂದಿನ ಜನಜೀವನದಲ್ಲಿ ಇರುವಂತಹದ್ದು ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಅಥವಾ ನವೋದಯ ಯುಗದಲ್ಲಿ ಮತ್ತು ಅದಕ್ಕೂ ಪೂರ್ವದಲ್ಲಿ ಪತ್ರಿಕೆಗಳು ಸೀಮಿತ ವಲಯದಲ್ಲಿದ್ದ ಸಾಹಿತ್ಯ ಸೃಷ್ಟಿಯನ್ನು 'ಜನಸಾಮಾನ್ಯಗೊಳಿಸುವ ಕೆಲಸವನ್ನು ಮಾಡಿದವು.

"೧೯೧೦ದ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದ ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಮತ್ತು ಪ್ರಬುದ್ಧ ಕರ್ನಾಟಕ ಹಾಗೂ ಉತ್ತರ ಕರ್ನಾಟಕದ ಧಾರವಾಡದಲ್ಲಿ ಗೆಳೆಯರ ಗುಂಪು ಮತ್ತು ಜಯಕರ್ನಾಟಗಳು ಹುಟ್ಟು ಪಡೆದವು. ಪ್ರಬುದ್ಧ ಕರ್ನಾಟಕ ೧೯೧೯ ರಲ್ಲಿ ಆರಂಭಗೊಂಡಿತು. ಈ ಪತ್ರಿಕೆಯಲ್ಲಿ ಸಾಹಿತ್ಯ ಮತ್ತು ಶಾಸ್ತ್ರ ವಿಚಾರಗಳು ಪ್ರಕಟಗೊಂಡವು. ಪ್ರಬಲದ್ಧ ಕರ್ನಾಟಕವನ್ನು ಟಿ.ಎಸ್. ವೆಂಕಣ್ಣಯ್ಯನವರೂ ಎ.ಆರ್. ಕೃಷ್ಣಶಾಸ್ತ್ರಿಗಳೂ ನಡೆಸಿದರು. ಬಿ.ಎಂ. ಶ್ರೀ ಕಂಠಯ್ಯನವರ ಬೆಂಬಲ ಇವರಿಗೆ ಇದ್ದೇ ಇತ್ತು. ಸಾಹಿತ್ಯ ಕ್ಷೇತ್ರಕ್ಕೆ ಹೊಸದಾಗಿ ಬಂದವರನ್ನು ತಿದ್ದಿ ಬೆನ್ನು ತಟ್ಟುವ ಹೊಸತನ್ನು ಪರಿಚಯಿಸುವ ಕೆಲಸವನ್ನು ಮಾಡಿದರು. ೧೯೨೩ ರಲ್ಲಿ ಅಲೂರ ವೆಂಕಟರಾಯರು ಜಯಕರ್ನಾಟಕ ಮಾಸ ಪತ್ರಿಕೆಯನ್ನು ಆರಂಭಿಸಿದರು."[೨] ಎ.ಆರ್. ಕೃಷ್ಣಶಾಸ್ತ್ರಿಯವರು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯನ್ನು ನಾಲ್ಕು ವರ್ಷಗಳ ಕಾಲ ಸಂಪಾದಕರಾಗಿ ನಡೆಸಿದ್ದು ಕವಿಕಾವ್ಯ ಪರಿಚಯ, ಕನ್ನಡ ಕಾವ್ಯ ಪ್ರಕಾರಗಳ ಪರಿಚಯ ಸಂದೇಹಗಳು, ಸೂಚನೆಗಳು, ಸಾಹಿತ್ಯ ಸಮ್ಮೇಳನಗಳು, ಸಮ್ಮೇಳನಾಧ್ಯಕ್ಷರು ಅಧ್ಯಕ್ಷರ ಭಾಷಣಗಳನ್ನು ಪ್ರಕಟಿಸುತ್ತ ಬಂದಿವೆ.

ಸಾಹಿತ್ಯವು ಹಲವು ನಿಟ್ಟಿನಿಂದ ಸೃಷ್ಟಿಯಾಗಲಾರಂಭಿಸಿದಾಗ ಒಂದು ರೀತಿಯ ಏಕತಾನತೆ ಮೂಡಿತು. ಈ ಏಕತಾನತೆಯ ಆಚೆ ನಿಂತು ಚಿಂತಿಸುವ ಬರಹಗಾರರು ಮೂಡಿಬಂದರು. ನವೋದಯದ ಸೌಂದರ್ಯ ಆರಾಧನೆಯ ವಿರುದ್ಧ ಪ್ರಗತಿಶೀಲರು ಬಂಡೆದ್ದರು. ಇದೇ ಸಂದರ್ಭದಲ್ಲಿಯೇ ಕತಿ ಕಲೆಗಾಗಿಯೋ ಅಥವಾ ಕಲೆ ಬದುರೆಗಾಗಿಯೋ ಎಂಬ ತಾತ್ವಿಕ ಪ್ರಶ್ನೆ ತಲೆ ಎತ್ತಿತ್ತು. ಪ್ರಗತಿಶೀಲ ಲೇಖಕರು ತಮ್ಮ ಆಲೋಚನೆಗಳನ್ನು ಅಂದಿನ ಹಲವು ಪತ್ರಿಕೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ನವ್ಯ ಸಾಹಿತ್ಯ ಚಳವಳಿಗೆ ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಬೇಕು ಎಂಬ ಬದ್ಧತೆಯೊಂದಿಗೆ 'ಸಾಕ್ಷಿ' ಪತ್ರಿಕೆಯು ಹುಟ್ಟಿಕೊಂಡಿತು. ಅನಂತರದಲ್ಲಿ ಲಹರಿ, ಸಂಕ್ರಮಣ, ಶೂದ್ರ, ಅನ್ವೇಷಣೆ ರುಜುವಾತು, ಸಂವಾದ ಮೊದಲಾದವು ಹುಟ್ಟಿದವು. ಸಾಕ್ಷಿಯ ನಂತರ ಲಹರಿ ಪತ್ರಿಕೆಯು ಪ್ರಾರಂಭವಾಯಿತು. ಲಹರಿ ಪತ್ರಿಕೆ ಅನೇಕ ಪಾಶ್ಚಾತ್ಯ ವಿದ್ವಾಂಸರ ಲೇಖನಗಳ ಕನ್ನಡ ಅನುವಾದವನ್ನು ಪ್ರಕಟಿಸಿತು. ಇದು ಹಲವು ವಿಚಾರಗಳು ಸಾಹಿತ್ಯಸ್ತಕ್ತರಿಗೆ ತಲುಪಿಸಿತು.

"೧೯೬೪ ರಲ್ಲಿ 'ಸಂಕ್ರಮಣ' ಪತ್ರಿಯನ್ನು ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜು ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿಯ ಮರು ಆರಂಭಿಸಿ ಸಾಹಿತ್ಯದ ವಿಷಯವನ್ನು ಪ್ರಕಟಿಸಿ ಜನರಿಗೆ ತಲುಪಿಸುವಲ್ಲಿ ಯಶಸ್ವಿಯಾದರು."[೩೩] ಲಿಪಿ ಪ್ರಕಾಶನದ ಮೂಲಕ ಉದ್ಯಮದಲ್ಲಿ ಹೆಸರು ಮಾಡಿದ ಕೆ.ಎಸ್. ಬಾಲಕೃಷ್ಣ (ಬಾಕಿನ) ಇವರು ೧೯೮೭ ರಿಂದ 'ಗಾಂಧಿಬಜಾರ' ಸಾಹಿತ್ಯ ಪತ್ರಿಕೆ ಪ್ರಕಟಮಾಡಿದರು. ಇವರು ೧೯೬೬ ರಿಂದ ೭೯ ರ ವರೆಗೆ ಕವಿತೆಗಳಿಗೆ ಕಾವ್ಯ ವಿಚಾರಕ್ಕೆ ಮೀಸಲಾಗಿದ್ದ 'ತ್ರೈಮಾಸಿಕ ಪತ್ರಿಕೆಯಾದ' 'ಕವಿತಾ' ಇದನ್ನು ನಡೆಸಿದ್ದರು. ಗಾಂಧಿ ಬಜಾರದಲ್ಲಿ ಸಾಹಿತ್ಯಕ ವಾಗ್ವಾದಗಳಿಗೆ ಅತ್ಯುತ್ತಮ ವೇದಿಕೆಯಾಯಿತು. 'ಗಾಂಧಿ ಬಜಾರದಲ್ಲಿ ಮರುಳಸಿದ್ದಪ್ಪ, ಚಂದ್ರಶೇಖರ ಕಂಬಾರ, ವಸಂತಕುಮಾರ ಪೆರ್ಲಿ, ವೇಣುಗೋಪಾಲ ಸೊರಬ, ಎಲ್.ಎಸ್.ಶೇಷಗಿರಿರಾವ್, ಡಾ.ಡಿ.ಬಿ.ರಾಮಚಂದ್ರಚಾರ, ಕೆ.ನರಸಿಂಹಮೂರ್ತಿ, ಟಿ.ಜಿ.ರಾಘವ, ಹರಿಹರಪ್ರಿಯ, ಬಿ.ವಿ.ವೈಕುಂಠರಾಜು ಎಚ್.ಎಸ್.ವೆಂಕಟೇಶಮೂರ್ತಿ, ಎಸ್.ವಿ.ಪ್ರಭಾವತಿ, ಜಿ.ಎಸ್. ಅಮೂರ, ರಾಮಚಂದ್ರದೇವ, ಬಾಲಸುಬ್ರಮಣ್ಯೆ ಕಂಜರ್ಪಣಿ ಕೆ.ಪಿ. ಸುರೇಶ, ಪುರುಷೋತ್ತಮ ಬಿಳಿಮಲೆಯವರ ನಾಗಮಂಡಲ ಒಂದು ಅಭ್ಯಾಸ, ಅಮೂರರ ಕೆ ಸದಾಶಿವ ಕತೆಗಳ ಶೇಷಗಿರಿ ರಾಯರ ಗೋಕುಲ-ನಿರ್ಗಮನ ಮೊದಲಾದ ಲೇಖನಗಳು ಹೊಸ ವಿಚಾರಗಳ ಕಡೆಗೆ ಗಮನ ಸೆಳೆಯುತ್ತದೆ.

"೧೯೮೧ ರಲ್ಲಿ ಯು. ಆರ್.ಅನಂತಮೂರ್ತಿಯವರ ಸಂಪಾದಕತ್ವದಲ್ಲಿ 'ರುಜುವಾತು' ಪ್ರಕಟವಾಯಿತು. 'ಸೃಜನಶೀಲ ಹೊಸ ಪ್ರಯೋಗಗಳಿಗಾಗಿ ಹೊಸದಿಕ್ಕಿನ ಹುಡುಕಾಟಕ್ಕಾಗಿ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದ ಶೋಧಕ್ಕಾಗಿ' 'ಎಂಬ ಹೇಳಿಕೆಯೊಂದಿಗೆ ಪ್ರಕಟಣೆ ಆರಂಭಿಸಿತು. ರುಜುವಾತು ಸಾಕ್ಷಿಯ ಹಾಗೆ ನವ್ಯ ಚಳವಳಿಗೆ ಪೂರಕವಾಗಿ ಕೆಲಸ

ಮಾಡಿತು. ಈ ಪತ್ರಿಕೆಯಲ್ಲಿ ಡಿ.ಆರ್. ನಾಗರಜ, ಯಶವಂತ ಚಿತ್ತಾಲ, ಗೌರೀಶ ಕಾಯ್ಕಿಣಿ ಮುಂತಾದವರು ಲೇಖನಗಳನ್ನು ಬರೆದಿದ್ದಾರೆ."[೩೪]

ಸಾಹಿತ್ಯ ಪತ್ರಿಕೆಗಳಲ್ಲಿ 'ಸಂವಾದ'ವೂ ಕೂಡ ಮುಖ್ಯವಾದುದಾಗಿದೆ. ಸಂವಾದ ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖಕರು ಕೆ.ವಿ.ಸುಬ್ಬಣ್ಣ, ಆರ್.ಕೆ. ಮಣಿಪಾಲ, ಕಾ.ತ.ಚಿಕ್ಕಣ್ಣ, ಪುರಷೋತ್ತಮ ಬಿಳಿಮಲೆ, ರಾಜರಾಮ ಹೆಗಡೆ ಎಸ್.ಪಟ್ಟಾಭಿರಾಮ ಸೋಮಯಾಜಿ, ಡಾ. ರಹಮತ್ ತರೀಕೆರೆ, ಪ್ರಹ್ಲಾದ ಅಗಸನಕಟ್ಟೆ, ಎಚ್.ಎಸ್. ವೆಂಕಟೇಶಮೂರ್ತಿ, ಸಂತೋಷ ಚೊಕ್ಕಾಡಿ ತೀ.ನಂ. ಶಂಕರನಾರಾಯಣ, ಕೆ.ವಿ. ತಿರುಮಲೇಶ, ಜಿ.ಎಸ್. ಶಿವರುದ್ರಪ್ಪ, ಚನ್ನವೀರಕಣವಿ, ಲಿಂಗದೇವರು ಹಳೇಮನೆ ಬಸವರಾಜ ಮಲಶೆಟ್ಟಿ, ಬಸವರಾಜ ಸಬರದ, ಎಚ್.ಎಸ್.ರಾಘವೇಂದ್ರ ರಾವ್ ಬಾಲಸುಬ್ರಹ್ಮಣ್ಯ ಕಂಜರ್ಪಣೆ ಮೊದಲಾದವರು ಸೇರಿದ್ದಾರೆ. ಸಂವಾದವು ಕುವೆಂಪು ಕಾದಂಬರಿಗಳಲ್ಲಿ ವಸಹತು ಶಾಹಿ (ಕೊಲೊನಿಯಲ್) ಅನುಭವದ ಸ್ವರೂಪ 'ಮಾಸ್ತಿಕತೆಗಳ ಹಿಂದಿರುವ ತಿಳುವಳಿಗೆ' 'ಸಂಸ್ಕೃತಿ ಮತ್ತು ಸಂಸ್ಥೆಗಳು ಒಂದು ಚರ್ಚೆ', 'ಆನಂದಕಂದರ ಪ್ರತಿಹಾಸಿಕ ಕಾದಂಬರಿಗಳು, ವಚನ ಸಂಸ್ಕೃತಿಯಲ್ಲಿ ಮಹಿಳೆ ಒಂದು ಗತಿಶೀಲ ಅಧ್ಯಯನ, ಸಾಹಿತ್ಯ ಪರಂಪರೆಯ ಸಾತತ್ಯ ಮತ್ತು ಸ್ಥಿತ್ಯಂತರ : ಕೆಲವು ಟಿಪ್ಪಣಿಗಳು ಹೀಗೆ ಹೊಸಚಿಂತನೆಯ ಲೇಖನಗಳು ಪ್ರಕಟವಾಗಿವೆ.

"೧೯೮೮ ರಲ್ಲಿ ಡಿ.ವಿ. ಪ್ರಹ್ಲಾದ, ರವಿಕುಮಾರ ಕಾಶಿ, ಎನ್.ಎಸ್. ಶ್ರೀಧರ ಮೂರ್ತಿ ಸೇರಿಕೊಂಡು 'ಸಂಚಯ' ಎಂಬ ದ್ವೈಮಾಸಿಕ ಪತ್ರಿಕೆಯನ್ನು ಹೊರತಂದರು. ಸು.ರಂ. ಎಕ್ಕುಂಡಿ ಸ್ಮರಣೆ, ರಾಮಣ್ಣನ ನೆನಪು ಕನ್ನಡದ ಸಣ್ಣಕತೆಗಳು ವಿಶೇಷ ಸಂಚಿಕೆ ಹೀಗೆ ಹಲವು ವಿಶೇಷ ಸಂಚಿಕೆಗಳನ್ನು ಹೊರತಂದಿವೆ. ಈ ಲೇಖನಗಳಲ್ಲಿ ವೈವಿಧ್ಯವಿದ್ದು ವಿಶೇಷ ಚಿಂತನೆಗಳಿಂದ ಕೂಡಿವೆ. ಸ್ವಾತಂತ್ರ್ಯಕ್ಕೆ ಐವತ್ತು ವರ್ಷ, ವ್ಯಾಪಾರಿ ಸಿನಿಮಾಗಳು–ಕಥನ ಸವಾಲುಗಳು: ನವ್ಯೋತ್ತರ ಕಲೆ ಮತ್ತು ಭಾರತೀಯ ಸಂದರ್ಭ ಕಾರಂತ ವ್ಯಕ್ತಿ ಚಿತ್ರ, ಪ್ರಭುತ್ವ ಮತ್ತು ಕನ್ನಡ ಸಾಹಿತಿಗಳು : ಕನ್ನಡದ ಸಣ್ಣ ಕಥೆಗಳು ವಿಭಿನ್ನ ನೆಲೆಯಲ್ಲಿ ಲೇಖನಗಳು ಬಂದಿವೆ."[೩೫]

"೧೯೭೭ ರಲ್ಲಿ 'ಶೂದ್ರ ಪತ್ರಿಯು ಹುಟ್ಟಿಕೊಂಡಿತು. 'ಮುಕ್ತ ಚರ್ಚೆಗಾಗಿ ಶೂದ್ರ ತಿಂಗಳ ಪತ್ರಿಕೆ' ಎಂಬ ಪೋಷಣೆಯೊಂದಿಗೆ' ಆರಂಭವಾಯಿತು. ಬೆಂಗಳೂರಿನಿಂದ ಶ್ರೀನಿವಾಸ ಇದನ್ನು ಹೊರಡಿಸುತ್ತಿದ್ದರು. ಈ ಪತ್ರಿಕೆಗೆ ಡಿ.ಆರ್. ನಾಗರಾಜ, ಮಲ್ಲೇಪುರಂ ಜಿ. ವೆಂಕಟೇಶ, ಮುರಾರಿ ಬಲ್ಲಾಳ, ರಾಜರಾಮ ಹೆಗಡೆ, ಕುಂ.ವೀರಭದ್ರಪ್ಪ, ಮೊಗಳ್ಳಿ ಗಣೇಶ, ಬಸವರಾಜ ಸಬರದ, ಶಂಕರ ಪಾಟೀಲ, ಮ.ನ.ಜವರಯ್ಯ, ಕೆ.ವಿ. ಸುಬ್ಬಣ್ಣ, ಪ್ರತಿಭಾನಂದ ಕುಮಾರ ಹೀಗೆ ಸಮಕಾಲೀನ ಬರೆದಿದ್ದಾರೆ. ಈ ಪತ್ರಿಕೆಯಲ್ಲಿ ಸಾಹಿತ್ಯ ಮತ್ತು ರಾಜಕೀಯ ; ಬೇಂದ್ರೆ ಪ್ರಣಯ ಕಾವ್ಯದ ಸೈದ್ಧಾಂತಿಕ ನೆಲೆಗಳು : ಅನಂತಮೂರ್ತಿಯವರ ಕಾದಂಬರಿಗಳ ತೌಲನಿಕ ವಿವೇಚಸಿ ಪ್ರವಾಸಿ ಬರೆದ ಇತಿಹಾಸ: ಅಸ್ತಿತ್ವವಾದಿ ಚಿಂತನೆ; ಭಾರತೀಯ ನಾಸ್ತಿಕ ದರ್ಶನಗಳು

ರೂಪಕಗಳು ಜಗತ್ತು : ದಲಿತ ಚಳುವಳಿ ಕುರಿತು ಶೂದ್ರ ತಪಸ್ವಿ, ಒಂದು ಹೊಸ ಓದು ಸಾಹಿತ್ಯ ಮತ್ತು ಚರಿತ್ರೆ, ಹೀಗೆ ಹಲವು ಆಸಕ್ತಿಯ ವಿಷಯಗಳು ಪ್ರಕಟವಾಗಿವೆ."[೩೬] ಸಂಕ್ರಮಣದ ಹಾಗೆ ದೀರ್ಘಕಾಲ ನಡೆದು ಬಂದು ಸಾಹಿತ್ಯ ಪತ್ರಿಕೆ ಶೂದ್ರ ಕೂಡ. ತಿಂಗಳ ಕಾವ್ಯ, ಕನಸಿಗೊಂದು ಕಣ್ಣು (ಸಂಪಾದರೇಯ) ಪುಸ್ತಕ ವಿಮರ್ಶೆ, ಒಳನೋಟ, ಈಗ ಕಂಡ ಪುಸ್ತಕ ಹೀಗೆ ಇದರಲ್ಲಿ ಶೀರ್ಷಿಕೆಗಳಿವೆ. ಅನೇಕ ಸಂದರ್ಭಗಳಲ್ಲಿ 'ಶೂದ್ರ' ವಿಶೇಷ ಸಂಚಿಕೆಗಳನ್ನು ಹೊರ ತಂದಿದೆ.

ಇವಲ್ಲದೆ ಈ ಆಧುನಿಕ ಕಾಲದಲ್ಲಿ ಸಾಹಿತ್ಯ ಸಂವೇದನೆಗೆ ವೇದಿಕೆಯಾಗಲು ಅನ್ವೇಷಣೆ, ಹೊಸದಿಕ್ಕು, ಪ್ರಜ್ಞೆ, ಸಾಹಿತ್ಯ ಸಂಘರ್ಷ ಮಾತುಕತೆ, ಕವಿಮಾರ್ಗ, ಅಪರಂಜಿ, ಒಡನಾಡಿ, ಒಡಲಾಳ ಅಂಕಣ, ಕಾವ್ಯ-ಅರಿವು-ಬರಹ ಅಜಂತ, ಕಾಲಗಲೆ, ಕಾದಂಬರಿ, ಹೀಗೆ ಇನ್ನೂ ಅನೇಕ ಪತ್ರಿಕೆಗಳು ಬಂದಿವೆ. ಇವೆಲ್ಲಾ ತಾವು ನಂಬಿದ ಸಾಹಿತ್ಯ ಮಾರ್ಗದ ಪ್ರತಿಪಾದನೆಗೆ ಕೆಲಸ ಮಾಡಿವೆ. ಹಲವು ಪತ್ರಿಕೆಗಳು ಯಾವುದೇ ಗುಂಪುಗಳಲ್ಲಿ ಗುರುತಿಸಿಕೊಳ್ಳದೆ ಸಾಹಿತ್ಯ ವಿಮರ್ಶೆಯನ್ನು ಹೊಸ ಸಾಹಿತ್ಯವನ್ನು ಪೋಷಿಸಿವೆ.

ವಿಶೇಷವಾಗಿ ಸಾಹಿತ್ಯ ವಿಷಯಗಳನ್ನು ಜನಸಾಮಾನ್ಯರಿಗೆ ತಲುಪಿಸುವಂತಹ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿಭಾಯಿಸುತ್ತಲೇ ಸಾಹಿತ್ಯ ಪತ್ರಿಕೆಗಳು ಸಾಹಿತ್ಯ ಬೆಳವಣಿಗೆಗೆ ಸಂಬಂಧಿಸಿದಂತೆ ಬೇರೆ ಬೇರೆ ಕಡೆಗಳಲ್ಲಿ ಸಭೆ ಉಪನ್ಯಾಸ ಕಾರ್ಯಕ್ರಮ ವಿಚಾರಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳನ್ನು ಮುದ್ರಿಸುತ್ತವೆ. ಇದರಿಂದ ಇಲ್ಲಿ ಮಂಡಿತವಾದ ವಿಚಾರಗಳನ್ನು ಸೀಮಿತ ವಲಯದಿಂದ ಸಮುದಾಯಕ್ಕೆ ತಲುಪಿಸುವ ಕಾರ್ಯ ಮಾಡಿದಂತೆ ಆಗುತ್ತದೆ. ಹಾಗೆಯೇ ಕೆಲವು ಸಾಹಿತ್ಯ ಪತ್ರಿಕೆಗಳು ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಅವುಗಳನ್ನು ಪ್ರಕಟಿಸಿವೆ. ಚಿತ್ರದುರ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದ 'ದಲಿತ-ಬಂಡಾಯ ಸ್ಥಗಿತತೆ : ಒಂದು ಸಂವಾದ ಎಂಬ ಗೋಷ್ಠಿಯನ್ನು ಸಾಹಿತ್ಯ ಸಂವಾದ ತನ್ನ ಸಂಚಿಕೆಯಲ್ಲಿ ಪ್ರಕಟಿಸಿದೆ. ಹೀಗೆ ಸಾಹಿತ್ಯ ಪತ್ರಿಕೆಗಳು ಕೆಲವು ಲೇಖನಗಳನ್ನು ವಾಗ್ವಾದ, ಚರ್ಚೆ ಚಿಂತನ, ಪ್ರತಿಕ್ರಿಯೆ ಇತ್ಯಾದಿ ಶೀರ್ಷಿಕೆಯಲ್ಲಿ ಪ್ರಕಟಿಸಿ ಅವುಗಳ ಬಗೆಗೆ ಚರ್ಚೆಯನ್ನು ಮುಂದುವರೆಸುವ ಇಚ್ಛೆಯನ್ನು ವ್ಯಕ್ತಪಡಿಸುತ್ತವೆ.

ಮುದ್ರಣ ತಂತ್ರಜ್ಞಾನ ಭಾರತದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಒದಗಿಬಂದ ಸಾಮಾಗ್ರಿ. ಪಾಶ್ಚಾತ್ಯರು ಧರ್ಮಪ್ರಸಾರಕ್ಕಾಗಿ ಭಾರತಕ್ಕಾಗಿ ಬರುವಾಗ ಜೊತೆಯಲ್ಲಿ. ಮುದ್ರಣ ತಂತ್ರಜ್ಞಾನವನ್ನು ತಂದರು. ಅವರು ತಮ್ಮ ಗ್ರಂಥಗಳನ್ನು ಮುದ್ರಣ ಮಾಡಿ ಹಂಚುತ್ತಿದ್ದು, ಪುಸ್ತಕಗಳು ಕಡಿಮೆ ಬಿದ್ದಾಗ ತಕ್ಷಣದಲ್ಲಿ ಮುದ್ರಿಸಲು ಈ ಮುದ್ರಣಯಂತ್ರ ಸಹಾಯವಾಗುತ್ತಿತ್ತು. ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ಹಲವಾರು ಪಾದ್ರಿಗಳಲ್ಲಿ ಕೆಲವರು ಕರ್ನಾಟಕಕ್ಕೂ ಬಂದರು. ತಮ್ಮ ಧರ್ಮ ಪ್ರಚಾರದ ಕಾರ್ಯವು ಇಲ್ಲಿನ ಸ್ಥಳೀಯ ಭಾಷೆಗಳ ಮೂಲಕವೇ ನಡೆದರೆ ಯಶಸ್ವಿ ಎಂಬುವುದನ್ನು

ಅರಿತ ಅವರ ಸ್ಥಳೀಯ ಭಾಷೆಯನ್ನು ಕಲಿತರು. ಧರ್ಮ ಪ್ರಚಾರ ಮಾಡುವಾಗ ಸ್ಥಳಿಯರ ಜೊತೆ ಸಂವಹನ ಮಾಡುವಾರ ಅವರ ಭಾಷೆ, ಬದುಕು, ಸಂಸ್ಕೃತಿಯನ್ನು ವಿಶೇಷವಾಗಿ ಗಮನಿಸುತ್ತಲೇ. ಇಲ್ಲಿನ ಭಾಷೆಯ ಸಾಹಿತ್ಯ ಸಂಪತ್ತಿನ ಶೋಧ ಮಾಡಲು ಮನಸ್ಸು ಮಾಡಿದ್ದೆ ಕುತೂಹಲಕರ ಸಂಗತಿ. ಈ ಶೋಧ ಶೋಧ ಮಾಡಲು ಮನಸ್ಸು ಮಾಡಿದ್ದೆ ಕುತೂಹಲಕರ ಸಂಗತಿ. ಈ ಶೋಧ ಕಾರ್ಯವನ್ನು ಒಂದು ಹವ್ಯಾಸಿ ಚಟುವಟಿಕೆಯಾಗಿ ತೆಗೆದುಕೊಂಡು ನಂತರ ಗಂಭೀರವಾಗಿ ಮಾಡತೊಡಗಿದರು. ನಮ್ಮ ಭಾಷೆಯಲ್ಲಿ ರಚಿತವಾಗಿರು ವಂತಹ ಸಾಹಿತ್ಯದ ಹಸ್ತಪ್ರತಿಗಳನ್ನು ಸಂಗ್ರಹಿಸಿ. ಅವುಗಳನ್ನು ಸ್ಥಳೀಯ ನೆರವಿನಿಂದ ಭಾಷೆ ಕಲಿತು ಅಧ್ಯಯನ ಮಾಡಿ ಅವುಗಳ ಮೌಲ್ಯವನ್ನು ಅರಿತು ಪ್ರಕಟಮಾಡಿದುದು ಪಾಶ್ಚಾತ್ಯರು ನಮ್ಮ ಸಾಹಿತ್ಯ ಕ್ಷೇತ್ರಕ್ಕೆದ ಅಪಾರ ಕೊಡುಗೆ.

ಪಾಶ್ಚಿಮಾತ್ಯರ ಈ ಅಮೂಲ್ಯ ಕೊಡುಗೆಗೆ ನೆರವಾದದು ಮುದ್ರಣಯಂತ್ರ. ಈ ಮುದ್ರಣಯಂತ್ರದ (ಕಾರ್ಯ) ಪ್ರಕಟಣಾ ಕಾರ್ಯ ಪಾಶ್ಚಿಮಾತ್ಯರಿಂದ ಸ್ಥಳಿಯರು ಕೂಡ ಮಾಡುವ ಹಂತಕ್ಕೆ ಬಂದು ತಲುಪಿತು. ಮುದ್ರಣಕಲೆ ಮುಂದೆ ಗ್ರಂಥೋದ್ಯಮಕ್ಕೂ ಕೂಡ ಬೆಂಬಲವಾಯಿತು. ಇದರಿಂದ ಹಲವಾರು ಮುದ್ರಣಲಯಗಳು ಪ್ರಾರಂಭವಾಗಿ ಹಲವಾರು ಸಾಹಿತ್ಯ ಕೃತಿಗಳು ಅಚ್ಚಾಗಿ ಹೊರಬಂದವು ಶತಮಾನಗಳಿಂದ ಮಡಿವಂತಿಕೆಯ ಕಟ್ಟಿನೊಳಗಿದ್ದ ಸಾಹಿತ್ಯ, ಜ್ಞಾನ, ಜನಸಾಮಾನ್ಯರಿಗೆ ಲಭ್ಯವಾಗುವಂತಾಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಜನಸಾಮಾನ್ಯರಲ್ಲಿ ಜ್ಞಾನದ ಹಸಿವನ್ನು ನೀಗಿಸಲು ಸಾಧ್ಯವಾದ ಮುದ್ರಣ ತಂತ್ರಜ್ಞಾನ. ಇಂದಿಗೂ ಕೂಡ ಸಾಹಿತ್ಯ ಕ್ಷೇತ್ರದಲ್ಲಿ ನೆರವಾಗುತ್ತಲೇ ಬರುತ್ತಿದೆ. ಪುಸ್ತಕಗಳ ಪ್ರಕಟಣೆಯ ಜೊತೆಗೆ ಪತ್ರಿಕೆಗಳಿಂದಲೂ ಕೂಡ ಕನ್ನಡ ಭಾಷೆಯ ಸಾಹಿತ್ಯವನ್ನು ಪ್ರಸರಿಸಿ ಸಾಹಿತ್ಯ ವಲಯವನ್ನು ತುಂಬಾ ವಿಸ್ತರಿಸುತ್ತಿದೆ.

**೪.೬. ಆಧುನಿಕ ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು**

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಮುದ್ರಣ ತಂತ್ರಜ್ಞಾನ ಭಾರತದ ಸಾಂಸ್ಕೃತಿಕ ವಲಯದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿತು. ಇದರಿಂದ ಸಾಹಿತ್ಯ ಕ್ಷೇತ್ರ ಬೆಳೆಯಲು ತುಂಬಾ ಸಹಾಯವಾಯಿತು. ಮುದ್ರಣ ತಂತ್ರಜ್ಞಾನದ ಬಳಕೆಯ ಸಂದರ್ಭದಲ್ಲಿಯೇ ತಾಂತ್ರಿಕ ಕ್ಷೇತ್ರದಲ್ಲಿ ಹೊಸ ಹೊಸ ಆವಿಷ್ಕಾರಗಳು ನಡೆದು ಹೊಸ ರೂಪದಲ್ಲಿ ಸಾಮೂಹಿಕ ಉಪಯೋಗಿ ಸಾಧನಗಳಾಗಿ ಬೆಳಕಿಗೆ ಬಂದವು. ಏಕಕಾಲದಲ್ಲಿ ಹಲವಾರು ಮಂದಿಗೆ ಸುದ್ದಿ ಸಮಾಚಾರಗಳನ್ನು ತಿಳಿಸುವಂತಹ ಅಥವಾ ತಲುಪಿಸುವಂತಹ ಸಮೂಹ ಸಂವಹನ ಮಾಧ್ಯಮಗಳ ರೂಪದಲ್ಲಿ ತಾಂತ್ರಿಕತೆ ಇನಷ್ಟು ಸುಧಾರಣೆ ಈ ಹತ್ತೊಂಬತ್ತನೆ ಶತಮಾನದಲ್ಲಿ ಆಯಿತು. ಹೊಸ ತಾಂತ್ರಿಕತೆಯಲ್ಲಿ ಸೃಷ್ಟಿಗೊಂಡವುಗಳೆಂದರೆ ರೇಡಿಯೋ, ದೂರದರ್ಶನ ಹಾಗೆಯೇ ಮುಂದೆ ಕಂಪ್ಯೂಟರ್ ರಚನೆಯವರೆಗೂ ತಂತ್ರಜ್ಞಾನ ಬೆಳೆಯಿಕೆನ್ನಬಹುದು.

ವಿಜ್ಞಾನಿಗಳು ಶೋಧಿಸಿದ ಅತ್ಯಮೂಲ್ಯ ಸಂವಹನ ಮಾಧ್ಯಮಗಳೆಂದರೆ ರೇಡಿಯೋ ಮತ್ತು ಟಿ.ವಿ. ಮೊದಲು ಗಳಕೆಗೆ ಬಂದದ್ದು ರೇಡಿಯೋ ಇದು ಶ್ರವ್ಯಮಾಧ್ಯಮ. ಇದು ದೂರ ಪ್ರದೇಶಗಳಲ್ಲಿ ವಾಸಿಸುವ ಹಾಗೂ ಅನಕ್ಷರಸ್ಥರಿಗೆ ಸುದ್ಧಿಸಮಾಚಾರಗಳನ್ನು ತಿಳಿಸುತ್ತದೆ. ದಿನ ನಿತ್ಯದ ವರ್ತಮಾನಗಳನ್ನು ಏಕಕಾಲದಲ್ಲಿ ಹಲವರಿಗೆ ತಿಳಿಸುವ ಈ ಉತ್ಕೃಷ್ಟವಾದ ತಂತ್ರಜ್ಞಾನ ಸಮಾಜದ ಎಲ್ಲಾ ಕ್ಷೇತ್ರಗಳ ಮೇಲೂ ತನ್ನ ಪ್ರಭಾವ ಬೀರಿದ್ದು ಸಾಹಿತ್ಯ ಮತ್ತು ಸಾಂಸ್ಕೃತಿಕ ವಲಯದಲ್ಲೂ ಹೊಸ ಸಂಚಲನವನ್ನು ಉಂಟು ಮಾಡಿದೆ.

ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಮುದ್ರಣ ತಂತ್ರಜ್ಞಾನ ಸಹಕಾರಿಯಾದಂತೆ ತಂತ್ರಜ್ಞಾನದ ಮುಂದುವರಿದ ಭಾಗವಾಗಿ ರೇಡಿಯೋ ಮತ್ತು ದೂರದರ್ಶನಗಳು ಮತ್ತಷ್ಟು ಸಹಕಾರಿಯಾದವು. ಈ ರೇಡಿಯೋ ಮತ್ತು ದೂರದರ್ಶನಗಳು ಕಾರ್ಯಗತವಾದ ನಂತರ ನಮ್ಮ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಗೆ ಯಾವ ರೀತಿ ಸಹಕಾರಿಯಾದವು ಅಥವಾ ಅವುಗಳ ಪಾತ್ರ ಎನ್ನು ಎಂಬುದನ್ನು ವಿಶ್ಲೇಷಿಸಬೇಕಾಗಿದೆ.

### ೪.೬.೧. ಶ್ರವ್ಯ ಮಾಧ್ಯಮಗಳು

**ರೇಡಿಯೋ**

ವಿದ್ಯುನ್ಮಾನ ಮಾಧ್ಯಮವಾದ ರೇಡಿಯೋವನ್ನು ಇಟಲಿಯ ಗುಗ್ಲಿಯಲ್ಮೊದವನಾದ ಮಾರ್ಕೋನಿಯು ಕಂಡು ಹಿಡಿದನು.[೩೭] ೧೮೯೭ ರಲ್ಲಿ ಆವಿಷ್ಕಾರಗೊಂಡ ರೇಡಿಯೋ ೧೯೨೦ ರಲ್ಲಿ ಭಾರತದಲ್ಲಿ ಪ್ರಸಾರ ಆರಂಭವಾಯಿತು. "ದೇಶದ ಮೊದಲ ರೇಡಿಯೋ ಪ್ರಸಾರ ೧೯೨೩ ರಲ್ಲಿ ಮುಂಬೈನ ರೇಡಿಯೋ ಕ್ಲಬ್ ಮೂಲಕ ನಡೆಯಿತು."[೩೮] ನಂತರ ಪ್ರಸಾರ ಸೇವೆಯೊಂದನ್ನು ಸ್ಥಾಪಿಸುವ ಮೂಲಕ ೨೩.೦೭.೨೦೧೯ ೨೭ ರಲ್ಲಿ ಪ್ರಾಯೋಗಿಕ ರೇಡಿಯೋ ಪ್ರಸಾರ ಮುಂಬೈ ಮತ್ತು ಕೊಲ್ಕತ್ತಾದಲ್ಲಿ ಪ್ರಾರಂಭವಾಯಿತು. ಇದಾದ ೧೫ ವರ್ಷಗಳ ನಂತರ ರೇಡಿಯೋ ೧೯೩೫ ರಲ್ಲಿ ಕರ್ನಾಟಕದಲ್ಲಿ ಕಾಲಿಟ್ಟಿತು. ಡಾ.ಎಂ.ವಿ. ಗೋಪಾಲಸ್ವಾಮಿಯವರು ಮಾಡಿದ ಪ್ರಯತ್ನದಿಂದಾಗಿ ಮೈಸೂರಿನಲ್ಲಿ ರೇಡಿಯೋ ಕೇಂದ್ರ ಸ್ಥಾಪನೆಯಾಯಿತು. ಏಕವ್ಯಕ್ತಿ ತನ್ನ ಆಸಕ್ತಿ, ಶ್ರದ್ಧೆ, ಕಠಿಣ ಪರಿಶ್ರಮಗಳಿಂದ ಸ್ಥಾಪಿಸಿದ ಭಾರತದ ಮೊತ್ತಮೊದಲ ಖಾಸಗಿ ಬಾನುಲಿ ಕೇಂದ್ರ 'ಮೈಸೂರು ಆಕಾಶವಾಣಿ ಕೇಂದ್ರ ಎಂಬ ಹೆಗ್ಗಳಿಕೆಗೆ ಕೀರ್ತಿಗೆ ಈ ಕೇಂದ್ರವು ಹೆಸರಾಯಿತು. ಈ ಆಕಾಶವಾಣಿಯಲ್ಲಿ ಸಾಹಿತ್ಯ ಸುದ್ದಿ, ಸಂಗೀತ, ನಾಟಕ, ಮನರಂಜನೆ, ಕೃಷಿ, ಮಾಹಿತಿ, ವಿಜ್ಞಾನ, ಕಲೆಗಳ ಬಗ್ಗೆ ಬಹುಜನರಿಗೆ ತಿಳಿಸಲಾಗುತ್ತದೆ. ಸಂಗೀತ, ನಾಟಕ, ಮೊದಲಾದವುಗಳ ಒಳಗೊಂಡಂತೆ ಮನರಂಜನಾ ಕಾರ್ಯಕ್ರಮಗಳ ಮೂಲಕವೇ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ವಿಚಾರಗಳನ್ನು ಜನರಿಗೆ ತಲುಪಿಸುವಲ್ಲಿ ಯಶಸ್ಸನ್ನು ಪಡೆದಿರುವಂತಹದ್ದು. "ಈ ಮೈಸೂರು ಬಾನುಲಿಯ ಮೊತ್ತ, ಮೊದಲ ಪ್ರಕಾರ ರಾಷ್ಟ್ರಕವಿ ಕುವೆಂಪು ಅವರ ಕವಿವಾಣಿಯಿಂದ ಪ್ರಾರಂಭವಾಯಿತಂತೆ."[೩೯]

ಆಕಾಶವಾಣಿಯಲ್ಲಿ ಪ್ರಾರಂಭದಲ್ಲಿ ಹಲವು ಬಗೆಯ ಕಾರ್ಯಕ್ರಮಗಳು ಪ್ರಾರಂಭವಾದವು. ಭಾಷಣ, ಚರ್ಚೆ, ನಾಟಕ, ಸಂದರ್ಶನ, ರೂಪಕ, ಪ್ರಶ್ನೋತ್ತರ, ಸಾಕ್ಷ್ಯಚಿತ್ರ ಮುಂತಾದವು. ಇವುಗಳಲ್ಲಿ ಜನರಿಗೆ ಮನರಂಜನೆಯ ಮೂಲಕವೇ ಆರೋಗ್ಯ ಶಿಕ್ಷಣ, ಅಸ್ಪೃಶತೆ, ರಾಷ್ಟ್ರೀಯತೆ ಮುಂತಾದವುಗಳ ಬಗ್ಗೆ ತಿಳಿಸುವಂತಹದ್ದು. ಮನರಂಜನೆಗೆ ಸಂಗೀತ, ಕಾರ್ಯಕ್ರಮಗಳನ್ನು ನಡೆಸುತ್ತಲೇ ಆಧುನಿಕ ಕನ್ನಡ ಸಾಹಿತ್ಯ ಪ್ರಕಾರದಲ್ಲಿ ರಚನೆಯಾಗಿರುವ ನಾಟಕಗಳ ಪ್ರಸಾರ ಪ್ರಾರಂಭವಾಯಿತು. 'ಮೊಟ್ಟ ಮೊದಲನೆಯದಾಗಿ ಇಂಗ್ಲೀಷ್ ಲೇಖಕ ಆರ್.ಕೆ. ನಾರಾಯಣ್ ರಚಿಸಿದ ವಿ.ಕೆ. ಶ್ರೀನಿವಾಸನ್‌ರವರು ಕನ್ನಡ ರೇಡಿಯೋ ರೂಪ. ನಾಟಕ 'ನೀರಗಂಟೀ ಮಾರ' ಹಾಗೆಯೇ ಚದುರಂಗರ 'ಶವದ ಮನೆ', ನಂತರದ ವರ್ಷಗಳಲ್ಲಿ ಜಿ.ಸಿ. ರಾಮಚಾದ್ರಶರ್ಮ ಅವರ 'ಸೆರೆಗಿನ ಕೆಂಡ' ರೇಡಿಯೋ ನಾಟಕ ಎಂಬ ಹೆಚ್.ಕೆ.ರಂಗನಾಥ್ ಗುರುತಿಸಿದ್ದಾರೆ.[೪೦] ಮೈಸೂರಿನಲ್ಲಿ ಸ್ಥಾಪನೆಯಾದ ನಂತರ ೧೯೫೦ ರ ಏಪ್ರಿಲ್ ೧ ರಂದು ದೇಶದ ಎಲ್ಲ ರೇಡಿಯೋ ಕೇಂದ್ರಗಳು ರಾಷ್ಟ್ರೀಯ ರೇಡಿಯೋ ವ್ಯವಸ್ಥೆಯೊಳಗೆ ಸೇರ್ಪಡೆಗೊಂಡವು. ಇದೇ ಅವಧಿಯಲ್ಲಿ ೧೯೫೦ ಜನವರಿ ೮ ರಂದು ಧಾರಾವಾಡ ಆಕಾಶವಾಣಿ ಕೇಂದ್ರ ಆರಂಭವಾಯಿತು. ನಂತರ ಬೆಂಗಳೂರು ಆಕಾಶವಾಣಿ ಕೇಂದ್ರ ೧೯೫೫ ರ ನವಂಬರ್ ೭ ರಂದು ಭಿತ್ತರಕ್ಕೆ ಸಿದ್ಧವಾಯಿತು. ೧೯೬೫ ರ ಫೆಬ್ರವರಿ ೭ ರಂದು ಪ್ರಾರಂಭವಾಯಿತು. ೧೯೬೮ರ ನವಂಬರ್ ೧೪ ರಂದು ಗುಲ್ಬರ್ಗ ಆಕಾಶವಾಣಿ ೧೦ ರಂದು ಮುಖ್ಯ ಕೇಂದ್ರವಾಗಿ ಸ್ಥಾಪನೆಗೊಂಡಿತು. ಕಡಲ ತೀರ ಮಂಗಳೂರಿನಲ್ಲಿ ೧೯೭೬ ರ ಫೆಬ್ರವರಿ ೧೦ ರಂದು ಹೊಸದಾದ ಸ್ವತಂತ್ರ ಕೇಂದ್ರ ಉದ್ಘಾಟನೆಯಾಯಿತು.

ಈ ಆಕಾಶವಾಣಿಗಳು ಆಯಾ ಭಾಗದಲ್ಲಿ ತಮ್ಮದೇ ಆದ ವಿಶಿಷ್ಟ ಕಾರ್ಯಕ್ರಮಗಳನ್ನು ನೀಡಿವೆ. ಕನ್ನಡ ಸಾಹಿತ್ಯ ವಿಷಯಗಳ ಪ್ರಸಾರವನ್ನು ನೀಡಿ ಸಾಹಿತ್ಯ ಪ್ರಸಾರವನ್ನು ಮಾಡಿ ಸಾಹಿತ್ಯ ಬೆಳವಣಿಗೆಗೆ ಪೂರಕವಾಗುವಂತಹ ಕೆಲವು ಮಾಡಿದವುಗಳಲ್ಲಿ ಬೆಂಗಳೂರು ಆಕಾಶವಾಣಿಯು ಒಂದು. "ಈ ಬೆಂಗಳೂರು ಆಕಾಶವಾಣಿಯು ಸಮಾಚಾರ ಮತ್ತು ಮನರಂಜನೆಗೆ ಮಾತ್ರ ತನ್ನ ಚಟುವಟಿಕೆಗೆ ಸೀಮಿತ ಮಾಡದೆ. 'ಆರೋಗ್ಯ ಕುಟುಂಬಕಲ್ಯಾಣ, ರೋಗ ನಿಯಂತ್ರಣ, ಕೃಷಿರಂಗ ವಿಜ್ಞಾನ ಕಾರ್ಯಕ್ರಮ, ಭಾಷಣ, ಸಂದರ್ಶನ, ರೂಪಕ, ಭಾವಗೀತೆ, ಜನಪದಗೀತೆ, ನಾಟಕ ಬಳಸಿಕೊಂಡು ಹೈನುಗಾರಿಕೆ ಅರಣ್ಯ ಅಭಿವೃದ್ಧಿ ಮತ್ತಿತರ ಸಾಮಾಜಿಕ ಕಾರ್ಯಕ್ರಮಗಳ ಮಾಲಿಕೆಯಿಂದ ಆಕಾಶವಾಣಿ ಹೊಸ ಪರಂಪರೆ ಬೆಳೆಸಿತು.""[೪೧] ಬೆಂಗಳೂರು ಆಕಾಶವಾಣಿ ಮುಖ್ಯ ಕೇಂದ್ರದ ಜತೆಗೆ ೧೯೭೦ ರಲ್ಲಿ ವಿವಿಧ ಭಾರತಿ ಮರು ಪ್ರಸಾರ ಕೇಂದ್ರವೂ ನಂತರ ವಿವಿಧ ಭಾರತಿಯಲ್ಲಿ ಕನ್ನಡ ಕಾರ್ಯಕ್ರಮಗಳ ಪ್ರಸಾರ ವ್ಯವಸ್ಥೆಯೂ ಜಾರಿಗೆ ಬಂದಿತು. ೨೦೦೧ ರಲ್ಲಿ ಹೊಸ ಪೀಳಿಗೆಯ ಎಸ್.ಎಂ.ರೇಡಿಯೋ 'ರೈನ್‌ಬೋ' ಆರಂಭವಾಯಿತು. ೨೦೦೮ ರಲ್ಲಿ ಶಾಸ್ತ್ರೀಯ ಸಂಗೀತಕ್ಕೆ ಒಂದು ಎಫ್.ಎಂ. ಕೇಂದ್ರ 'ಅಮೃತವರ್ಷಿಣಿ' ಕಾರ್ಯಾರಂಭ ಮಾಡಿತು.

ಈ ಆಕಾಶವಾಣಿಯಲ್ಲಿ ಕೆಲವೊಂದು ಕಾರ್ಯಕ್ರಮಗಳ ಮೂಲಕ ಸಾಹಿತ್ಯ ಕುರಿತಂತೆ ನಡೆದಿರುವುದನ್ನು ಕಾಣಬಹುದು.

**ಚಿಂತನ** : "ಹೆಚ್ಚು ಜನಪ್ರಿಯವಾದ ಮಾತಿನ ಕಾರ್ಯಕ್ರಮ ಈ ಚಿಂತನ. ಕೇವಲ ೫ ರಿಂದ ೮ ನಿಮಿಷಗಳಷ್ಟು ಕಿರು ಅವಧಿಯದ್ದಾದರೂ ಅದರ ಪ್ರಭಾವ ಅಗಾಧವಾದದ್ದು. ಇದು ಜನರಲ್ಲಿ ವೈಚಾರಿಕತೆ ಬೆಳೆಸುವ, ಸದ್ಭಾವನೆಗಳನ್ನು ಮೂಡಿಸುವ, ಸಮಾನತೆಯನ್ನು ಸಾರುವ ನಮ್ಮ ಪರಂಪರೆಯ ಮೌಲ್ಯಗಳನ್ನು ಸಾಹಿತ್ಯ, ಧರ್ಮ, ಶಾಸ್ತ್ರ, ದರ್ಶನ, ತತ್ವ ಇತಿಹಾಸ, ಕಲೆ, ಸಂಸ್ಕೃತಿಗಳನ್ನು ಉಲ್ಲೇಖಿಸಿ ವಿಚಾರವಂತರು, ಚಿಂತನಶೀಲರು ಮಂಡಿಸುವ ಕಾರ್ಯಕ್ರಮ. ಈ ಎಲ್ಲಾ ವರ್ಗದವರು ಚಿಂತನವನ್ನು ನಡೆಸಿಕೊಟ್ಟರೂ. ಸಾಹಿತ್ಯದ ಪಾಲು ಇದರಲ್ಲಿ ಶೇ. ೮೦ ಕ್ಕಿಂತ ಹೆಚ್ಚಿದೆ. ಇದರಿಂದ ಕನ್ನಡ ಸಾಹಿತ್ಯ ಶ್ರೀಮಂತಿಕೆಯನ್ನು ಲೇಖಕರು ಹೆಚ್ಚು ಹೆಚ್ಚು ವಿವರಿಸಲು ಸಾಧ್ಯವಾಗಿದೆ. ಕನ್ನಡ ಸಾಹಿತ್ಯದ ದಿಗ್ಗಜರಾದ ರಾಷ್ಟ್ರಕವಿಗಳಾದ ಕುವೆಂಪು, ಡಾ.ಜಿ.ಎಸ್.ಶಿವರುದ್ರಪ್ಪ, ದ.ರಾ.ಬೇಂದ್ರೆ, ಗೋಪಾಲಕೃಷ್ಣ ಅಡಿಗ, ಶಿವರಾಮಕಾರಂತರಿಂದ ಹಿಡಿದು ಈಚಿನ ಪೀಳಿಗೆಯ ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪನವರೆಗೆ ಸಾವಿರಾರು ಲೇಕಕರು ಚಿಂತನವನ್ನು ನಡೆಸಿಕೊಟ್ಟಿರುವುದು."[೨]

**ಅಕ್ಕಕೇಳವ್ವ** : ೨೦೦೧ ಇಸವಿಯ ಸಂದಭದಲ್ಲಿ ಪ್ರತಿ ಶುಕ್ರವಾರ ಬೆಳಗ್ಗೆ ೭.೧೫ ರಿಂದ ೭.೩೦ ರವರೆಗೆ 'ಅಕ್ಕ ಕೇಳವ್ವ' ಕಾರ್ಯಕ್ರಮ. ಕಾವ್ಯವಾಹಿನಿ

**ಕಾವ್ಯವಾಚನ** : ಪ್ರತಿ ಮಂಗಳವಾರ ಮಧ್ಯಾಹ್ನ ೧ ಗಂಟೆಯಿಂದ ೧.೧೦ ರವರೆಗೆ ಪ್ರಸಾರ.

**ಗೀತಲಹರಿ** : ಪ್ರತಿ ಬುಧವಾರ ಇದೇ ಅವಧಿಯಲ್ಲಿ ಭಾವಗೀತೆಗಳು ಪ್ರಸಾರವಾಗುತ್ತಿದ್ದವು.

**ಲಘುಸಂಗೀತ** : ಸೋಮವಾರದಿಂದ ಶನಿವಾರದವರೆಗೆ ಪ್ರತಿಸಂಜೆ ೬.೩೦ ರಿಂದ ೬.೪೦ ರವರೆಗೆ ಪ್ರಸಾರವಾಗುತ್ತಿತ್ತು.

**ಜನಪದ ಗೀತೆ** : ಪ್ರತಿ ಭಾನುವಾರ ಸಂಜೆ ೬.೩೦ ರಿಂದ ೬.೪೦ ರ ವರೆಗೆ

**ನಾಟಕ** : ಪ್ರತಿ ಮಂಗಳವಾರ ರಾತ್ರಿ ೯.೩೦ ರಿಂದ ೧೦.೦೦ ಗಂಟೆಯವರೆಗೂ ಪ್ರಸಾರಗೊಳ್ಳುತ್ತಿತ್ತು.

**ಕನ್ನಡ ಭಾಷಣ** : ಪ್ರತಿ ಸೋಮವಾರ, ಗುರುವಾರ, ಶನಿವಾರ ರಾತ್ರಿ ೯.೧೫ ರಿಂದ ೯.೩೦ ರ ವರೆಗೆ ಕೇಳಬಹುದಿತ್ತು. ಹೀಗೆ ಬೆಂಗಳೂರು ಆಕಾಶವಾಣಿಯಿಂದ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕಾರ್ಯಕ್ರಮಗಳನ್ನು ಪ್ರಸಾರಮಾಡುವುದರಿಂದ ನಾಡಿನ ಜನರಿಗೆ ಸಾಹಿತ್ಯದ ಮೇಲೆ ಆಸಕ್ತಿಯನ್ನುಂಟು ಮಾಡಿದೆ.

"ಆಕಾಶವಾಣಿಯು ಪ್ರಧಾನವಾದ ೭ ಚಾನೆಲ್‌ಗಳ ಮೂಲಕ ಕಾರ್ಯನಿರ್ವಹಣೆ ಮಾಡಿರುವುದು ಗಮನಾರ್ಹವಾದ ಸಂಗತಿ.

೧. ಪ್ರಮುಖ ಚಾನೆಲ್‌ಗಳು (ಪ)

೨. ಎಫ್.ಎಂ. ಚಾನೆಲ್‌ಗಳು

೩. ರಾಷ್ಟ್ರೀಯ ಚಾನೆಲ್

೪. ವಿದೇಶಿ ಸೇವಾ ಪ್ರಸಾರ

೫. ಡಿ.ಟಿ.ಎಚ್.

೬. ವಾಣಿಜ್ಯ ಪ್ರಸಾರ ಸೇವೆ

೭. ಭಾಷಾ ಭಾರತಿ ಮತ್ತು ಅಮೃತವರ್ಷಿಣಿ"[೪೩]

**೧. ಪ್ರಮುಖ ಚಾನೆಲ್‌ಗಳು** : ಸಾಮಾನ್ಯವಾಗಿ ಮೀಡಿಯಂ ವೇವ್ ತರಂಗಾಂತರದಲ್ಲಿ ಪ್ರಸಾರವಾಗುವ ಈ ಪ್ರಧಾನ ಚಾನೆಲ್‌ಗಳು ಸಾಹಿತ್ಯ ಕಲೆ, ಸಂಗೀತವನ್ನು ಹೆಚ್ಚಾಗಿ ಅವಲಂಬಿಸಿದ್ದು ಸಂಗೀತ ಕಾರ್ಯಕ್ರಮಗಳು ಜಾನಪದ ಶಾಸ್ತ್ರೀಯ, ಲಘು ಹಾಗೂ ಚಲನಚಿತ್ರಗಳ ಮೂಲದವಾಗಿದ್ದರೆ ಸಾಹಿತ್ಯ ಕಲಾ ಕಾರ್ಯಕ್ರಮಗಳು ಜಾನಪದ ಶಾಸ್ತ್ರೀಯ ನಾಟಕ, ರೇಡಿಯೋಹರಟೆ, ಭಾಷಣ ಪ್ರಬಂಧ, ಕಥೆ, ಕಾವ್ಯಗಳನ್ನಾಧರಿಸುತ್ತದೆ.

**೨. ವಾಣಿಜ್ಯ ಪ್ರಸಾರ ಸೇವೆ** (ವಿವಿಧ ಭಾರತ) ಇದು ಜನಪ್ರಿಯವಾದ ಸಂಪೂರ್ಣ ಮನರಂಜನಾ ಚಾನೆಲ್. ೧೯೫೭ ರ ಅಕ್ಟೋಬರ್‌ನಲ್ಲಿ ವಿವಿಧ ಭಾರತಿ ಪ್ರಾರಂಭವಾಯಿತು. ಇದರಲ್ಲಿ ಶೇಕಡ ೮೫ ರಷ್ಟು ಚಿತ್ರಗೀತೆಗಳನ್ನು ಆಧರಿಸಿದ್ದು ಉಳಿದ ಶೇಕಡ ೧೫ ರಷ್ಟು ಭಾಗದಲ್ಲಿ ಶಾಸ್ತ್ರೀಯ ಜಾನಪದ, ಲಘು ಭಕ್ತಿ ಸಂಗೀತವಿರುತ್ತದೆ.

**೩. ಎಫ್.ಎಂ.ಚಾನೆಲ್‌ಗಳು:** (ಸ್ಥಳೀಯ ಕೇಂದ್ರಗಳು) : ಎಫ್.ಎಂ. ರೈನ್‌ಬೋ ೧೨ ಸ್ಥಳಗಳಿಂದ ಪ್ರಸಾರವಾಗುವ ಸ್ವತಂತ್ರ ಚಾನೆಲ್. ಬೆಂಗಳೂರು ದೆಹಲಿ, ಮುಂಬೈ, ಕೋಲ್ಕತ್ತಾ, ಚೈನ್ನೈ, ಪಣಜಿ, ಲಕ್ನೋ, ಕಟಕ್, ಜಲಂಧರ್, ತಿರುಚಿರಾಪಳ್ಳಿ, ಕೊಡೈಕೆನಾಲ್ ಮತ್ತು ಕೊಯಮತ್ತೂರಿನಿಂದ ಆಯಾ ನಗರಗಳಿಗೆ ಸೀಮಿತವಾದ ಕೇಳುಗರಿಗಾಗಿ ಹೊಸ ಮಾದರಿಯಲ್ಲಿ ಇವು ಮೂಡಿಬರುತ್ತಿದೆ. ಕರ್ನಾಟಕದಲ್ಲಿ ಕೆಲವೊಂದು ಎಫ್.ಎಂ. ಕೇಂದ್ರಗಳು ಸಹ ಪ್ರಾರಂಭವಾದವು. "ಮೊದಲ ಎಫ್.ಎಂ. ಕೇಂದ್ರ ಚಿತ್ರದುರ್ಗದಲ್ಲಿ ೧೯೯೧ರ ಮೇ ೩ ರಂದು ಕ್ರಿಯಾಶೀಲಗೊಂಡಿತು. ೧೯೯೨ ಮೇ ೧ ರಂದು ಹೊಸಪೇಟೆಯಲ್ಲಿ ಎಫ್.ಎಂ. ರೇಡಿಯೋ ಕೇಂದ್ರ ಶುರುವಾಯಿತು. ೧೯೯೩ ರ ಆಗಸ್ಟ್ ೨೮ ರಂದು ಕೊಡಗು ಜಿಲ್ಲೆಯ ಮಡಿಕೇರಿಯಲ್ಲಿ ಎಫ್.ಎಂ. ಕೇಂದ್ರ ಆರಂಭಗೊಂಡಿತು. ಅದೇ ಸಂದರ್ಭದಲ್ಲಿ ರಾಯಚೂರಿನಲ್ಲಿಯೂ ೧೯೯೪ ಫೆಬ್ರವರಿ ೧೩ ರಂದು ತೀರ ಪ್ರದೇಶವಾದ ಕಾರವಾರದಲ್ಲಿ

೧೯೯೫ ರಲ್ಲಿ ವಿಜಾಪುರ ಎಫ್.ಎಂ. ಕೇಂದ್ರಗಳು ಸ್ಥಾಪನೆಗೊಂಡವು."೪೪ ಈ ಚಾನಲ್‌ಗಳಲ್ಲದೆ. ಹೊಸ ಖಾಸಗಿ ಎಫ್.ಎಂ. ರೇಡಿಯೋ ಚಾನೆಲ್‌ಗಳು ಕೂಡ ಕನ್ನಡ ಕಾರ್ಯಕ್ರಮಗಳನ್ನು ನೀಡುತ್ತಿರುವುದು ಕಾಣಬಹುದಾಗಿದೆ.

**೧. ರೇಡಿಯೋ ಸಿಟಿ** (೯೧.೧ ಎಫ್.ಎಂ.) ಇದು ಬೆಂಗಳೂರಿನ ಮೊದಲ ಎಫ್.ಎಂ. ರೇಡಿಯೋ ಕಂಪನಿ. ದೆಹಲಿ, ಮುಂಬೈ ಚನ್ನೈ, ಹೈದರಾಬಾದ್, ಲಖನೌ, ಬೆಂಗಳೂರಿನಲ್ಲಿ ಇದು ಕಾರ್ಯ ನಿರ್ವಹಿಸುತ್ತಿದ್ದು ಕನ್ನಡ, ಹಿಂದಿ ಮತ್ತು ಇಂಗ್ಲೀಷ್ ಸಂಗೀತ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿದೆ.

**೨. ರೈನ್ ಬೋ ಎಫ್.ಎಂ.:** ಆಕಾಶವಾಣಿಯ ಕನ್ನಡ ಎಫ್.ಎಂ. ಚಾನೆಲ್ ಈ ಕಾಮನಬಿಲ್ಲು ಕನ್ನಡದಲ್ಲೇ ವಿಶೇಷವಾಗಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದರಿಂದ ಬೆಂಗಳೂರಿನ ಅತ್ಯಂತ ಜನಪ್ರಿಯ ಎಫ್.ಎಂ. ರೇಡಿಯೋ ಆಗಿದೆ. ೨೦೦೪ ರಲ್ಲಿ ನಡೆದ ಶ್ರೋತೃ ಸಂಶೋಧನಾ ಸಮೀಕ್ಷೆಯ ಪ್ರಕಾರ ರೈನ್ ಬೋ ರೇಡಿಯೋ ಶೇ ೯೦.೩ ರಷ್ಟು ಜನರನ್ನು ತಲುಪುತ್ತಿದೆ.

**೩. ರೇಡಿಯೋ ಮಿರ್ಚಿ ೯೮.೨ ಎಫ್.ಎಂ.:** ಇದು ಬೆಂಗಳೂರಿನಲ್ಲಿ ಪ್ರಾರಂಭವಾದ ಎರಡನೇ ಖಾಸಗೀ ರೇಡಿಯೋ ಚಾನಲ್, ಟೈಮ್ಸ್ ಆಫ್ ಇಂಡಿಯಾ ಪತ್ರಿಕಾ ಸಮೂಹಕ್ಕೆ ಸೇರಿದ ಎಂಟರ್‌ಟೇನ್‌ಮೆಂಟ್ ನೆಟ್‌ವರ್ಕ್ ಇಂಡಿಯಾ ಕಂಪನಿ ಈ ಚಾನೆಲ್‌ನ ಮಾಲಿಕತ್ವ ಪಡೆದಿದೆ. ದೆಹಲಿ ಮುಂಬೈಗಳಲ್ಲೂ ಇದು ಜನಪ್ರಿಯವಾಗಿದ್ದು ಇನ್ನೂ ೨೨ ನಗರಗಳಲ್ಲಿ ಈ ರೇಡಿಯೋ ಚಾನೆಲ್ ಆರಂಭವಾಗಲಿದ್ದು ಕನ್ನಡ ಮತ್ತು ಹಿಂದಿ ಹಾಡುಗಳು ರೇಡಿಯೋದಲ್ಲಿ ಮೂಡಿ ಬರುವ ಕಾರ್ಯಕ್ರಮಗಳು.

**೪. ರೇಡಿಯೋ ಒನ್ ೯೪.೩ ಎಫ್.ಎಂ.:** ೨೦೦೬ ರ ಆಗಸ್ಟ್‌ನಲ್ಲಿ ಈ ರೇಡಿಯೋ ಕಂಪನಿ ಬೆಂಗಳೂರಿನಲ್ಲಿ ಪ್ರಸಾರ ಆರಂಭಿಸಿತು. ಮಿಡ್ ಡೇ ಮಲ್ಟಿಮೀಡಿಯಾ ನಡೆಸುತ್ತಿರುವ ಈ ಚಾನೆಲ್ ಕನ್ನಡ ಹಿಂದಿ ಹಾಡುಗಳನ್ನು, ಸಂಗೀತವನ್ನು ಪ್ರಸಾರ ಮಾಡುತ್ತಿದೆ.

**೫. ಬಿಗ್ ೯೨.೭ ಎಫ್.ಎಂ:** ೨೦೦೬ ಅಕ್ಟೋಬರ್‌ನಲ್ಲಿ ರಿಲಯನ್ಸ್ ಕಂಪನಿ ಬೆಂಗಳೂರಿನಲ್ಲಿ ಈ ರೇಡಿಯೋ ಪ್ರಾರಂಭಿಸಿದ್ದು ಹೆಚ್ಚಿನ ಕಾರ್ಯಕ್ರಮಗಳು ಕನ್ನಡದಲ್ಲಿವೆ. ಬೆಳಗಿನ ಹೊತ್ತು ಭಕ್ತಿಗೀತೆಯೊಂದಿಗೆ ಪ್ರಸಾರ ಆರಂಭವಾಗುತ್ತಿದೆ. ಈ ಚಾನಲ್‌ನಂತೆಯೇ ಇನ್ನೂ ಅನೇಕ ಚಾನೆಲ್ ಇದ್ದು ಕನ್ನಡ ಪರವಾದ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿವೆ. ರೇಡಿಯೋ ಕಾರ್ಯ ಕ್ರಮದಲ್ಲಿನ ಗೀತೆಗಳು, ಕಾವ್ಯಗಳು ಜನರ ಮನಮುಟ್ಟಿ ಸಾಹಿತ್ಯದಾಸಕ್ತಿ ಮೂಡಿಸಿದವು ಎಂಬುದು ಸಂದೇಹವಿಲ್ಲದ ಮಾತು.

**ಕಥೆ, ಕಾವ್ಯ, ಕಾದಂಬರಿ, ನಾಟಕಗಳ ಬಾನುಲಿ ಪ್ರಸಾರ**

"ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರದಲ್ಲಿ ಅತ್ಯುನ್ನತ ಪ್ರಭಾವ ಉಂಟು ಮಾಡಿರುವ ಇ-ಮಾಧ್ಯಮ ಎಂದರೆ ರೇಡಿಯೊ. ಇತ್ತೀಚೆಗೆ ಖಾಸಗಿ ಎಫ್.ಎಂ. ರೇಡಿಯೋ ಪ್ರಸಾರದ ಪ್ರಾಬಲ್ಯ ಹೆಚ್ಚಿದರೂ ಕಳೆದ ೫-೬ ದಶಗಳ ಹಿಂದೆ ಆಕಾಶವಾಣಿಯೇ ಸಾಹಿತ್ಯ, ಸಂಸ್ಕೃತಿ ಕಲೆಯ ಪ್ರಚಾರಕ್ಕೆ ಬೆಂಬಲವಾಗಿ ನಿಂತಿತ್ತು. ಎಂಬುದು ವಾಸ್ತವದ ಮಾತು. ಕರ್ನಾಟಕದ ವಿವಿಧ ಭಾಗಗಳಲ್ಲಿನ ಆಕಾಶವಾಣಿ ಕೇಂದ್ರಗಳು ಆಯಾ ಪ್ರದೇಶದ ಸಾಹಿತಿ, ಕಲಾವಿದರಿಗೆ ಪ್ರೋತ್ಸಾಹವನ್ನಿತ್ತು ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಸಾರವನ್ನು ತನ್ನ ಭೌಗೋಳಿಕ ವ್ಯಾಪ್ತಿಯಲ್ಲಿ ಅತ್ಯುನ್ನತ್ತ ರೀತಿಯಲ್ಲಿ ನಿರ್ವಹಿಸಿದೆ.

ರಾಜ್ಯದ ಅತ್ಯಂತ ಹಳೆಯ ರೇಡಿಯೋ ಕೇಂದ್ರವಾದ ಬೆಂಗಳೂರು ಕನ್ನಡ ಸಾಹಿತ್ಯ ಕಾರ್ಯಕ್ರಮಗಳ ಪ್ರಸಾರದಲ್ಲಿ ಸದಾ ಮುಂದೆ ಇದೆ. ಸಾಹಿತ್ಯ ಎಂದಾಕ್ಷಣ ಕಾವ್ಯ ಮೊದಲಾಗುತ್ತದೆ. ಕಾವ್ಯದ ಕ್ಷೇತ್ರ ವಿಸ್ತಾರವಾಗಿರುವಂತೆ ಪ್ರಸಾರಕ್ಕೂ ಅದು ಹೆಚ್ಚು ಒಗ್ಗಿಕೊಳ್ಳುತ್ತದೆ ಮತ್ತು ಅಪ್ತವಾಗುತ್ತದೆ."[೪೫] ಕಾವ್ಯ ಎಂದರೆ ಪಂಪನಿಂದ ಹಿಡಿದು ರಾಘವಾಂಕನವರೆಗೆ ಇರಬಹುದಾದ ಪ್ರಾಚೀನ ಹಳಗನ್ನಡ ೧೨ನೇ ಶತಮಾನದಿಂದ ವಚನ ಕ್ರಾಂತಿಯ ನಡುಗನ್ನಡ ಸಾಹಿತ್ಯ ಹಾಗೂ ಕಳೆದ ೨೦ನೇ ಶತಮಾನದ ಇತ್ತೀಚಿನ ಆಧುನಿಕ ಕಾವ್ಯವೆಂದು ನಮ್ಮ ಅಭ್ಯಾಸಕ್ಕೆ ಮಾಡಿಕೊಳ್ಳುವ ವರ್ಗೀಕರಣದಲ್ಲಿ ಎಲ್ಲಕ್ಕೂ ಆಕಾಶವಾಣಿ ಪ್ರಸಾರದಲ್ಲಿ ಸಮಸಾಲು ಸಂದಿಲ್ಲ. ಇದಕ್ಕೆ ಕಾರಣಗಳು ಇವೆ. ಹಳೆಗನ್ನಡ ಕಾವ್ಯವನ್ನು ಕಾವ್ಯವಾಚನದಲ್ಲಿ ಮಾತ್ರ ಅಳವಡಿಸಲು ಸಾಧವೇ ಹೊರತು. ಆಧುನಿಕ ಕಾಲದಲ್ಲಿ ಇರುವಂತೆ ಸುಗಮ ಸಂಗೀತದ ಧಾಟಿಗೆ ಅಳವಡಿಸುವುದು ಕಷ್ಟ ನಡುಗನ್ನಡ ವಚನ ಮತ್ತು ದಾಸ ಪಂಥದ ಭಕ್ತಿ ಗೀತೆಗಳನ್ನು ಪ್ರಸಾರಕ್ಕೆ ಅಳವಡಿಸುವುದು ಹಳಗನ್ನಡ ಕಾವ್ಯಗಳಿಗಿಂತ ಹೆಚ್ಚು ಸುಲಭವಾಗಿದೆ. ಏಕೆಂದರೆ ಇವುಗಳ ಸಂಗೀತದ ಸಂಯೋಜನೆ ಇಲ್ಲ ವಾಚ್ಯರೂಪದಲ್ಲಿ ವಚನಗಳನ್ನಾಗಲೀ, ದಾಸರ ಪದಗಳನ್ನಾಗಲೀ, ಹಾಡಿದರೆ ಅದು ಕೇಳುಗರಿಗೆ ಸೊಗಸು ನೀಡುವುದಿಲ್ಲ. ಆದ್ದರಿಂದ ಆಕಾಶವಾಣಿಯ ವೈಶಿಷ್ಟತೆ ಕಂಡು ಬರುವುದು ಈ ಕೃತಿಗಳಿಗೆ ಉತ್ತಮ ಸಂಗೀತ ಸಂಯೋಜನೆ ಮಾಡಿ ಸುಶ್ರಾವ್ಯರಾಗಮಾಲಿಕೆಯಲ್ಲಿ ಹಾಡಿಸಿ ಕೇಳುಗರಿಗೆ ಆನಂದವನ್ನುಂಟು ಮಾಡುವುದರಲ್ಲಿದೆ. ಆಧುನಿಕ ಕಾವ್ಯ ಅದರಲ್ಲೂ ಮುಖ್ಯವಾಗಿ ಭಾವಗೀತೆಗಳಿಗೆ ಸಂಗೀತ ಸಂಯೋಜನೆ ಮಾಡಿದಾಗ ಅವು ನೀಡುವ ರಸಾನುಭವ ಅಸಮಾನ್ಯ, ಅಸದೃಶ, ಮತ್ತೆ ಮತ್ತೆ ಕೇಳಬೇಕೆನ್ನುಸುವ, ನಿತ್ಯವೂ ಹೊಸತಾಗಿಯೇ ಕಾಣಿಸುವ ಈ ಸುಗಮ ಸಂಗೀತ ಕನ್ನಡ ಭಾವಗೀತೆಗಳ ಪ್ರಕಾರ ಅಸಾಧಾರಣವಾಗಿ ಬೆಳೆಯಲು ಆಕಾಶವಾಣಿ ಪ್ರಬಲಲ ಕಾರಣವಾಗಿದೆ, ಕವಿ ಕಾವ್ಯದ ಜನಪ್ರಿಯತೆಗೆ ನೆರವಾಗಿದೆ.

'ಕಾವ್ಯ ೧೯ನೇ ಶತಮಾನದ ಮಧ್ಯಭಾಗದವರೆಗೆ ಅಂದರೆ ಸ್ವಾತಂತ್ರ ಪೂರ್ವದವರೆಗೆ ಕೇವಲ ಒಂದು ವರ್ಗಕ್ಕೆ ಅಥವಾ ವಿದ್ವಾಂಸರಿಗೆ ಮಾತ್ರ ಸೀಮಿತವಾಗಿತ್ತು. ಕಾವ್ಯವಾಚನ, ಗಾಯನ ಮೊದಲಾದವುಗಳು ಸಹೃದಯವನ್ನು ಮುಟ್ಟಬೇಕಾಗಿತ್ತು. ಆದರೆ ಜನಸಾಮಾನ್ಯರಿಗೆ ತಲುಪುತ್ತಿರಲಿಲ್ಲ. ಇದಕ್ಕೆ ಕಾರಣವೆಂದರೆ ರಾಜಾಶ್ರಯ ಇಲ್ಲವೆ ಗಾಯನಗಳ ಮೂಲಕ ದೊಡ್ಡ ದೊಡ್ಡ ಸಮಾರಂಭಗಳಲ್ಲಿ ಮಾತ್ರ ಇವು ದೊರೆಯುತ್ತಿದ್ದವು. ಆನಂತರವಷ್ಟೇ ಸಾರ್ವಜನಿಕ ಸಮಾರಂಭಗಳಲ್ಲೂ ಸಂಗೀತದ ಮೂಲಕ ಕಾವ್ಯವನ್ನು ಕೇಳುವ ಅವಕಾಶ ಲಭ್ಯವಾಯಿತು.[೯] ಪ್ರಾಚೀನ ಕಾವ್ಯಗಳನ್ನು, ಉದಾಹರಣೆಗೆ ಪಂಪನಿಂದ ಹಿಡಿದು ರತ್ನಾಕರ ವರ್ಣಿಯ ಭರತೇಶ ವೈಭವದವರೆಗೆ ಕಾವ್ಯವಾಚನದ ಮೂಲಕ ಅಥವ ಗಮಕದ ಮೂಲಕ ಉಂಟಾಗುತ್ತಿದ್ದ ರಸಸ್ವಾದನೆ ಭಕ್ತಿ ಗೀತೆಗಳು, ವಚನಗಳು, ದಾಸರಪದಗಳು ಸರ್ವಜ್ಞನ ತ್ರಿಪದಿಗಳ ಮೂಲಕ ಸುಗಮ ಸಂಗೀತಕ್ಕೆ ಹೊಂದಿಕೊಂಡು ಕಾವ್ಯಗಳಿಗಿಂತ ಹೆಚ್ಚು ಜನ ಪ್ರಿಯವಾದವು. ಆನಸಾಮಾನ್ಯರ ಮನಸ್ಸಿನ ಮೇಲೆ ಇವು ಪರಿಣಾಮ ಉಂಟುಮಾಡಿದವು. ಸುಮಾರು ಒಂದು ಶತಮಾನದ ಇತಿಹಾಸ ಇರುವ ಭಾವಗೀತೆಗಳು ಕನ್ನಡ ಬಿ.ಎಂ.ಶ್ರೀ ಕವಿತೆಗಳ ಮೂಲಕ ಬರತೊಡಗಿದ ಮೇಲೆ ಈ ರಸಸ್ವಾದನೆ ಮತ್ತಷ್ಟು ಹೆಚ್ಚಲು ಸಾಧ್ಯವಾಯಿತು. ಮೈಸೂರು ಮಲ್ಲಿಗೆಯ ಪ್ರೇಮ ಕವಿ ನರಸಿಂಹಸ್ವಾಮಿಯವರ 'ಹೆಂಡತಿಯೊಬ್ಬಳು ಮನೆಯೊಳಗಿದ್ದರೆ' ಗೀತೆ ಮೈಸೂರು ಅನಂತಸ್ವಾಮಿಯವರ ಕಂಠಸಿರಿಯಲ್ಲಿ ಆಕಾಶವಾಣಿಯಿಂದ ಮೂಡಿ ಬಂದಾಗ ಅದು ನೀಡುವ ಅನುಭವವೇ ಅನನ್ಯ. ಹೀಗೆ ಪ್ರೇಮ ಗೀತೆಗಳಿಂದ ಹಿಡಿದು ಶಿಶುನಾಳ ಶರೀಫರ ತತ್ವಪದಗಳವರೆಗೆ, ಅಲ್ಲಮ ಪ್ರಭುವಿನ ಬೆಡಗಿನ ವಚನಗಳವರೆಗೆ ದಾಸರ ಪದಗಳ ಲೋಕಾನುಭವದವರೆಗೆ ಅಕಾಶವಾಣಿ ಪ್ರಸಾರ ಮಾಡದ ಗೀತೆಗಳಿಲ್ಲ.

"ಚಂಪೂ ಕಾವ್ಯದಿಂದ ಹಿಡಿದು ಸರಳ ರಗಳೆಯವರೆಗೆ ೧೦ ಶತಮಾನಗಳ ಕಾಲದುದ್ದಕ್ಕೂ ಬೆಳೆದು ಬಂದಿರುವ ಕನ್ನಡ ಕಾವ್ಯ ೨೦ನೇ ಸತಮಾನದಲ್ಲಿ ಮುಕ್ತ ಛಂದಸ್ಸಿಗೆ ಬದಲಾವಣೆಗೊಂಡಿತು. ಛಂದಸ್ಸು, ವ್ಯಾಕರಣ, ಮಾತ್ರೆಗಣ. ಇವುಗಳಿಗೆ ತಿಲಾಂಜಲಿ ನೀಡಿದ ಹೊಸಗನ್ನಡ ಬರಹಗಾರರು ಆಡು ಭಾಷೆಗೆ ಹತ್ತಿರವಾದರು. ಹಾಗೆಯೇ ರಾಗ, ತಾಳ, ಪಲ್ಲವಿಗಳ ಸಂಕೋಲೆಯನ್ನು ಕಳಚಿದ ಗಾಯಕರು. ಸಂಗೀತ ನಿರ್ದೇಶಕರು ಸಂಗೀತದ ಹೊಸ ಪ್ರಕಾರವನ್ನೇ ಆವಿರ್ಭವಿಸಿಕೊಂಡು ಕನ್ನಡ ಭಾವಗೀತೆಗಳನ್ನು ಕನಸಿನ ಕಿನ್ನಡ ಲೋಕಕ್ಕೆ ಕೊಂಡೊಯ್ದರು. ಹೀಗೆ ಆಕಾಶವಾಣಿ ಬೆಂಗಳೂರು ಕೇಂದ್ರದಿಂದ ಭಾವಗೀತೆಗಳು ಪ್ರಧಾನವಾಗಿ ಪ್ರಸಾರವಾಗಿ ಅನಕ್ಷರಸ್ಥರಿಗೂ ಕಾವ್ಯವನ್ನು ತಲುಪಿಸಿದ ಕೀರ್ತಿಗೆ ಕಾರಣವಾಗಿದೆ.

ಇ-ಮಾಧ್ಯಮ ಮತ್ತು ಕಾದಂಬರಿ : 'ನಾವೆಲ್' ಎಂಬ ಇಂಗ್ಲೀಷಿನ ಸಾಹಿತ್ಯ ಪ್ರಕಾರಕ್ಕೆ ಕಾದಂಬರಿ ಎಂಬ ಕನ್ನಡ ಪದವನ್ನು ಸಂವಾದಿಯಾಗಿ ಬಳಸುತ್ತಿದ್ದೇವೆ. ಆಕಾಶವಾಣಿಯಲ್ಲಿ ಶ್ರೇಷ್ಠ ಕಾದಂಬರಿಗಳನ್ನು ರೂಪಾಂತರಗೊಳಿಸಿ ಪ್ರಸಾರ ಮಾಡುವ ಪರಿಪಾಠ ಮೊದಲಿನಿಂದಲೂ ಆರಂಭವಾಯಿತು. ಶಿವರಾಮ ಕಾರಂತರಿಗೆ 'ಜ್ಞಾನಪೀಠ ಪ್ರಶಸ್ತಿ ದೊರೆತ ಸಂದರ್ಭದಲ್ಲಿ

ಅವರ 'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ರೇಡಿಯೋ ರೂಪಕ್ಕೆ ಅಳವಡಿಸಲಾಯಿತು.

ಕಾದಂಬರಿಯನ್ನು ರೇಡಿಯೋಗೆ ಅಳವಡಿಸಿದ ನಂತರ ಸಣ್ಣ ಕಥೆಯನ್ನು ನಿರೂಪಣೆಯ ಮೂಲಕ ೧೫ ನಿಮಿಷಗಳ ಅವಧಿಯಲ್ಲಿ ಹೇಳುವ ಬದಲು ಅದನ್ನು ರೂಪಾಂತರಿಸಿ ಅರ್ಧಗಂಟೆ ಇಲ್ಲವೆ ಒಂದು ಗಂಟೆಯ ನಾಟಕಗಳನ್ನಾಗಿ ಮಾಡಿ ಪ್ರಸಾರಮಾಡಲಾಗಿತ್ತು. ಸಣ್ಣಕತೆಯ ನಂತರ ನಾಟಕಗಳನ್ನು ಸಹ ಪ್ರಸಾರ ಮಾಡಲಾಗಿತ್ತು. ನಾಟಕಗಳಿಂದ ಜನರಿಗೆ ಅಷ್ಟೊಂದು ಅಭಿರುಚಿ ಸಿಗಲಿಲ್ಲವೆಂದು ಹೇಳಬಹುದಾಗಿದೆ. ಕಾರಣ ಅದು 'ಶ್ರವ್ಯ ಮತ್ತು ದೃಶ್ಯ ಮಾಧ್ಯಮ ಎರಡು ಇದ್ದಾಗ ಅದು ಸರಿ ಎನಿಸುತ್ತದೆ. ಹಾಗಾಗಿ ಧ್ವನಿಮುದ್ರಣಗಳಿಂದಲೇ ನಾಟಕವನ್ನು ಪ್ರಸಾರ ಮಾಡಲಾಗಿತು. ರೇಡಿಯೋ ಮತ್ತು ಜಾನಪದ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲಾಗುತ್ತಿದುದು ಕೂಡ ಮುಖ್ಯ ಸಂಗತಿ.

**ರೇಡಿಯೋ ಮತ್ತು ಜಾನಪದ**

ರೇಡಿಯೋದಲ್ಲಿ ಬಳಕೆಯಾಗಿರುವ ಸಾಹಿತ್ಯದಲ್ಲಿ ಅತಿ ಹೆಚ್ಚಿನದಾಗಿ ಜಾನಪದ ಸಾಹಿತ್ಯವೆಂದೆ ಗುರುತಿಸಬಹುದಾಗಿದೆ. "ನಮ್ಮ ನಾಡಿನ ವಿವಿಧ ಭಾಗಗಳ ಲಾವಣಿಗಳು 'ಗೀಗೀ ಪದಗಳು ಮಂಟೇಸ್ವಾಮಿ ಹಾಡುಗಳು 'ಸೋಬಾನೆ' ಪದಗಳು ಇಡೀ ನಾಡಿನಾದ್ಯಂತ ವ್ಯಾಪಕವಾಗಿ ಬಳಕೆಯಾದವು. ಜಾನಪದ ಹಾಡು ಅತ್ಯಂತ ಸರಳವಾಗಿದ್ದರಿಂದ ಶಾಸ್ತ್ರೀಯ ಸಂಗೀತಕ್ಕಿಂತ ರೇಡಿಯೋದಲ್ಲಿ ಬಳಕೆಗೆ ಸುಲಭವಾಯಿತು. ಈ ಸರಳತೆಯಿಂದಾಗಿ ಜಾನಪದ ಸಾಹಿತ್ಯ ರೇಡಿಯೋದ ಮೂಲಕ ಹೆಚ್ಚು ಮನ್ನಣೆಗಳಿಸಿಕೊಂಡಿದೆ."[೪೭]

ವಿವಿಧ ಆಕಾಶವಾಣಿ ಕೇಂದ್ರಗಳು ತಾವು ಧ್ವನಿ ಮುದ್ರಿಸಿಕೊಂಡ ಗೀತೆಗಳು ಕರ್ನಾಟಕದ ಇತರ ಆಕಾಶವಾಣಿ ಕೇಂದ್ರಗಳಲ್ಲೂ ಪ್ರಸಾರವಾದವು. ಗುಲ್ಬರ್ಗಾದ ಹಂತಿಯ ಹಾಡುಗಳು ಬೆಂಗಳೂರಿನಲ್ಲೂ ಬೆಂಗಳೂರು ಆಕಾಶವಾಣಿಯ ಲಾವಣಿಗಳು ಗುಲ್ಬರ್ಗದಲ್ಲೂ ಮಂಗಳೂರಿನ ಯಕ್ಷಗಾನ ಬಿಜಾಪುರದಲ್ಲೂ ಬಿಜಾಪುರದ ಬಯಲಾಟ ಕಾರವಾರದಲ್ಲೂ ಪ್ರಸಾರವಾಗುವುದು ಸಾಧ್ಯವಾದ್ದರಿಂದ ಕನ್ನಡದ ಜಾನಪದ ಸಾಹಿತ್ಯಕ್ಕೆ ಒಂದು ಸಮಗ್ರತೆ ದೊರೆಯಲು ನೆರವು ಮಾಡಿಕೊಟ್ಟಿರುವುದನ್ನು ಗಮನಿಸಬೇಕಾಗುತ್ತದೆ.

**ಸುಗಮ ಸಂಗೀತ**

೧೯೩೫ ರಿಂದ ೨೦೦೮ ರ ವರೆಗೆ ಅಂದರೆ ಸುಮಾರು ೭೫ ವರ್ಷಗಳಲ್ಲಿ ಕಾವ್ಯ ಲೋಕದಲ್ಲಿ ವಿಪುಲ ಬದಲಾವಣೆಗಳಾಗಿವೆ. ಹಾಗೆಯೇ ಇ-ಮಾಧ್ಯಮಗಳೂ ಸಹ ವೈಯಕ್ತಿಕ ಇರಾದೆಯಿಂದ ಬೃಹತ್ ವಿದ್ಯಮವಾಗಿ ಬೆಳೆದು ನಿಂತಿವೆ. ಈ ಸುದೀರ್ಘ ಅವಧಿಯಲ್ಲಿ ಕಾವ್ಯಕ್ಷೇತ್ರ ಮತ್ತು ಮಾಧ್ಯಮೋದ್ಯಮ ಹಲವು ಏಳು ಬೀಳುಗಳನ್ನು ಕಂಡಿದ್ದರೂ ಅನೇಕ ಕವಿಗಳು ಆಕಾಶವಾಣಿಯ ಸುಗಮ ಸಂಗೀತದಿಂದಾಗಿ ನಾಡಿನೆಲ್ಲೆಡೆ ಜನಮನ್ನಣೆಗಳಿಸಿದ್ದಾರೆ.

ಕನ್ನಡ ಈ ಪ್ರಮುಖ ಕವಿಗಳ ಯಾವ ಯಾವ ಭಾವಗೀತೆಗಳನ್ನು ಯಾರು ಹಾಡಿಯಾರು ಸಂಗೀತ ನಿರ್ದೇಶಿಸಿದ್ದಾರೆಂಬುದನ್ನು ಪರಿಚಯ ಅಗತ್ಯವಾಗುತ್ತದೆ. ಕವನಗಳ ಸೌಂದರ್ಯ, ಸತ್ವ ಆಸ್ವಾದನೆಗೆ ಪ್ರಮುಖವಾಗಿ ಗಾಯಕರು. ಸಂಗೀತ ನಿರ್ದೇಶಕರು ವಹಿಸಿದ ಪಾತ್ರ ಮಹತ್ವದ್ದು. ಕಾವ್ಯ ಜನ ಸಾಮಾನ್ಯರಿಗೆ ತಲುಪಬೇಕೆಂಬ ಉದ್ದೇಶದಿಂದ ರಾಗ ಸಂಯೋಜಿಸಿ ಹೆಸರಾಂತ ಗಾಯಕರ ಧ್ವನಿಯ ಮೂಲಕ ಸಂಗೀತ ಪ್ರಿಯರ ಮನತಣಿಸಲು ಹತ್ತು ಹಲವು ಸಂಗೀತ ನಿರ್ದೇಶಕರು ಶ್ರಮಿಸಿದರು. ಎಂ.ಡಿ. ಪಾರ್ಥಸಾರಥಿ, ಪದ್ಮಚರಣ್, ಎಸ್.ಕೃಷ್ಣಮೂರ್ತಿ ಪಿ.ಕಾಳಿಂಗರಾವ್, ಮೈಸೂರು ಅನಂತಸ್ವಾಮಿ, ಸಿ. ಅಶ್ವಥ್ ಎಚ್.ಕೆ. ನಾರಾಯಣ ಈಚಿನ ವರ್ಷಗಳಲ್ಲಿ ಗಾಯನದೊಂದಿಗೆ ಸ್ವರಸ್ವಂಯೋಜನೆಯಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡಿದ್ದವರಲ್ಲಿ ಪ್ರಮುಖರು.

**ವಚನಗಾಯನ**

೧೨ನೆಯ ಶತಮಾನದ ವಚನಕಾರರಲ್ಲಿ ಪ್ರಮುಖರಾದ ಬಸವಣ್ಣ ಮತ್ತು ಅಕ್ಕಮಹಾದೇವಿ ಅವರ ಗೇಯತೆಗೆ ಹೆಸರಾದ ರಚನೆಗಳು ಆಕಾಶವಾಣಿಯಲ್ಲಿ ವಿಪುಲವಾಗಿ ಪ್ರಸಾರವಾಗಿವೆ. 'ಬಸವಣ್ಣನವರ' ಕಳಬೇಡ ಕೊಲಬೇಡ' ಉಳ್ಳವರು ಶಿವಾಲಯವ ಮಾಡುವರು. 'ನುಡಿದರೆ ಮುತ್ತಿನ ಹಾರದಂತಿರಬೇಕು.... ಲೋಕದ ಡೊಂಕ ನಿಲುತೀಕೆ ತಿದ್ದುವಿರಿ. ಮೊದಲಾದ ವಚನಗಳು ಆಕಾಶವಾಣಿಯಿಂದಲೇ ಜನಪ್ರಿಯುವಾಗಿದೆ.[೪೮] ಅಕ್ಕಮಹಾದೇವಿಯು 'ಚಿಲಪಿಲಿಯೆಂದೋದುವ ಗಿಳಿಗಳಿರಾ ನೀವು ಕೇಳಿರೆ ನೀವು ಕೇಳಿ ಮತ್ತು 'ಅಕ್ಕ ಕೇಳವ್ವಾ ಚಿಟ್ಟದ ಮೇಲೊಂದು ಮನೆಯ ಮಾಡಿ ಪ್ರಭು ದೇವರ' 'ಎತ್ತಣ ಮಾಮರ ಎತ್ತಣ ಕೋಗಿಲೆ' ಯಂತಹ ವಚನಗಳನ್ನು ಕೊಂಡೊಯ್ದಿತು. ಎಲ್ಲಾ ವರ್ಗದವರಿಗೂ ಕಾವ್ಯವನ್ನು ತಲುಪಿಸುವುದು ಸಾಧ್ಯವಾಯಿತು.

**ಆಧುನಿಕ ಕನ್ನಡ ಕವಿಗಳು**

**ಹುಯಿಲಗೋಳ ನಾರಾಯಣರಾವ್:** 'ಉದಯವಾಗಲಿ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯನ್ನು ಬರೆದು ಪ್ರಸಿದ್ಧರಾದವರು. ಈ ಗೀತೆಯು ಕನ್ನಡಿಗರಲ್ಲಿ ಏಕೀಕರಣದ ಭಾವನೆ ಮತ್ತಷ್ಟು ಜಾಗೃತವಾಗುವಂತೆ ಮಾಡಿದ್ದಾರೆ. ಕಾಳಿಂಗರಾವ್ ಅವರ ದನಿಯಲ್ಲಿ ಮೂಡಿ ಬಂದ ಈ ನಾಡಗೀತೆ ಕನ್ನಡಗರಲ್ಲಿ ಏಕೀಕರಣ ಆಂದೋಲನಕ್ಕೆ ಜಾಗೃತಿ ಮೂಡಿಸಲು ನೆರವಾಗಿದೆ ಎಂಬುದು ಮುಖ್ಯ ಸಂಗತಿಯಾಗಿದೆ.[೪೯] ಜನರಲ್ಲಿ ಜಾಗೃತಿ ಉಂಟು ಮಾಡುವಲ್ಲಿ ರೇಡಿಯೋ ಮುಖ್ಯಪಾತ್ರವಹಿಸಿದೆ ಎನ್ನಬಹುದು. ಈ ಗೀತೆಯಿಂದ 'ಹುಯಿಲಗೊಳ ನಾರಾಯಣರಾವ್ ಅವರ ಹೆಸರು ಕೂಡ ಬೆಳಕಿಗೆ ಬಂತು.

**ಕುವೆಂಪು:** ರಾಷ್ಟ್ರಕವಿ ಕುವೆಂಪು ಅವರ 'ಎಲ್ಲಾದರೂ ಇರು ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು' ಗೀತೆ ಕನ್ನಡಿಗರಲ್ಲಿ ಕನ್ನಡತನವನ್ನು ತುಂಬಿದ ಮತ್ತೊಂದು

ಕವಿತೆ. ಇದನ್ನು ಶಾರದಾ ಬಿ. ಹಾನಗಲ್ ೫ ದಶಕಗಳ ಹಿಂದೆ ಹಾಡಿ ಕನ್ನಡಾಭಿಮಾನ ಎಲ್ಲರಲ್ಲೂ ಮಾಡುವಂತೆ ಮಾಡಿದರು. 'ಜಯಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ' ಗೀತೆಯನ್ನು ವೃಂದಗಾನದಲ್ಲಿ ಮೈಸೂರು ಅನಂತಸ್ವಾಮಿ ಸಿ. ಅಶ್ವಥ್ ಸೊಗಸಾಗಿ ಹಾಡಿದ್ದಾರೆ. ಹೀಗೆ 'ಉದಯ ಗಗನದಲ್ಲಿ' 'ನನ್ನ ಚಿನ್ನದ ಚೆಲುವೆ' 'ಅನಂತದಿಂ ದಿಗಂತದಿಂ' ರಾತ್ರಿ ನಿನಗೆ ಸಾವಿರ ಕಣ್ಣುಗಳು ಮುಂತಾದ ಗೀತೆಗಳನ್ನು ಎಂ.ಕೆ. ಜಯಶ್ರೀ ಸುಲೋಚನೆ ಪಿ.ಕಾಳಿಂಗರಾವ್ ಪದ್ಮಚರಣ್ ಸಂಗೀತದಲ್ಲಿ ಪ್ರತ್ಯೇಕವಾಗಿ ಹಾಡಿದ್ದಾರೆ. ಈ ಗೀತೆಗಳಿಂದ ಕುವೆಂಪುರವರು ಎಲ್ಲರಿಗೂ ಚಿರಪರಿಚಿತರಾದರು.

**ದ.ರಾ.ಬೇಂದ್ರೆ:** ಸೂರ್ಯೋದಯವನ್ನು ರಸವತ್ತಾಗಿ ಕಟ್ಟಿಕೊಟ್ಟಿರುವಂತಹ 'ಮೂಡಲ ಮನೆಯಾ ಮುತ್ತಿನ ನೀರಿನ ಎರಕವ ಹೊಯ್ದು 'ಗೀತೆ ತುಂಬಾ ಪ್ರಸಿದ್ಧವಾದುದು. ಪಿ. ಕಾಳಿಂಗರಾವ್ ದನಿಯಲ್ಲಿ ಮೂಡಿಬಂದಿರುವ ಈ ಹಾಡು ಎಂದೆಂದಿಗೂ ನೂತನವಾಗಿದೆ. ಹಾಗೆಯೇ ತುಂ, ತುಂ, ತುಂ ತುಂಬಿ ಬಂದಿತ್ತಾ, 'ಇಳಿದು ಬಾ, ತಾಯಿ ಇಳಿದು ಬಾ' ಈ ಗೀತೆಗಳು ಜನರ ಮನಕ್ಕೆ ಮೆಚ್ಚುಗೆಯಾಗಿ ಇದರಿಂದ ಕವಿಯೂ ಸಹ ಚಿರಪರಿಚಿತನಾದ.

**ಕೆ.ಎಸ್.ನರಸಿಂಹಸ್ವಾಮಿ :** ಇತರ ಕವಿಗಳಿಂದ ಇ–ಮಾಧ್ಯಮದಲ್ಲಿ ಹೆಚ್ಚಿನ ಹಾಡು ಪ್ರಸಿದ್ಧಿ ಪಡೆದಿರುವಂತಹ ಕವಿ ಎಂದು ಹೇಳುಬಹುದಾಗಿದೆ. ಹೆಂಡತಿಯೊಬ್ಬಳು ಮನೆಯೊಳಗಿದ್ದರೆ ನಾನು ಒಬ್ಬ ಸಿಪಾಯಿ 'ಅತ್ಯಂತ ಜನಪ್ರಿಯವಾದವಾದ ಗೀತೆ. ಈ ಗೀತೆಗಳಂತೆ 'ದೇವ ನಿನ್ನ ಮಾಯೆಗಂಜಿ ನಡುಗಿ ಬಾಡೆನು' 'ಹತ್ತು ವರ್ಷದ (ತೇರಿನಲಿ) ಹಿಂದೆ ಮುತ್ತೂರ ತೇರಿನಲ್ಲಿ, ಚೆಂಗುಲಾಬಿ' ಕವನವನ್ನು ಗಾಯಕರು ಹಾಡಿ ಜನಮನವನ್ನು ತಣಿಸಿದ್ದಾರೆ. ಈ ಕವನಗಳನ್ನು ಕೇಳಿದ ಜನರಲ್ಲಿ ಕವನ ರಚನೆಯ ಕವಿಯೂ ಸಹ ಪರಿಚಿತರಾದರು.

**ಗೋಪಾಲಕೃಷ್ಣ ಅಡಿಗ :** ನವ್ಯ ಕವಿತೆ ಪಿತಾಮಹರಾದ ಅಡಿಗರು ಸಹ ಅವರು ಬರೆದ ಗೇಯ ಕವಿತೆಗಳಿಂದ ಪ್ರಸಿದ್ಧರಾದರು. 'ಪಿ.ಕಾಳಿಂಗ ರಾವ್ ಹಾಡಿದ' 'ಅವಳು ಕಡಲೊಳು' ಎಲ್ಲಾ ವರ್ಗದ ಜನರಿಗೆ ರಸಾಸ್ವಾದ ನೀಡಿರುವುದಾಗಿದೆ.[೫೦] ನಡೆ ಮುಂದೆ ನಡೆ ಮುಂದೆ' ಗೀತೆ ಯುವ ಜನಾಂಗದಲ್ಲಿ ಹೊಸ ನಾಡು ಕಟ್ಟುವ ಕಲ್ಪನೆಯನ್ನು ತುಂಬಿತು. 'ಯಾವ ಮೋಹನ ಮುರುಳಿ ಕರೆಯಿತೋ ದೂರ ತೀರಕೆ ನಿನ್ನನು' ಬಹುತೇಕ ಹಾಡಿ ಜನರಲ್ಲಿ ರಸದಾನಂದವನ್ನುಂಟುಮಾಡಿದ್ದಾರೆ.

**ಜಿ.ಎಸ್.ಶಿವರುದ್ರಪ್ಪ :** ಸಮನ್ವಯದ ಕವಿ ಎಂದು ಕರೆಯುವ ಶಿವರುದ್ರಪ್ಪನವರು ಬದುಕಿನಲ್ಲಿ ದೀಪ ಹೆಚ್ಚುವ ಕವಿಯಾಗಿದ್ದಾರೆ. 'ಆಕಾಶವಾಣಿ ಸುಗಮ ಸಂಗೀತದಿಂದ ಇವರ ಕಾವ್ಯ ಜನಮನದಲ್ಲಿ ನೆಲೆ ನಿಂತು ರಾಷ್ಟ್ರ ಕವಿಯ ಪಟ್ಟಗಿಟ್ಟಿಸಿಕೊಟ್ಟಿದೆ. ಅವರ ಆರಂಭದ ಹಣತೆ ಕವನ ಸಂಕಲನದಿಂದ ಹಿಡಿದು ಗೋಡೆಯಂತಹ ಸಂಕೀರ್ಣ ಕವಿತೆಯವರೆಗೆ. ಅವರು ಜೀವಪರವಾದ ಪ್ರಗತಿಪರ ನಿಲುವುಗಳನ್ನು ವ್ಯಕ್ತಪಡಿಸುತ್ತ ಹೋಗುವುದು. ಅವರೊಬ್ಬ

ಬೆಳಕು ಕಾವ್ಯ ಮಾರ್ಗ ತೋರುವ ಕವಿಯಾಗಿ ನಿಲ್ಲುತ್ತಾರೆ.[೫೧] ಎಂಬುದಕ್ಕೆ ಪುಷ್ಟಿ ನೀಡುತ್ತದೆ. ಹೌದೇನೇ ಉಮಾ ಅಹುದೇನೇ 'ಉಡುಗಣ ವೇಷ್ಟಿತ ಚಂದ್ರಸರೋಭಿತ' 'ಎಲ್ಲ ಓಡುವಿರಿ ನಿಲ್ಲಿ ಮೋಡಗಳೆ ನಾಲ್ಕು ಹನಿಯ ಚೆಲ್ಲಿ' ಇಂತಹ ಪ್ರಮುಖ ಕವನಗಳ ಮೂಲಕ ಪ್ರಸಿದ್ಧಾರಾಗಿದ್ದಾರೆ.

**ನಿಸಾರ್ ಅಹಮದ್** : 'ನಿತ್ಯೋತ್ಸವದ ಕವಿ' ಎಂಬ ಪ್ರಸಿದ್ಧರಾದವರು. ಅವರ ರಚಿಸಿರುವ 'ಜೋಗಿದ ಸಿರಿ' ಗೀತೆಯು ಆಕಾಶವಾಣಿಯಲ್ಲಿ ಪ್ರಸಾರ ಮಾಡಿದಾಗ ತುಂಬಾ ಜನಪ್ರಿಯವಾಯಿತು. ಆದ್ದರಿಂದಲೇ 'ಕವಿ ನಿಸಾರ್ ಅಹಮದ್‌ರವರು' 'ನಿತ್ಯೋತ್ಸವದ ಕವಿ' ಎಂಬ ಹೆಸರು ಪಡೆದರು. ಇಂದಿಗೂ ಕನ್ನಡಿಗರ ನಿತ್ಯೋತ್ಸವದ ಗೀತೆಯಾಗಿ ಜನಮನದಲ್ಲಿ ಮೊಳಗುತ್ತಿದೆ. ಹಾಗೆಯೇ 'ಕುರಿಗಳು ಸಾರ್ ಕುರಿಗಳು' 'ವರ್ಷಾದಿಯ' ಮುಂತಾದ ಕವನಗಳು ಆಕಾಶವಾನಿಯ ಮೂಲಕ ಜನಮನಕ್ಕೆ ತಲುಪಿ ಕನ್ನಡ ಕಂಪನ್ನು ಅವರಲ್ಲಿ ಚೆಲ್ಲಿವೆ.[೫೨] ಇವರಲ್ಲದೆ ಅನೇಕ ಕವಿಗಳು ಆಕಾಶವಾನಿಯ ಮೂಲಕ ಜನರಿಗೆ ಪರಿಚಯವಾಗಿದ್ದಾರೆ.

ತಂತ್ರಜ್ಞಾನದ ವಿಶಿಷ್ಟ ಕೊಡುಗೆಯಾದ 'ರೇಡಿಯೋ' ಕನ್ನಡ ಸಂದರ್ಭದ ಭಾಷೆ, ಸಾಹಿತ್ಯ ಹಾಗೂ ಇತರೆ ಸಾಂಸ್ಕೃತಿಕ ವಲಯ ಪ್ರವೇಶಸಿ ಜನರಿಗೆ ಜ್ಞಾನದ ಹೊಸದಿಕ್ಕಿನೆಡೆಗೆ ಕೊಂಡೊಯ್ದುದಿದೆ. ಜನರು, ಹೊಸ ಜ್ಞಾನ, ವಿಷಯಗಳನ್ನು, ದೂರದ ಸುದ್ದಿಸಮಾಚಾರಗಳನ್ನು, ದಿನ ನಿತ್ಯದ ಬದುಕಿನ ಅವಿಭಾಜ್ಯ ಅಂಗಗಳಾದ ಕೃಷಿ, ಉದ್ಯೋಗ ಮುಂತಾದ ವಿಷಯಗಳನ್ನು ತಮ್ಮ ಸ್ಥಳೀಯ ವಲಯಲದಲ್ಲದೆ. ಬೇರೆ ಬೇರೆ ಪ್ರಾದೇಶಿಕ ವಿಚಾರಗಳನ್ನು ತಿಳಿಯಲು ರೇಡಿಯೋ ಮಾಧ್ಯಮ ತುಂಬಾ ಪಾತ್ರವಹಿಸಿದೆ. ಅದರಂತೆ ಅನಕ್ಷರತೆಯಿಂದಲೇ ಇರುವ ಬಹುಪಾಲು ಮಂದಿಗೆ ಸಾಹಿತ್ಯದ 'ತಿಳುವಳಿಕೆ' ಎಂಬುದು ಪಡೆಯಲಾಗದ ಸ್ಥಿತಿ. ಇಂತಹ ಸಂದರ್ಭದಲ್ಲಿ ಕನ್ನಡ ಭಾಷೆಯಲ್ಲಿ ನಮ್ಮ ಕವಿಗಳು ರಚಿಸಿರುವ ಭಾವಗೀತೆ ದಾಸರ ಪದಗಳು, ತತ್ವಪದಗಳು, ಹಾಗೂ ಜನಪದ ಗೀತೆಗಳು ರೇಡಿಯೋ ಆಕಾಶವಾಣಿಯ ಮುಖಾಂತರ ಜನರ ಮನಸ್ಸನ್ನು ಹೊಕ್ಕು ಕನ್ನಡ ಭಾಷೆ ಮತ್ತು ಸಾಹಿತ್ಯದ ಅಭಿಮಾನ ಮೂಡಿಸಿ ಇನ್ನೂ ಸಾಹಿತ್ಯದ ಬೆಳವಣಿಗೆಗೆ ಸ್ಫೂರ್ತಿ ಮತ್ತು ಪ್ರೇರಣೆಯಾಗಿದೆ ಎನ್ನಬಹುದು.

**೪.೬.೨. ದೃಶ್ಯಮಾಧ್ಯಮಗಳು**

**ದೂರದರ್ಶನ**

ಸಮೂಹ ಸಂವಹನ ಮಾಧ್ಯಮಗಳಲ್ಲಿ ದೂರದರ್ಶನವು ಒಂದು. ಇದು ವಿದ್ಯುನ್ಮಾನ ಸಮೂಹ ಮಾಧ್ಯಮವಾಗಿದೆ. ೨೦ನೇ ಶತಮಾನದಲ್ಲಿ ಕನ್ನಡ ನಾಡು ನುಡಿ ಸಂಸ್ಕೃತಿ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ರೇಡಿಯೋ ತಂತ್ರಜ್ಞಾನದ ನಂತರ ಮತ್ತೊಂದು ವಿಶಿಷ್ಟ ತಂತ್ರಜ್ಞಾನ ಸಾಧನವಾಗಿ ದೂರದರ್ಶನ ಕಂಡುಬಂದಿದೆ. ಶ್ರವ್ಯ ಮಾಧ್ಯಮವಾಗಿದ್ದ ರೇಡಿಯೋಗಿಂತ ಭಿನ್ನವಾಗಿದ್ದು ಶ್ರವ್ಯ ಮತ್ತು ದೃಶ್ಯ ಮಾಧ್ಯಮವಾಗಿದ್ದುದರಿಂದ. ತಂತ್ರಜ್ಞಾನದ ಉತ್ತಮ ವಿಕಾಸಕ್ಕೆ

ದೂರದರ್ಶನ ಸಾಕ್ಷಿಯಾಗಿ ನಿಂತಿದೆ. ಕನ್ನಡ ಭಾಷೆಯ ಅಭಿವೃದ್ಧಿಗೆ ಪೂರಕ ನೆರವು ನೀಡಬಹುದಾದ ಮೂರು ಪ್ರಮುಖ ಮಾಧ್ಯಮಗಳಾದ ಆಕಾಶವಾಣಿ, ದೂರದರ್ಶನ ಮತ್ತು ಪತ್ರಿಕಾ ಮಾಧ್ಯಮ ಇವುಗಳಲ್ಲಿ ದೂರದರ್ಶನ ಬಹಳ ಪರಿಣಾಮಕಾರಿಯಾದುದಾಗಿದೆ. 'ಸಾಮಾಜಿಕ ಪರಿವರ್ತನೆಯ ಸಾದಕ ಎನಿಸಿಕೊಂಡಿದೆ. 'ದೂರದರ್ಶನ' ಎನ್ನುವ ಪದವನ್ನು 'ಟೆಲಿವಿಷನ್' ಎನ್ನುವುದಕ್ಕೆ ಸಂವಾದಿಯಾಗಿ ಬಳಸುತ್ತಿದ್ದು ಅನೇಕ ವಾಹಿನಿಗಳಿರುವುದರಿಂದ ಅವನ್ನೆಲ್ಲಾ ದೂರದರ್ಶನ ಎಂದು ಕರೆಯುತ್ತಾರೆ.[೫೩]

ಟೆಲಿವಿಷನ್ ಅಂದರೆ ಚಿತ್ರ ಮತ್ತು ಶಬ್ದ ಎರಡು ಒಟ್ಟಿಗೆ ದೊರೆಯುವ ಸಾಧನ ಹಾಗೂ ಮನರಂಜನಾ ಮಾಧ್ಯಮ. ಏಕಕಾಲಕ್ಕೆ ಲಕ್ಷಾಂತರ ಜನರಿಗೆ ಒಂದು ಹಾಸ್ಯ ಚಟಾಕಿಯನ್ನು ತಲುಪಿಸಬಲ್ಲದಾಗಿದ್ದೂ ಅದೇ ಕಾಲಕ್ಕೆ ತನ್ನ ಪ್ರಭಾವದಿಂದ ಅದು ವಿಶಿಷ್ಟ ಸ್ಥಾನದಲ್ಲಿ ಏಕಾಗಿಯಾಗಿ ನಿಲ್ಲುವಂತಹುದ್ದೆಂದು ಖ್ಯಾತ ಆಂಗ್ಲ ಲೇಖಕ ಟಿ.ಎಸ್.ಎಲಿಯಟ್ ಹೇಳಿದ್ದಾರೆ.[೫೪] ಟಿ.ವಿಯನ್ನು ಜಾನ್ ಲೋಗಿ ಬಾರ್ಡನು ಕಂಡು ಹಿಡಿದನು. 'ಭಾರತದಲ್ಲಿ ೧೯೫೯ ರ ಸೆಪ್ಟಂಬರ್ ೧೫ ರಂದು ಮೊದಲ ಬಾರಿಗೆ (ಭಾರತದಲ್ಲಿ) ದೆಹಲಿಯಲ್ಲಿ ಟೆಲಿವಿಷನ್ ಕಾರ್ಯಕ್ರಮ ಪ್ರಸಾರಗೊಂಡಿತು.[೫೫] ನಂತರ ೧೯೭೨ ರಲ್ಲಿ ಮುಂಬೈನಲ್ಲಿ ೨ನೇ ಕೇಂದ್ರ ಆರಂಭಗೊಂಡಿತು. ಎಂಬತ್ತರ ದಶಕದ ಆರಂಭದಲ್ಲಿ ದೂರದರ್ಶನವು ಪ್ರಸಾದ ಮಾಡಿದ ರಾಮಾಯಣ, ಮಹಾಭಾರತಗಳು ಭಾರತದ ಟಿ.ವಿ.ರಂಗದಲ್ಲಿ ವೀಕ್ಷಕರ ಸಂಖ್ಯೆಯ ಮಟ್ಟಿಗೆ ಕ್ರಾಂತಿ ಮಾಡಿದವು. ದೈನಂದಿನ ಟಿ.ವಿ.ಪ್ರಸಾರ ಪ್ರಾರಂಭವಾದುದು ೧೯೬೫ ರಲ್ಲಿ. ೧೯೭೨-೭೫ರ ಅವಧಿಯಲ್ಲಿ ದೂರದರ್ಶನ ದೇಶದ ಇನ್ನೂ ಆರು ನಗರಗಳಿಗೆ ವ್ಯಾಪಿಸಿತು. ೧೯೮೨ ರಿಂದ ಪ್ರಾರಂಭವಾದ ಮೂರನೆ ಘಟ್ಟದಲ್ಲಿ ದೆಹಲಿಯಿಂದ ಬರುವ ಕಾರ್ಯಕ್ರಮಗಳ ಮರು ಪ್ರಸಾರ ಮಾಡುವ ಪ್ರಸಾರ ಕೇಂದ್ರಗಳು ತ್ವರಿತವಾಗಿ ಬೆಳೆದವು. ೧೯೯೧ ರಲ್ಲಿ ಪ್ರಾರಂಭವಾದ ವಿದೇಶಿ ಉಪಗ್ರಹ ಚಾನಲ್‌ಗಳ ಪ್ರವೇಶ ಭಾರತದ ಟೆಲಿವಿಷನ್ ಚಿತ್ರವನ್ನು ಮೂಲಭೂತವಾಗಿ ಬದಲಾಯಿಸಿತು. "ಕರ್ನಾಟಕದಲ್ಲಿ ೧೯೭೫-೭೬ ರಲ್ಲಿ ನಡೆದ ಸೈಟ್ ಎಂಬ ಪ್ರಸಿದ್ಧವಾಗಿರುವ ಪ್ರಯೋಗದಲ್ಲಿ ಕರ್ನಾಟಕದ ಗುಲ್ಬರ್ಗ ರಾಯಚೂರು ಬಿಜಾಪುರ ಜಿಲ್ಲೆಗಳ ೪೦೦ ಹಳ್ಳಿಗಳಿಗೆ ಕನ್ನಡದಲ್ಲಿ ಸಮಾಜಶಿಕ್ಷಣ ಟಿ.ವಿ.ಕಾರ್ಯಕ್ರಮಗಳು ಪ್ರಸಾರವಾದವು."[೫೬] ೧೯೮೧ ರಲ್ಲಿ ಬೆಂಗಳೂರಿನಲ್ಲಿ ತಾತ್ಕಾಲಿಕ ವ್ಯವಸ್ಥೆಯಲ್ಲಿ ಉದ್ಘಾಟನೆಗೊಂಡು ಒಂದು ಕನ್ನಡ ಸುದ್ಧಿ ಸಂಗ್ರಹವೂ ಸೇರಿ ಸೀಮಿತ ಅವಧಿಯ ಕನ್ನಡ ಕಾರ್ಯಕ್ರಮಗಳ ಪ್ರಸಾರ ಪ್ರಾರಂಭವಾದದ್ದು ೧೯೮೩ ರಲ್ಲಿ. ಬೆಂಗಳೂರು ದೂದರ್ಶನ ೧೯೮೮ ರಲ್ಲಿ ಪೂರ್ಣ ಪ್ರಮಾಣದ ಕನ್ನಡ ಪ್ರಸಾರಗಳನ್ನು ಪ್ರಾರಂಭಿಸಿತು.

"ಕನ್ನಡ ಕಾರ್ಯಕ್ರಮಗಳ ವ್ಯಾಪಕತೆಯನ್ನು ಗ್ರಾಮೀಣ ಪ್ರದೇಶಗಳಿಗೆ ಹರಡುವ ಸಲುವಾಗಿ ೧೯೮೪ ರಲ್ಲಿ ಮಂಗಳೂರು, ದಾವಣಗೆರೆ ಬಿಜಾಪುರ, ಬಳ್ಳಾರಿ ಗದಗ ರಾಯಚೂರು, ಧಾರವಾಡ, ಮೈಸೂರು, ಬೆಳಗಾವಿ ಮತ್ತು ಹೊಸಪೇಟೆಗಳಲ್ಲಿ ಮರು ಪ್ರಸಾರ ಕೇಂದ್ರಗಳು

ಸ್ಥಾಪನೆಯಾದವು. ನಂತರ ಹಾಸನ, ತಿಪಟೂರು ಕೊಡಗು, ಶಿವಮೊಗ್ಗದಲ್ಲಿ ಮರು ಪ್ರಸಾರ ಕೇಂದ್ರಗಳು ಕಾರ್ಯರಂಭ ಮಾಡಿದವು. ೧೯೯೩ ರ ವೇಳೆಗೆ ರಾಜ್ಯದಲ್ಲಿ ೨೭ ಪ್ರಸಾರ ಕೇಂದ್ರಗಳಿದ್ದವು."[೫೭] ೧೯೯೪ ರ ಆಗಸ್ಟ್ ೧೫ ರಿಂದ ಕರ್ನಾಟಕ ಪ್ರಾದೇಶಿಕ ಪ್ರಸಾರ ಸೇವೆಯ ಮೂಲಕ ಸಂಪೂರ್ಣವಾಗಿ ಕನ್ನಡ ಕಾರ್ಯಕ್ರಮಗಳು ಬಿತ್ತರಗೊಳ್ಳತೊಡಗಿದವು.

೧೯೯೦ ರಲ್ಲೇ ಹುಟ್ಟಿಕೊಂಡ ವಿದ್ಯುನ್ಮಾನ ಮಾಧ್ಯಮಗಳ ಸ್ವಾಯತ್ತತೆಯ ಕಲ್ಪನೆ ಒಂದು ನಿರ್ದಿಷ್ಟ ರೂಪು ತಳೆದದ್ದು ೧೯೯೭ ರ ವೇಳೆಗೆ ೧೯೯೭ ರ ನವಂಬರಲ್ಲಿ 'ಪ್ರಸಾರ ಭಾರತಿ' ಕಾಯ್ದೆಯಡಿ ಅದೇ ಹೆಸರಿನಲ್ಲಿ ೧೯೭೬ ಇಸವಿಯಲ್ಲಿ ಬೇರ್ಪಟ್ಟಿದ್ದ ಈ ಎರಡೂ ಸಂಸ್ಥೆಗಳು ಮತ್ತೆ ಈಗ ೨೦೦೦ ರಿಂದ 'ಪ್ರಸಾರ ಭಾರತಿ' ಯಡಿ ಸಹವರ್ತಿ ಸಂಸ್ಥೆಗಳಾಗಿವೆ.

ಈಗ ೨೦೦೧ನೇ ಇಸವಿಯ ಪ್ರಾರಂಭದ ಹೊತ್ತಿನಲ್ಲಿ ದೂರದರ್ಶನದಲ್ಲಿ ಅನೇಕ ವಾಹಿನಿ ಎಂಟು ಪ್ರಮುಖ ಉಪಗ್ರಯ ಚಾನಲ್‌ಗಳು ಪ್ರಸಾರ ಮಾಡುತ್ತಿವೆ. ಪ್ರಾರಂಭದಲ್ಲಿ ಸಾಮಾನ್ಯವಾಗಿ ದೂರದರ್ಶನ ಎಂಪೀ ಕರೆಯಲಾಗುವ ಡಿಡಿ-೧ ಎಂದೂ ಅದರ ಉಪಗ್ರಹವಾಹಿನಿಯನ್ನು ಡಿಡಿ-೯ (ಚಂದನ) ಎಂದು ಹೆಸರಿಸಿದ್ದೇವೆ. ಈ ಎರಡು ಚಾನಲ್‌ಗಳು ಸರ್ಕಾರಿ ಸ್ವಾಮ್ಯದಲ್ಲಿವೆ. ಸರ್ಕಾರಿ ಸ್ವಾಮ್ಯದ ಚಾನಲ್‌ಗಳಂತೆ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕಾರ್ಯನಿರ್ವಹಿಸಲು ಹಲವು ಖಾಸಗಿ ಚಾನಲ್‌ಗಳು ಬಂದವು. ಉದಯ, ಉಷೆ, ಉದಯನ್ಯೂಸ್, ಈಟಿ.ವಿ. ಈ ಟಿ.ವಿಗಳಲ್ಲಿ ಕೆಲವೊಂದು ಸಮಾಚಾರ (ಉದಯನ್ಯೂಸ) ಕೆಲವೊಂದು ಮನರಂಜನಾ (ಉಷೆ) ನ್ಯೂಸ್ ಆಗಿದೆ. ಇನ್ನೂ ಇತರ ಚಾನಲ್‌ಗಳಾದ ಉದಯ, ಕಾವೇರಿ, ಈಟಿವಿ ಚಂದನ ವಾಹಿನಿಗಳು ವಾರ್ತೆಗಳಲ್ಲದೆ ಕಥಾದಾರಿನ ಧಾರಾವಾಹಿಗಳು ಚಲನಗಳು ಹಾಗೂ ಮನರಂಜನಾ ಕಾರ್ಯಕ್ರಮಗಳನ್ನು ಬಿತ್ತರಿಸುತ್ತೇವೆ. ಈ ಚಾನಲ್‌ಗಳಲ್ಲಿದೆ ಪ್ರಸ್ತುಕದಲ್ಲಿ ಕಸ್ತೂರಿ ಕನ್ನಡ, (ಜೀ) ಝೀ ಕನ್ನಡ, ಸುವರ್ಣ ಕನ್ನಡ, ಉದಯ ಮೂವೀಸ್ ಚಾನಲ್‌ಗಳು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧ ಪಟ್ಟ ಕಾರ್ಯಕ್ರಮಗಳನ್ನು ನಡೆಸುತ್ತಿವೆ. ಝೀ ಕನ್ನಡ ವಾಹಿನಿಯು ಸ ರಿ ಗ ಮ ಪ ಎಂಬ ವಿಶೇಷ ಕಾರ್ಯಕ್ರಮವನ್ನು ಇನ್ನೂ ಅನೇಕ ಕಾರ್ಯಕ್ರಮವನ್ನು ನಡೆಸುತ್ತಿದ್ದು ಅನೇಕ ಕಲಾವಿದರನ್ನು ಬೆಳಕಿಗೆ ತರುತ್ತಿದೆ. ಸಂಗೀತಗಾರರನ್ನು, ಹಾಡುಗಾರರನ್ನು, ನೃತ್ಯಗಾರರನ್ನು, ಉತ್ತಮ ನಿರೂಪಕರನ್ನು ಕನ್ನಡ ಜನತೆಗೆ ಪರಿಚಯ ಮಾಡಿಕೊಡುತ್ತಿದೆ.

**ಶ್ರೇಷ್ಠ ಕೃತಿಗಳ ದೃಶ್ಯಕಾವ್ಯ**

೨೦೦೫-೦೬ ನೇ ಸಾಲಿನಲ್ಲಿ ಭಾರತದ ಅತ್ಯುತ್ತಮ ಸಾಹಿತ್ಯ ಕೃತಿಗಳನ್ನು ದೂರದರ್ಶನದ ದೂರದರ್ಶನ ಧಾರಾವಾಹಿಗಳಾಗಿ ಚಿತ್ರಿಸಲು ಪ್ರಸಾರ ಭಾರತಿ ಒಟ್ಟು ೬೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಿದೆ. "ಸಾಹಿತ್ಯ ಅಕಾಡೆಮಿ ಮಾನ್ಯತೆ ಮಾಡಿರುವ ೨೨ ಭಾರತೀಯ ಭಾಷೆಗಳಲ್ಲಿ ಇಂತಹ ಕಾರ್ಯಕ್ರಮಗಳನ್ನು ನಿರ್ಮಿಸಿತ್ತು. ಈ ಕಾರ್ಯಕ್ರಮಕ್ಕೆ

ಎಲ್ಲಾ ಭಾರತೀಯ ಭಾಷೆಗಳ ಪ್ರಮುಖ ಲೇಖಕರ ಕೃತಿಗಳನ್ನು ಆಯ್ದುಕೊಳ್ಳಲಾಗಿತ್ತು. ರವೀಂದ್ರನಾಥ ಟ್ಯಾಗೋರ್, ಶರತ್‌ಚಂದ್ರ ಮುನ್ಷಿ ಪ್ರೇಮಚಂದ್, ಇಂದಿರಾ ಗೋಸ್ವಾಮಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮೊದಲಾದವರು ಈ ಪಟ್ಟಿಯಲ್ಲಿದ್ದಾರೆ."[೫೮] ಅತ್ಯಂತ ಪ್ರತಿಭಾನ್ವಿತ ಚಿತ್ರ ನಿರ್ದೇಶಕರಾದ ಆಡೂರು ಗೋಪಾಲ ಕೃಷ್ಣನ್, ಗಿರೀಶ್ ಕಾರ್ನಾಡ್, ಅಮೂಲ್ ಪಾಲೇಕರ್ ಗೌತಮ್ ಘೋಷ್ ಮೊದಲಾದವರು. ಶ್ರೇಷ್ಠ ಕೃತಿಗಳನ್ನು ದೃಶ್ಯೀಕರಣಗೊಳಿಸಿದ್ದಾರೆ. ಹಿಂದೆಯಂತೆ ಆಯಾ ಪ್ರಾದೇಶಿಕ ಭಾಷೆಯಲ್ಲಿ 'ಕೃತಿ ಆಧಾರಿತ ದೃಶ್ಯಾವಳಿಗಳ ನಿರ್ಮಾಣ ಮಾಡಿರುವಂತಹ ಉದಾಹರಣೆಗಳನ್ನು ನೋಡಬಹುದು. ಹಿಂದಿ : ಮುನ್ಷಿ ಪ್ರೇಮಚಂದರ್‌ರ 'ಗೋದಾನ' ಕಾದಂಬರಿ. ಡಿ.ಡಿ. ರಾಷ್ಟ್ರೀಯ ವಾಹಿನಿಗೆ ರೂಪಾಂತರ ಬಂಗಾಳಿ : ರವೀಂದ್ರನಾಥ ಟ್ಯಾಗೋರ್‌ರ 'ಗೀತಾಂಜಲಿ' ಡಿ.ಡಿ. ೧ ರಲ್ಲಿ ಪ್ರಸಾರ. ತೆಲಗು : ವಿಶ್ವನಾಥ ಸೂರ್ಯನಾರಾಯಣರ 'ನೀರುಣಂ' ಕಾದಂಬರಿ ಸಪ್ತಗಿರಿ ವಾಹಿನಿಯಲ್ಲಿ ಪ್ರಸಾರ. ಕನ್ನಡದ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ 'ಮೊಸರಿನ ಮಂಗಮ್ಮ' ಸಣ್ಣಕತೆ ಚಂದನ ವಾಹಿನಿಯಲ್ಲಿ ಪ್ರಸಾರ. ಹೀಗೆ ದೂರದರ್ಶನದಲ್ಲಿ ೨೦೦೫-೦೬ನೇ ಸಾಲಿನಲ್ಲಿ ಪ್ರಸಾರ ಭಾರತೀಯ ಯೋಜನೆ ಸಾಹಿತ್ಯಕ್ಕೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಇದು ಪ್ರೋತ್ಸಾಹದಾಯಕ ಎನ್ನಬಹುದು.

**ನಾಟಕ**

ಕರ್ನಾಟಕದ ಇ-ಮಾಧ್ಯಮದ ಬೆಳವಣಿಗೆಯ ಸಂದರ್ಭದಲ್ಲಿ ರೇಡಿಯೋ ಮೊಟ್ಟಮೊದಲಿಗೆ ಸಾಹಿತ್ಯ, ಸಂಸ್ಕೃತಿ, ನಾಟಕ, ಸಂಗೀತ, ಕಲೆಗೆ ಅಪಾರವಾದ ಕೊಡುಗೆ ನೀಡಿದೆ. ನಂತರ ದೂರದರ್ಶನದ ಯುಗ. ಶ್ರವ್ಯ ಮಾಧ್ಯಮವಾಗಿದ್ದ ರೇಡಿಯೋಗಿಂತ ದೂರದರ್ಶನ ಭಿನ್ನವಾಗಿತ್ತು. ಕಾರಣ ದೃಶ್ಯ ಮತ್ತು ಶ್ರವ್ಯ ಎರಡು ಮಾಧ್ಯಮವಾಗಿದ್ದು ಪ್ರೇಕ್ಷಕರಿಗೆ ಹತ್ತಿರವಾದವು. ಧಾರಾವಾಹಿಗಳ ಪ್ರಾಬಲ್ಯ ಪಡೆಯುವ ಮುನ್ನ ನಾಟಕಗಳು ದೂರದರ್ಶನದಲ್ಲಿ ಪ್ರಸಾರವಾಗುತ್ತಿದ್ದವು. ಜಾನಪದದಿಂದ ಪ್ರಭಾವಿತವಾದ ಚಂದ್ರಶೇಖರ ಕಂಬಾರರ 'ಸಂಗ್ಯಾಬಾಳ್ಯ' 'ಜೈಸಿದ ನಾಯ್ಕ', 'ಜೋಕುಮಾರಸ್ವಾಮಿ' 'ಋಷ್ಯಶೃಂಗ', ಮೊದಲಾದ ನಾಟಕಗಳು ಬೆಂಗಳೂರು ದೂರದರ್ಶನ ಆರಂಭವಾಗುವುದಕ್ಕಿಂತ ಮುನ್ನವೇ ಹೈದರಾಬಾದ್‌ನಿಂದ ನಿರ್ಮಾಣಗೊಂಡು ಗುಲ್ಬರ್ಗಾ ಕೇಂದ್ರದಿಂದ ಪ್ರಸಾರವಾದವು.[೫೯] ಅದೇ ರೀತಿ ಬೆಂಗಳೂರು ದೂರದರ್ಶನ ಕೇಂದ್ರ ಬಹುತೇಕ ಎಲ್ಲಾ ಪ್ರಮುಖ ನಾಟಕಕಾರರ ನಾಟಕಗಳನ್ನು ಚಿತ್ರೀಕರಿಸಿ ಪ್ರಸಾರ ಮಾಡಿದೆ. ಅಂತಹ ಪ್ರಮುಖ ನಾಟಕಗಳು. ಗಿರೀಶ್ ಕಾರ್ನಾಡ್ : ಹಯವದನ, ಯಾಯಾತಿ, ಮಾನಿಷಾದ, ನಾಗಮಂಡಲ, ಲಂಕೇಶ್ : ತೆರೆಗಳು, ತಲೆದಂಡ, ಚಂದ್ರಶೇಖರ ಕಂಬಾರ : ಜೋಕುಮಾರಸ್ವಾಮಿ, ಸಿರಿಸಂಪಿಗೆ, ಸಂಗ್ಯಾಬಾಳ್ಯಾ, ಚಂದ್ರಶೇಖರ ಪಾಟೀಲ : ಅಪ್ಪ, ಟಿಂಗರ ಬುಡ್ಡಣ್ಣ. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ : ಯಶೋಧರ, ವಿ.ಕೃ. ಗೋಕಾಕ : ಜನನಾಯಕ, ಕುವೆಂಪು : ರಕ್ತಾಕ್ಷಿ, ಮಹಾರಾತ್ರಿ, ಚಂದ್ರಹಾಸ ಬೇಂದ್ರೆ : ಜಾತ್ರೆ, ಹೊಸ ಸಂಸಾರ. ಅನಂತಮೂರ್ತಿ : ಸಣ್ಣಕಥೆ ಆಧಾರಿತ

ಮೌನಿಕೀರಂ : ನೀಗಿಕೊಂಡ ಸಂಸ, ಜಡಭರತ : ಆ ಊರು ಈ ಊರು, ಕದಡಿದ ನೀರು. ಕಣಗಾಲ ಪ್ರಭಾಕರ ಶಾಸ್ತ್ರಿ : ಪ್ರಚಂಡ ರಾವಣ ಪರ್ವತವಾಣಿ : ಬಹದ್ದೂರ ಗಂಡ, ತಿನ್ನಬೇಕೆ ತಿಂದು ಕುಡಿಯಬೇಕೆ. ಗೊ.ರು.ಚ. : ಸಾಕ್ಷಿಕಲ್ಲು, ಬೆಳ್ಳಕ್ಕಿ ಹಿಂಡು ಬೆದರ್ಯಾವೋ. ಈ ನಾಟಕಗಳು ಪ್ರೇಕ್ಷಕರಲ್ಲಿ ಕುತೂಹಲವನ್ನುಂಟು ಮಾಡಿದವು. ಈ ನಾಟಕ ಪ್ರಸಾರದ ಹಿಂದೆ ಪ್ರಮುಖ ನಾಟಕಕಾರರು ನಿರ್ದೇಶಕರು ಸಹ ದುಡಿದಿದ್ದಾರೆ. ಬಿ.ವಿ. ಕಾರಂತ, ಸಿ.ಚಿ.ಕೆ. ಕೃಷ್ಣಸ್ವಾಮಿ, ಪ್ರೇಮಕಾರಂತ್, ಏಣಗಿ ಬಾಳಪ್ಪ, ಕೆ.ಬಿ.ಆರ್.ನಾಟಕ ಕಂಪನಿಯ ಬಸವರಾಜ ಗುಡಗೇರಿ, ದೂರದರ್ಶನದ ಉದ್ಯೋಗಿಗಳಾದ ಕೆ.ವಿ. ಶ್ರೀನಿವಾಸ್ ಪ್ರಭಾ, ರಾಜೇಂದ್ರ ಕಟ್ಟಿ, ಮೋಹನ್ ರಾಂ, ಸೂರಿ, ಎನ್.ಜಿ. ಶಿವಕುಮಾರ್, ಗುಣಶೀಲನ್, ಚಂದ್ರಕುಮಾರ್ ಮೊದಲಾದವರು ನಾಟಕ ವಿಭಾಗದಲ್ಲಿ ನಿರ್ಮಾಪಕರಾಗಿ ದುಡಿದಿದ್ದಾರೆ.

### ಕಾವ್ಯ

ರೇಡಿಯೋಗೆ ಹೋಲಿಸಿದಾಗ ಕಾವ್ಯ ಪ್ರಸಾರ ಟಿ.ವಿ.ಯಲ್ಲಾಗಿರುವುದು ಕಡಿಮೆ. ಕಾರಣ ಪ್ರಾಚೀನ ಕಾವ್ಯವೊಂದನ್ನು ಯಥಾವತ್ತಾಗಿ ದೃಶ್ಯ ಮಾಧ್ಯಮಕ್ಕೆ ತರವುದು ಅಸಾಧ್ಯವಾದ ಕೆಲಸ. ಆ ಕಾವ್ಯವನ್ನು ರೂಪಾಂತರಿಸಿಕೊಂಡು ನಾಟಕ ಇಲ್ಲವೇ ಧಾರಾವಾಹಿಗಳನ್ನು ಕಂತುಗಳಲ್ಲಿ ನಿರ್ಮಿಸಬಹುದೇ ಹೊರತು ಇಡಿಯಾದ ಕಾವ್ಯವನ್ನು ರೂಪಾಂತರಿಸಿಕೊಂಡು ನಾಟಕ ಇಲ್ಲವೇ ಸಮಗ್ರ ರೂಪದಲ್ಲಿ ಪ್ರೇಕ್ಷಕರ ಮುಂದಿಡುವುದು ದುಸ್ಸಾಹಸವಾಗುತ್ತದೆ. "ಕನ್ನಡದ ಅತ್ಯಂತ ಪ್ರಾಚೀನ ಕಾವ್ಯವಾದ ಕವಿರಾಜ ಮಾರ್ಗ ಹಾಗೂ ಪಂಪನ ವಿಕ್ರಮಾರ್ಜುನ ವಿಜಯ ಇಲ್ಲವೆ ಆದಿಪುರಾಣ ಮಹಾಕಾವ್ಯವನ್ನು ಚಿತ್ರೀಕರಿಸಲು ಅಸಾಧ್ಯ. ಇವುಗಳನ್ನು ಮೊದಲು ನಾಟಕ ರೂಪಕ್ಕೆ ಪರಿವರ್ತಿಸಿಕೊಂಡು ಸಾವಿರಾರು ಭಾಗಗಳಾಗಿ ಮಾಡಿಕೊಂಡು ಟಿ.ವಿ. ಕಾರ್ಯಕ್ರಮವನ್ನು ನಿರ್ಮಿಸಬಹುದು. ಆದರೆ ಇದರ ನಿರ್ಮಾಣಕ್ಕೆ ಹಿಡಿಯುವ ಕಾಲ, ಶ್ರಮ, ವೆಚ್ಚ ಎಲ್ಲವನ್ನು ಲೆಕ್ಕ ಹಾಕಿದರೆ ಯಾವುದೇ ಟಿ.ವಿ. ಚಾನಲ್ ಇಂತಹ ಪ್ರಯತ್ನ ಮಾಡುವುದಿಲ್ಲ."[೬೦] ಟಿ.ವಿ.ಯಲ್ಲಿ ಹೆಚ್ಚೆಂದರೆ ದಿನಕ್ಕೋ ವಾರಕ್ಕೋ ಒಂದು ಬಾರಿ ಒಂದು ಕಾವ್ಯದ ತುಣುಕನ್ನು ಅರ್ಧ ಗಂಟೆ ವಾಚನ ಮಾಡಬಹುದು. ಅಥವಾ ಅರ್ಥಕ್ಕೆ ಹೇಳಬಹುದು. ಅಥವಾ ಕವಿ ಕಾವ್ಯದ ಪರಿಚಯ ಮಾಡಬಹುದು. ಆದ್ದರಿಂದ ದೂರದರ್ಶನ ಸಹ ಕೆಲಕಾಲ ತನ್ನ ಸಾಹಿತ್ಯ ಕಾರ್ಯಕ್ರಮದಲ್ಲಿ ಇಂತಹ ಕಾವ್ಯ ವಾಚನವನ್ನು ನಡೆಸಿತು.

### ಕಾದಂಬರಿ

ಆಕಾಶವಾಣಿಯಲ್ಲಿ ಶ್ರೇಷ್ಠ ಕಾದಂಬರಿಗಳನ್ನು ರೂಪಾಂತರಗೊಳಿಸಿ ಪ್ರಸಾರ ಮಾಡುವ ಪರಿಪಾಠ ಮೊದಲಿನಿಂದಲೂ ಆರಂಭವಾಯಿತು. ಅದು ಕನ್ನಡ ಭಾಷೆಗಲ್ಲದೆ ಇಡೀ ಭಾರತೀಯ ಭಾಷೆಗಳಿಗೆ ಅನ್ವಯವಾಯಿತು. ಶಿವರಾಮಕಾರಂತರಿಗೆ ಜ್ಞಾನಪೀಠ ಪುಶಸ್ತಿ ದೊರೆತ ಸಂದರ್ಭದಲ್ಲಿ ಅವರ 'ಮೂಕಜ್ಜಿಯ ಕನಸುಗಳು' ಕಾದಂಬರಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ರೇಡಿಯೋ

ರೂಪಕ್ಕೆ ಅಳವಡಿಸಲಾಯಿತು. ನಂತರ ದೂರದರ್ಶನ ಸಹ ಇದೇ ಪರಂಪರೆಯನ್ನು ಮುಂದುವರೆಸಿ ತನ್ನ ಪ್ರಾಯೋಜಿತ ಇಲ್ಲವೆ ಸಂಭಾವನೆ ಸಹಿತದ ಗುತ್ತಿಗೆ ಆಧಾರದ ಮೇಲೆ "ಕಾದಂಬರಿಗಳನ್ನು ಧಾರಾವಾಹಿ ರೂಪದಲ್ಲಿ ನಿರ್ಮಾಣ ಮಾಡಲು ಆರಂಭಿಸಿತು. ಆ ಪೈಕಿ ತ್ರಿವೇಣಿ ಮಾಸ್ತಿ, ಆರ್ಯಾಂಭ ಪಟ್ಟಾಭಿ, ಎಸ್.ಎಲ್. ಭೈರಪ್ಪ ಮೊದಲಾದವರ ಕಾದಂಬರಿಗಳು ಪ್ರಮುಖವಾದವು. ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ ೫೦ ಕ್ಕಿಂತಲೂ ಹೆಚ್ಚು ಕಂತುಗಳಲ್ಲಿ ಪ್ರಸಾರವಾಯಿತು. ೨೦೦೬ ರಲ್ಲಿ ಬೆಂಗಳೂರು ದೂರದರ್ಶನ ಕನ್ನಡದ ಮೂರು ಮಹತ್ವದ ಕೃತಿಗಳನ್ನು ಟೆಲಿಚಿತ್ರಗಳಾಗಿ ನಿರ್ಮಿಸಿ ಪ್ರಸಾರ ಮಾಡಿದೆ.[೮೧] ಪೂರ್ಣಚಂದ್ರ ತೇಜಸ್ವಿಯವರ 'ಚಿದಂಬರ ರಹಸ್ಯ' ಕಾದಂಬರಿ ಆಧರಿಸಿದ ಟೆಲಿಚಿತ್ರ ಆಗಸ್ಟ್ ೭ ರಿಂದ ೧೧ ರ ವರೆಗೆ ಪ್ರಸಾರವಾಯಿತು. ಬಂಡಾಯ ಲೇಖಕ ದೇವನೂರ ಮಹಾದೇವ ಅವರ ಕೇಂದ್ರ ಸಾಹಿತ್ಯ ಆಕಾಡೆಮಿ ಪ್ರಶಸ್ತಿ ಪಡೆದ ಕುಸುಮಬಾಲೆ ಕಿರುಕಾದಂಬರಿಯನ್ನು ಕೆ.ಎಂ. ಚೈತನ್ಯ ನಿರ್ದೇಶನದಲ್ಲಿ ಆಗಸ್ಟ್ ೨೧ ರಿಂದ ೨೮ ರ ವರೆಗೆ ಪ್ರಸಾರ ಮಾಡಲಾಯಿತು. ನವ್ಯ ಕತೆಗಾರರಾದ ಶಾಂತಿನಾಥ ದೇಸಾಯಿಯವರ ಕೊನೆಯ ಕಾದಂಬರಿ 'ಓಂಣಮೋ ಆಗಸ್ಟ್ ೨೮ ರಿಂದ ಸೆಪ್ಟೆಂಬರ್ ೬ ರ ವರೆಗೆ ಚೈತನ್ಯ ಅವರ ನಿರ್ದೇಶನದಲ್ಲಿ ಪ್ರಸಾರ ಕಂಡಿತು. ಗಿರೀಶ್ ಕಾಸವಳ್ಳಿಯವರು ಭೈರಪ್ಪನವರ ಕಾದಂಬರಿಯಾದ 'ಗೃಹಭಂಗ'ವನ್ನು ದೂರದರ್ಶನದ ಕಿರುತೆರೆಗೆ ತಂದರು. ಅದು ಜನಪ್ರಿಯವೂ ಆಯಿತು. ನಿರಂಜನರ ಚಿರಸ್ಮರಣೆ, ಅನಂತಮೂರ್ತಿಯವರ ಭಾರತೀಪುರ ಕಾದಂಬರಿ, ಕುವೆಂಪುರವರ ಮಲೆಗಳಲ್ಲಿ ಮದುಗಳು, ಅಡಿಗರ ಅನಾಥೆ, ತೇಜಸ್ವಿಯವರ ಅಬಚೂರಿನ ಪೋಸ್ಟ್ ಆಫೀಸ್ ಮೊದಲಾದ ಅಪೂರ್ವ ಸಾಹಿತ್ಯ ಕೃತಿಗಳು ದೂರದರ್ಶನದಿಂದ ಜನಪ್ರಿಯವಾಗಿದೆ.

**ಸಣ್ಣಕತೆ**

ಆಧುನಿಕ ಕನ್ನಡ ಸಾಹಿತ್ಯದ ಪ್ರಸಾರಗಳಲ್ಲಿ ಸಣ್ಣಕತೆಯು ಕೂಡ ಒಂದು "ದೂರದರ್ಶನದಲ್ಲಿ ಸೆಪ್ಟೆಂಬರ್ ೨೦೦೬ ರಿಂದ ಆರಂಭವಾದ 'ಕಥಾಸರಿತಾ' ಮಾಲಿಕೆಯಲ್ಲಿ ಕನ್ನಡದ ೧೩ ಕಥೆಗಳು ಕಿರುತೆರೆಯಲ್ಲಿ ಪ್ರಸಾರವಾಗಿವೆ. ಕರ್ನಾಟಕದವರೇ ಆದ ಆದರೆ ಕನ್ನಡ ಬಾರದ ಟಿ.ಎಸ್.ನರಸಿಂಹನ್ ಇವುಗಳನ್ನು ನಿರ್ಮಿಸಿದ್ದಾರೆ."[೮] ಜಯಂತ ಕಾಯ್ಕಿಣಿ ಅವರ 'ಟ್ರಿಸಿಕಲ್' ಪಂಜೆಮಂಗೇಶರಾವ್ ಅವರ 'ಕಮಲಾಪುರದ ಹೋಟ್ಲಿನಲ್ಲಿ' ಸರಸ್ವತಿಬಾಯಿ ರಾಜವಾಡೆಯವರ 'ಅವಳ ಉದ್ಧಾರ' ಕೊರಡ್ಕರ್ ಶ್ರೀನಿವಾಸರಾವ್ ಅವರ 'ಧಣಿಯರ ಸತ್ಯನಾರಾಯಣ' ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಮೊಸರಿನ ಮಂಗಮ್ಮ, ವಿ.ಜಿ. ಶಾನಭಾಗರ 'ದೇವದಾಸಿ' ಕೆರೂರು ವಾಸುದೇವಾಚಾರ್ಯರ ತೆರಾಳೆದ ಮುತ್ತು ಬಾಗಲೋಡಿ ದೇವರಾಯರ ಅವರವರ 'ಸುಖ ದುಃಖ ಅಶ್ವತ್ಥರ ವ್ಯಭಿಚಾರ' ಕೆ.ಸದಾಶಿವ ಅವರ 'ಮತ್ತೆ ಮಳೆಹುಯ್ಯುತ್ತಿದೆ' ಎಲ್ಲಾ ನೆನಪಾಗುತ್ತಿದೆ. ಶ್ರೀ ಕೃಷ್ಣ ಆಲನಹಳ್ಳಿಯವರ 'ಸಂಬಂಧ ರಾಜಲಕ್ಷ್ಮಿ ಎನ್.ರಾವ್ ಅವರ' ಇಲ್ಲಾ ಇಲ್ಲಾ ಈ ಕೃತಿಗಳು ಈ ಮಾಲಿಕೆಯಲ್ಲಿ ಸೇರಿವೆ.

### ದೂರದರ್ಶನ ಮತ್ತು ಜಾನಪದ

ದೂರದರ್ಶನವು ಜಾನಪದ ಸಾಹಿತ್ಯವನ್ನು ಮಾತ್ರ ಬೆಳಕಿಗೆ ತರದೆ ಬದಲಿಗೆ ಅದು ಜಾನಪದ ಸಂಸ್ಕೃತಿಯನ್ನೇ ನಾಡಿನ ಜನರಿಗೆ ತೆರೆದು ತೋರಿಸಿತು. ರೇಡಿಯೋದಲ್ಲಿ ಪ್ರಸಾರವಾದ ಜಾನಪದ ಗೀತೆಗಳನ್ನು ಟಿ.ವಿ. ಸಹ ದೃಶ್ಯ ಮಾಧ್ಯಮಕ್ಕೆ ಅಳವಡಿಸಿ ಪ್ರಸಾರ ಮಾಡಿದಾಗ ಆ ಜಾನಪದ ಕಲಾವಿದರಿಗೆ ಒಂದು ಹೊಸ ಶಕ್ತಿ ಮತ್ತು ವ್ಯಕ್ತಿತ್ವ ದೊರೆತಂತಾಯಿತು. "ಯಕ್ಷಗಾನ ಮತ್ತು ಬಯಲಾಟಗಳು ಹಾಗೂ ಮೊದಲಾದ ಕಲಾ ಪ್ರಕಾರಗಳು ಟಿ.ವಿ. ಮಾಧ್ಯಮದಲ್ಲಿ ಹೆಚ್ಚು ಹೊಂದಿಕೊಳ್ಳುವ ಕಾರ್ಯಕ್ರಮಗಳಾದವು. ಹಾಗೆಯೇ 'ದ್ರೌಪತಿ ಸ್ವಯಂವರ' 'ಲಂಕಾದಹನ' 'ಕುರುಕ್ಷೇತ್ರ' 'ಸೀತಾಪರಿಣಯ' ಶ್ರೀಕೃಷ್ಣ ಪಾರಿಜಾತ, ಸಂಪೂರ್ಣ ರಾಮಾಯಣ ಮುಂತಾದ ಪೌರಾಣಿಕ ಕಥಾ ವಸ್ತುಗಳು ಜೊತೆಗೆ ಜೋಕುಮಾರಸ್ವಾಮಿ' 'ಋಷ್ಯಶೃಂಗ' ನಾಗಮಂಡಲ, 'ಜೈಸಿದ ನಾಯ್ಕ' ಜನಪದ ನಾಟಕಗಳು ದೂರದರ್ಶನದಲ್ಲಿ ತೆರೆಕಂಡು ಜನಪ್ರಿಯತೆಗಳಿಸಿದವು.[೬೨] ಇದರಿಂದಾಗಿ ಆಕಾಶವಾಣಿ ಮಾಡಿದಂತಹ ಒಂದು ಪ್ರದೇಶದ ಜಾನಪದ ಪ್ರಕಾರವನ್ನು ಇಡೀ ರಾಜ್ಯಕ್ಕೆ ತೋರಿಸುವಂತಹ ಪ್ರಯತ್ನವನ್ನು ದೂರದರ್ಶನ ಮುಂದುವರೆಸಿತು. ಆಕಾಶವಾಣಿ ಸಂಧಿಸಿದಂತಹ ವೈವಿದ್ಯತೆಯಲ್ಲಿನ ಏಕತೆಯನ್ನು ಸಾಧಿಸುವ ಪ್ರಯತ್ನವನ್ನು ದೂರದರ್ಶನವು ಆರಂಭಿಸಿ, ಮುಂದುವರೆಸಿ, ಯಶಸ್ವಿಯಾಯಿತು. ಇದಲ್ಲದೆ ಜನಪದ ಕಲಾ ಪ್ರಕಾರಳಾದ 'ಡೊಳ್ಳು ಕುಣಿತ, 'ವೀರಣಾಸೆ' ಸೊಂಮನ ಕುಣಿತ' 'ಕಂಸಾಳೆ' ಯಂತಹ ವಾದ್ಯ ವಿಶಿಷ್ಟವಾದ ಜಾನಪದ ಸಂಗೀತವನ್ನು ಜನರಿಗೆ ಪರಿಚಯ ಮಾಡಿಕೊಟ್ಟಿದ್ದು. ಮಹತ್ವದ ಸಾಧನೆಯಾಗಿದೆ. ಅದರ ಜೊತೆ ಜೊತೆಗೆ 'ನಗಾರಿ' 'ಡೋಲು, 'ಶಹನಾಯ್', 'ತಮಟೆ' 'ಕರಡಿ ಮಜಲು' ಕಹಳೆ 'ಹಲಗೆ' 'ಕೊಂಬು' ಇಂತಹ ಜಾನಪದ ಉಪಕರಣಗಳನ್ನು ಬಳಸಿದ ನಂದಿಕೋಲಿನ ನೃತ್ಯ ಕಾರ್ಯಕ್ರಮಗಳನ್ನು ದೂರದರ್ಶನ ಪ್ರಸಾರ ಮಾಡಿ ಜಾನಪದ ಕಲಾ ಪ್ರಪಂಚವನ್ನು ಪ್ರೇಕ್ಷಕರಿಗೆ ತೆರದಿಟ್ಟಿದ್ದು ಒಂದು ಮೈಲುಗಲ್ಲಾಗಿದೆ.

ದೂರದರ್ಶನವು ಮನರಂಜನೆಯ ಉದ್ದಿಮೆಯಾಗಿ ದಿನೇ ದಿನೇ ಬೆಳೆದಂತೆ ದೂರದರ್ಶನದಲ್ಲಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಚಾನಲ್‌ಗಳು ಉಗಮಗೊಂಡವು. ಈ ಚಾನಲ್‌ಗಳಲ್ಲಿ ಸರ್ಕಾರಿ ಸ್ವಾಮ್ಯದ ಚಾನಲ್‌ಗಳು ಮತ್ತು ಖಾಸಗಿ ಚಾನಲ್‌ಗಳು ಸರ್ಕಾರಿ ಸ್ವಾಮ್ಯದ ಚಾನಲ್‌ಗಳಾದ ಡಿ.ಡಿ.-೧ ಮತ್ತು ಡಿ.ಡಿ.-೯ ಚಂದನ ಇವುಗಳಲ್ಲಿ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ಸರ್ಕಾರ ಮಾಡುತ್ತಾ ಬಂದಿದೆ. ಇದರಿಂದ ನಾಡಿನಾದ್ಯಂತ ಜನರಿಗೆ, ಭಾಷೆ, ಸಾಹಿತ್ಯ ಸಂಗೀತ, ಕಲೆ, ಸಂಸ್ಕೃತಿ ಮುಂತಾದ ವಿಚಾರಗಳನ್ನು ಪ್ರದರ್ಶಿಸಿ ಜನಮನದಲ್ಲಿ ಸಾಹಿತ್ಯಾಭಿರುಚಿ ಮತ್ತು ಭಾಷಾಭಿಮಾನವನ್ನು ತುಂಬಿದೆ.

ಸರ್ಕಾರಿ ಸ್ವಾಮ್ಯದ ಚಾನಲ್‌ನಂತೆ ಖಾಸಗಿ ಸ್ವಾಮ್ಯದ ಚಾನಲ್‌ಗಳು ಕನ್ನಡ ಭಾಷೆಯಲ್ಲಿ ಕನ್ನಡಕ್ಕೆ ಸಂಬಂಧಪಟ್ಟಂತೆ ಹಲವಾರು ಕಾರ್ಯಕ್ರಮಗಳನ್ನು ನೀಡುತ್ತಾ ಬಂದಿವೆ. ಕನ್ನಡದ

ಮೊಟ್ಟಮೊದಲ ಖಾಸಗಿ ಟೆಲಿವಿಷನ್ ವಾಹಿನಿ ಎಂಬ ಹೆಗ್ಗಳಿಕೆಗೆ ಇರುವ ಉದಯ ಟಿ.ವಿ. ಈ.ಟಿ.ವಿ., ಝೀ ಟಿ.ವಿ. ಕನ್ನಡ ಕಸ್ತೂರಿ, ಸುವರ್ಣ ಹಾಗೂ ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ ವಿಚಾರಗಳನ್ನು ಪ್ರಸಾರ ಮಾಡಲೆಂದೆ ಸಿರಿನಾಡು ಕನ್ನಡ ಚಾನಲ್ ಇತ್ತೀಚಿಗೆ ಬಂದಿದೆ.

ಉದಯ ಟಿ.ವಿ.ಯಲ್ಲಿ ಕನ್ನಡ ಕಾದಂಬರಿ ಆಧಾರಿತ ಸಿನಿಮಾಗಳನ್ನು ಪ್ರದರ್ಶಿಸಲಾಗುತ್ತದೆ. ಉದಯ ಮ್ಯೂಜಿಕ್‌ನಲ್ಲಿ ಕನ್ನಡ ಗೀತೆಗಳನ್ನು ಪ್ರಸಾರ ಮಾಡಲಾಗುತ್ತದೆ. ಈ.ಟಿ.ವಿ.ಯಲ್ಲಿ ರಾಧಾ ಬದುಕು, ಬೃಂದಾದನ, ಹೆಳವನಕಟ್ಟಿ ಗಿರಿಯಮ್ಮ, ಸುಪ್ರಭಾತ, ಧಾರವಾಹಿ, ಬಿತ್ತರಿಸುತ್ತದೆ. 'ಎದೆ ತುಂಬಿ ಹಡುವೆನು' ಕವಿನಮನ, ಮುಕ್ತ ಮುಕ್ತ, ಬಂದೇ ಬರತಾವ ಕಾಲ ಕನ್ನಡನಾಡಿ, ಯುವಭಾರತ, ಮುಂತಾದ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತವೆ. ಝೀ ಕನ್ನಡ ಚಾನಲ್‌ನಲ್ಲಿ ಕನ್ನಡ ಕಾರ್ಯಕ್ರಮಗಳು ಪ್ರಸಾರವಾಗುತ್ತಿದ್ದು ಅದರಲ್ಲಿ 'ಸರಿಗಮಪ' ಎಂಬ ಹೊಸ ಕಾರ್ಯಕ್ರಮದಿಂದ ನಾಡಿನ ಜನತೆಗೆ 'ಕನ್ನಡ ಗೀತೆಗಳ' ರಸಸ್ವಾದವನ್ನು ಉಣಬಡಿಸುತ್ತಿದೆ. ಇಲ್ಲಿ ಹಲವು ಬಗೆಯ ಗೀತೆಗಳು ಜನಪದ, ತತ್ವಪದ, ಚಿತ್ರಗೀತೆ, ಭಕ್ತಿಗೀತೆ, ದಾಸರಪದ, ಮುಂತಾದ ಗೀತೆಗಳು ಕಾರ್ಯಕ್ರಮದಲ್ಲಿ ಭಾಗವಹಿಸಲು ಬಂದ ಅಭ್ಯರ್ಥಿಗಳಿಂದ ಪ್ರೇಕ್ಷಕರಿಗೆ ಮನಮುಟ್ಟುತ್ತವೆ. ಅಷ್ಟೇ ಅಲ್ಲದೆ ಅನೇಕ ಪ್ರತಿಭೆಗಳನ್ನು ಬೆಳಕಿಗೆ ತರಲಾಗಿದೆ. ಈ ಪ್ರತಿಭೆಗಳಲ್ಲಿ ಕಿರಿಯರು ವಯಸ್ಕರು ಕೂಡ ಇದ್ದು ಅದರಲ್ಲೂ ಅಕ್ಷರಜ್ಞಾನವಿಲ್ಲದ ಅಂದರೆ ಔಪಚಾರಿಕವಾಗಿ ಶಿಕ್ಷಣ ಪಡೆಯದ ಹಾಗೂ ಉತ್ತಮವಾಗಿ ಹಾಡುಗಳನ್ನು ಹಡುವಂತಹ ಪ್ರತಿಭೆಯನ್ನು ಬೆಳಕಿಗೆ ತಂದು ಪ್ರೋತ್ಸಾಹಿಸುವಂತಹ ಕಾರ್ಯ ಝೀ ಕನ್ನಡ ಚಾನಲ್‌ನಲ್ಲಿ ಆಗುತ್ತಿದೆ. ಇತ್ತೀಚಿಗೆ ಸರಿಗಮಪ ಕಾರ್ಯಕ್ರಮದಲ್ಲಿ ಭಾಗವಹಿಸಿ ತತ್ವಪದ ಮತ್ತು ಜನಪದ ಗೀತೆಯನ್ನು ಹಾಡುವ ಮೂಲಕ ಹೆಸರಾದ ಕುರಿಗಾಹಿ ಹನುಮಂತ ಒಂದು ಉದಾಹರಣೆಯಾಗಿದೆ.

ದೂರದರ್ಶನ ಆರಂಭದಿಂದ ಇಲ್ಲಿಯವರೆಗೆ ಕನ್ನಡ ಭಾಷೆ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಹಲವಾರು ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತ ಬರುತ್ತಿದೆ. ಇಂದಿಗೂ ಸರ್ಕಾರಿ ಚಾನಲ್ ಆದ ಡಿ.ಡಿ.–೯ ಚಂದನದಲ್ಲಿ ಸಾಹಿತ್ಯದ ಹಲವು ಪ್ರಕಾರಗಳಲ್ಲಿನ ವಿಷಯವನ್ನು ಆಯ್ಕೆಮಾಡಿಕೊಂಡು ಪ್ರಸಾರ ಮಾಡುವುದರ ಮೂಲಕ ಜನರಲ್ಲಿ ಸಾಹಿತ್ಯಾದಾಸಕ್ತಿ ಹೆಚ್ಚಿಸುತ್ತಿದೆ.

ಮನರಂಜನೆಯ ಪ್ರಸಾರವೇ ಮುಖ್ಯವಾದರೂ ಟಿ.ವಿ. ವಾಹಿನಿಗಳಿಗೆ ಆದರೂ ನಮ್ಮ ಪ್ರಾಚೀನ ಕನ್ನಡ ಸಾಹಿತ್ಯದ ಕಾವ್ಯ, ನಾಟಕ, ಕಾದಂಬರಿಯಿಂದ ಹಿಡಿದು ಆಧುನಿಕ ಸಾಹಿತ್ಯದ ಪ್ರಕಾರಗಳಾದ ಭಾವಗೀತೆ, ಲಾವಣಿ, ಗೀಗೀಪದ, ಸಣ್ಣಕತೆ ಕಾದಂಬರಿ ನಾಟಕ ಮುಂತಾದವುಗಳಲ್ಲಿನ ವಿಷಯವಸ್ತುವನ್ನು ಆಯ್ಕೆಮಾಡಿಕೊಂಡು ಅದಕ್ಕೆ ರಾಗ, ತಾಳ, ಲಯ ಮುಂತಾದ ಸಂಗೀತದ ಸಂಬಂಧಪಟ್ಟಂತಹ ಅಂಶಗಳನ್ನು ಜೋಡಿಸಿ ನಟನಕಾರರಿಂದ ಒಂದು ವೇದಿಕೆಯಲ್ಲಿ ವಿವಿಧ ರೀತಿಯ ಬೆಳಕಿನ್ನು ಅಳವಡಿಸಿ ಏಕಕಾಲದಲ್ಲಿ ಧ್ವನಿ ಮತ್ತು

ದೃಶ್ಯಗಳ ಮೂಲಕ ಜನರಿಗೆ ವಿವಿಧ ರೀತಿಯಲ್ಲಿ ಕಾರ್ಯಕ್ರಮಗಳು ನೀಡುವಂತಹ ಕೆಲಸ ಸರ್ಕಾರಿ ಚಾನಲ್‌ಗಳಂತೆ ಖಾಸಗಿ ಚಾನಲ್‌ಗಳು ಸಹ ಮಾಡುತ್ತಿವೆ.

ಯಾವುದೇ ಕಾರ್ಯಕ್ರಮ ಮಾಡಬೇಕಾದರೂ ಬಂಡವಾಳವೇ ಮುಖ್ಯವಾಗುತ್ತದೆ. ಆದುದರಿಂದ ಬಂಡವಾಳದ ಕೊರತೆಯು ಸಹ ಸಾಹಿತ್ಯ ಸಂಬಂಧಿ ಕಾರ್ಯಕ್ರಮ ಪ್ರಸಾರ ಹಿನ್ನಡೆಗೆ ಕಾರಣವಾಗುತ್ತದೆ ಎನ್ನಬಹುದು. ಅದಕ್ಕಾಗಿಯೇ ನಮ್ಮ ಸಾಹಿತ್ಯದಲ್ಲಿನ ಹಲವಾರು 'ಮಹಾಕಾವ್ಯಗಳ ಕುರಿತಂತೆ ಇನ್ನೂ ಜನರಿಗೆ ತಿಳಿಸಬೇಕಾಗಿದೆ. ಆದರೆ ಆ ಮಹಾಕಾವ್ಯಗಳನ್ನು ದೃಶ್ಯರೂಪಕ್ಕೆ ತರುವುದು ಕಷ್ಟಸಾಧ್ಯ. ಕಾರಣ ಅದಕ್ಕೆ ತಗಲುವ ವೆಚ್ಚ ತುಂಬಾ ಜಾಸ್ತಿ. ಆದರೂ ಕನ್ನಡಾಭಿವರಾನಿಗಳು, ಕನ್ನಡಪರ ಕೆಲಸ ಮಾಡುವಂತ ಇಚ್ಛೆಯುಳ್ಳಂತಹ ಕಂಪನಿಗಳು, ಶ್ರೀಮಂತರು ಮನರಂಜನೆಯ ಕಾರ್ಯಕ್ರಮಗಳ ಮಧ್ಯೆ, ಸಾಹಿತ್ಯ ಸಂಬಂಧಿಸಿದಂತೆ ಹಲವ ಚಾನಲ್‌ಗಳು ಕೆಲಸ ಮಾಡುತ್ತಿರುವುದು ನಮ್ಮ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಪ್ರೇರಕವಾದ ಅಂಶಗಳಾಗಿವೆ.

ಪಾಶ್ಚಿಮಾತ್ಯರಿಂದ ಬಂದ ಮುದ್ರಣ ತಂತ್ರಜ್ಞಾನ ಭಾರತೀಯ ಸಾಂಸ್ಕೃತಿಕ ವಲಯದಲ್ಲಿ ಹೇಗೆ ಕ್ರಾಂತಿ ಮಾಡಿತೋ ಅದೇ ರೀತಿ ನಮ್ಮ ದೇಶ ಮತ್ತು ನಮ್ಮ ನಾಡಿಗೆ ಬಂದ ರೇಡಿಯೋ ತಂತ್ರಜ್ಞಾನ ಮತ್ತು ದೂರದರ್ಶನ ತಂತ್ರಜ್ಞಾನವು ನಮ್ಮ ಭಾಷೆ, ಸಂಸ್ಕೃತಿ, ಸಾಹಿತ್ಯ ಇವೆಲ್ಲದರ ಮೇಲೆ ಪ್ರಭಾವ ಬೀರಿತು ಎನ್ನಬಹುದು.

**ಕೊನೆ ಟಿಪ್ಪಣಿಗಳು**

೧. ವಿಜಯವಾಣಿ ಚಿಕ್ಕ ದಿನಪತ್ರಿಕೆ, ಪು. ೮, ಜನವರಿ ೧೪, ೨೦೧೯

೨. ಡಾ.ಡಿ.ಎಲ್. ನರಸಿಂಹಾಚಾರ್, ಕನ್ನಡ ಗ್ರಂಥ ಸಂಪಾದನೆ, ಪು. ೨೧೯, ೨೦೧೫

೩. ಡಾ. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರುಣೋದಯ, ಪು. ೩೦, ೨೦೧೭

೪. ಅದೇ, ಪು. ೩೦

೫. ಅದೇ, ಪು. ೮

೬. ಅದೇ, ಪು. ೩೧

೭. ಪ್ರೊ. ಎ.ವಿ. ನಾವಡ, ಎ. ಗ್ರಾಮರ್ ಆಫ್ ಕರ್ನಾಟ ಲಾಂಗ್ವೇಜ್, ಪು. ೧೫, ೨೦೧೭,

೮. ಅದೇ, ಪು. ೩೩

೯. ಡಾ. ಶ್ರೀನಿವಾಸ ಹಾವನೂರ, ಹೊಸನಗನ್ನಡ ಅರುಣೋದಯ, ಪು. ೩೩, ೨೦೧೧

೧೦. ಅದೇ, ಪು. ೩೪

೧೧. ಅದೇ, ಪು. ೩೭

೧೨. ಅದೇ, ಪು. ೪೨

೧೩. ಅದೇ, ಪು. ೪೩

೧೪. ಅದೇ, ಪು. ೧೩೮

೧೫. ಅದೇ, ಪು. ೧೧೯

೧೬. ಅದೇ, ಪು. ೧೨೩

೧೭. ಅದೇ, ಪು. ೧೬೫

೧೮. ಎನ್. ಬಸವಾರಾಧ್ಯ (ಪ್ರಸಂ), ಡಾ. ಗೀತಾಚಾರ್ಯ, ಸಿರಿಕಂಠ, ಪು. xviii, ೨೦೧೩

೧೯. ಅದೇ, ಪು. xix

೨೦. ಅದೇ, ಪು. xx

೨೧. ಅದೇ, ಪು. ೨೦

೨೨. ಅದೇ, ಪು. ೨೨

೨೩. ಉದ್ಧೃತ: ಡಾ. ವೀರೇಶ ಬಡಿಗೇರ

೨೪. ಡಾ. ವಾಸುದೇವ ಶೆಟ್ಟಿ, ಕನ್ನಡ ಸಾಹಿತ್ಯ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ, ಪು. ೩೩, ೨೦೦೨

೨೫. ಅದೇ, ಪು. ೩೩

೨೬. ಅದೇ, ಪು. ೩೭

೨೭. ಅದೇ, ಪು. ೪೦

೨೮. ಅದೇ, ಪು. ೬೧

೨೯. ಅದೇ, ಪು. ೬೧

೩೦. ಅದೇ, ಪು. ೬೬

೩೧. ಅದೇ, ಪು. ೬೬

೩೨. ಅದೇ, ಪು. ೧೧೦

೩೩. ಅದೇ, ಪು. ೧೧೦

೩೪. ಅದೇ, ಪು. ೨೨೫

೩೫. ಅದೇ, ಪು. ೨೨೭

೩೬. ಅದೇ, ಪು. ೨೨೭

೩೭. ಡಾ. ಮೈ.ಸಿ. ಪಾಟೀಲ್, ಇ-ಮಾಧ್ಯಮ ಮತ್ತು ಕನ್ನಡ ಸಾಹಿತ್ಯ, ಪು. ೨೫, ೨೦೦೯

೩೮. ಅದೇ, ಪು. ೨೫

೩೯. ಅದೇ, ಪು. ೩೬

೪೦. ಅದೇ, ಪು. ೩೭

೪೧. ಅದೇ, ಪು. ೪೬

೪೨. ಅದೇ, ಪು. ೫೫

೪೩. ಅದೇ, ಪು. ೩೮

೪೪. ಅದೇ, ಪು. ೨೧೮

೪೫. ಅದೇ, ಪು. ೨೧೯

೪೬. ಅದೇ, ಪು. ೨೨೦

೪೭. ಅದೇ, ಪು. ೨೨೦

೪೮. ಅದೇ, ಪು. ೨೪೩

೪೯. ಅದೇ, ಪು. ೨೧೨

೫೦. ಅದೇ, ಪು. ೨೧೨

೫೧. ಅದೇ, ಪು. ೨೧೩

೫೨. ಅದೇ, ಪು. ೨೧೪

೫೩. ಅದೇ, ಪು. ೨೧೭

೫೪. ಟಿ.ಸಿ. ಪೂರ್ಣಿಮಾ, ಸಮೂಹ ಮಾಧ್ಯಮ ಮತ್ತು ಕನ್ನಡ ಅಭಿವೃದ್ಧಿ, ಪು. ೧೩೦, ೨೦೦೧

೫೫. ಡಾ. ಮೈ.ಸಿ. ಪಾಟೀಲ, ಇ-ಮಾಧ್ಯಮ ಮತ್ತು ಕನ್ನಡ ಸಾಹಿತ್ಯ, ಪು. ೬೫, ೨೦೦೯

೫೬. ಅದೇ, ಪು. ೭೦

೫೭. ಟಿ.ಸಿ. ಪೂರ್ಣಿಮಾ, ಸಮೂಹ ಮಾಧ್ಯಮ ಮತ್ತು ಕನ್ನಡ ಅಭಿವೃದ್ಧಿ, ಪು. ೯೫, ೨೦೦೧

೫೮. ಅದೇ, ಪು. ೯೫

೫೯. ಡಾ. ಮೈ.ಸಿ. ಪಾಟೀಲ, ಇ-ಮಾಧ್ಯಮ ಮತ್ತು ಕನ್ನಡ ಸಾಹಿತ್ಯ, ಪು. ೨೮೪, ೨೦೦೯

೬೦. ಅದೇ, ಪು. ೨೪೨

೬೧. ಅದೇ, ಪು. ೨೪೪

೬೨. ಅದೇ, ಪು. ೨೨೧

೬೩. ಅದೇ, ಪು. ೨೨೯

೬೪. ಅದೇ, ಪು. ೨೩೦

## ಅಧ್ಯಾಯ: ಐದು

# ಕನ್ನಡ ಸಾಹಿತ್ಯದ ಬೆಳವಣಿಗೆ: ಗಣಕಯಂತ್ರ ಮತ್ತು ತಂತ್ರಾಂಶದ ಪರಿಕಲ್ಪನೆ

## ಅಧ್ಯಾಯ: ಐದು

# ಕನ್ನಡ ಸಾಹಿತ್ಯದ ಬೆಳವಣಿಗೆ: ಗಣಕಯಂತ್ರ ಮತ್ತು ತಂತ್ರಾಂಶದ ಪರಿಕಲ್ಪನೆ

ಲಿಪಿ ಬರವಣಿಗೆ ಮತ್ತು ಅದರ ಸಂಗ್ರಹ ಪ್ರಸರಣದ ಬಗ್ಗೆ ಒಂದು ಪಾವಿತ್ರ್ಯ ಕಲ್ಪನೆ ಭಾರತೀಯರಿಗಿತ್ತು. ಅದು ಅವಿನಾಶಿಯೂ, ಆರ್ಷೇಯವೂ ಆದದ್ದು ಎನ್ನುವ ನಂಬಿಕೆಯೊಂದಾದರೆ, ಅಧಿಕಾರದ ಸಂಬಂಧದಲ್ಲಿ ಅದು ಮಾಡಿದ ಹಾವಳಿ ಮತ್ತೊಂದು ಬಗೆಯದು. ಇದರಾಚೆ ಅನುಭಾವಿಕ ಜಗತ್ತು ಲಿಪಿ ಮತ್ತು ಮಾತನ್ನು ಬೇರೆ ಎಂದು ಬಗೆಯದೆ ಅವೆರಡನ್ನು ಸಮನ್ವಯಗೊಳಿಸಿ ಹೊಸ ಮನ್ವಂತರಕ್ಕೆ ಕಾರಣವಾಯಿತು. ಯಾವ ಮಾಧ್ಯಮದಲ್ಲಿ ಸಾಹಿತ್ಯ ಅಥವಾ ಬರಹ ಸಂಗ್ರಹವಾಗಿರುತ್ತದೋ ಆ ಮಾಧ್ಯಮ ಸ್ಥಿರತೆ ಮತ್ತು ಬರಹದ ಪ್ರಸಾರದ ನಡುವೆ ವಿಲೋಮ ಸಂದರ್ಭವಿರುತ್ತದೆ. ಹೆಚ್ಚು ಸ್ಥಿರವಾದ ಮಾಧ್ಯಮವಿದ್ದರೆ ಬರಹದ ತಾಳಿಕೆ ಹೆಚ್ಚು ಎನ್ನುವ ನಂಬಿಕೆಯಿದೆ. ಆದರೆ ಇಂಥದರ ಪ್ರಸಾರ ಬಹು ಕಡಿಮೆ ಇರುತ್ತದೆ. ಪ್ರಸಾರ ಹೆಚ್ಚಿದಷ್ಟು ಮಾಧ್ಯಮದ ತಾಳಿಕೆಯ ಗುಣ ಕಡಿಮೆಯಾಗುತ್ತದೆ. ಭಾರವಾದ ಶಿಲೆ, ಲೋಹಗಳಿಂದ ಹಿಡಿದು ತಾಳೆಗರಿ, ಕಾಗದ ನಂತರ ಗಣಕಯಂತ್ರ, ಫ್ಲಾಪಿ, ಸಿಡಿ, ಪೆನ್‌ಡ್ರೈವ್, ಈ–ಅಂಚೆ ಇವೆಲ್ಲ ಸಾವಿರಾರು ಪುಟದ ಜ್ಞಾನವನ್ನು ಸಂಗ್ರಹವಾಗಿಟ್ಟುಕೊಳ್ಳುವ ಸಾಮರ್ಥ್ಯವನ್ನು ಪಡೆದಿದ್ದವು. ಅತ್ಯಧಿಕವಾಗಿ ಕಾಲ ದೇಶಗಳ ಗಡಿಗಳನ್ನು ಮೀರಿ ಕ್ಷಣಾರ್ಧದಲ್ಲಿ ತಲುಪುವ ವಾಹಕಗಳು ಇಂದು ನಮ್ಮ ನಡುವೆ ಇವೆ. ಇವೆಲ್ಲ ಬಹು ಪ್ರತಿಯಲ್ಲಿ ಸಿಗುವುದರಿಂದ ತಜ್ಞತೆ ಎನ್ನುವುದು ಒಬ್ಬನಿಂದ ಬೇರ್ಪಟ್ಟು ಸಾಮುದಾಯಿಕವಾಗುತ್ತಿದೆ. ಅದೇ ಹೊತ್ತಿಗೆ ಈ ಎಲ್ಲ ತಾಂತ್ರಿಕ ಸಂಗತಿಗಳಿಂದು ಎಷ್ಟೇ ಸಾಮರ್ಥ್ಯ ಹೊಂದಿದ್ದರೂ ಲಿಖಿತವಾದದ್ದು ಮಾತ್ರ ಶಾಶ್ವತವಾದದ್ದು ಎನ್ನುವ ನಂಬಿಕೆಯನ್ನು ಮೀರಿ ಡಿಜಿಟಲ್ ರೂಪವು ಶಾಶ್ವತವಲ್ಲ. ಯಾವಾಗಬೇಕಾದರೂ ಮಾಹಿತಿ ನಾಶವಾಗಬಹುದಾದ ಸಂದರ್ಭಕ್ಕೆ ನಾವು ಬಂದು ಮುಟ್ಟಿದ್ದೇವೆ.

ಕಂಪ್ಯೂಟರ್ ಆಗಮನವು ಕೈ ಬರಹ ಪ್ರಧಾನವಾದ ಹಸ್ತಪ್ರತಿಗಳಂತಹ ಅಥವಾ ಪ್ರಕಟಿತ ಕೃತಿಗಳನ್ನು ಸರಾಗವಾಗಿ ಓದುವ ಮತ್ತು ತಿಳಿಯುವ ಅವಕಾಶವನ್ನು ತೆರೆದಿದ್ದು ನಿಜ. ನೇರವಾಗಿ ಕೂಡ ಪರದೆಯ ಮೇಲೆ ಸಾಹಿತ್ಯದ ಚಟುವಟಿಕೆಗಳನ್ನು ಆಗು ಮಾಡಿಕೊಳ್ಳುವ

ಸಂದರ್ಭದಲ್ಲಿ ನಾವಿದ್ದೇವೆ. ಭೂತಾಕಾರದ ಗಣಕಯಂತ್ರದಿಂದ ಆರಂಭದ ಜ್ಞಾನಯಾತ್ರೆ ಹಗುರವಾದ ಅಂಗೈಯಲ್ಲಿ ಹಿಡಿದು ಜಗತ್ತನ್ನೇ ಅರಿಯಬಹುದಾದ ಅರಿವಿನ ಯಾತ್ರೆಯಲ್ಲಿ ನಾವಿದ್ದೇವೆ. ಕೈಗೆ ಮಸಿ ಅಂಟದ, ಅಕ್ಷರ ಚಿತ್‌ಕಾಟ್ ಆಗದ ವಿಳಂಬವಿಲ್ಲದೆ, ಹೊಸ ಹೊಸ ವಿನ್ಯಾಸದಲ್ಲಿ ಬರೆದುಕೊಳ್ಳಬಹುದು.

ಮುದ್ರಣಯಂತ್ರ, ಟೈಪ್‌ರೈಟಿಂಗ್, ಮೈಕ್ರೋಫಿಲಂಗಳ ಆವಿಷ್ಕಾರ, ಗಣಕಯಂತ್ರ, ವಿವಿಧ ನಮೂನೆ ತಂತ್ರಾಂಶಗಳು ಅಕ್ಷರ ಯೋಜನೆ ಮತ್ತು ಅದನ್ನು ಗ್ರಹಿಸುವ ವಿಧಾನದಲ್ಲಿಯೇ ಬದಲಾವಣೆ ತಂದಿವೆ. ಓದುವ, ಬರೆಯುವ, ಗ್ರಹಿಸುವ ಕ್ರಿಯೆಗಳನ್ನು ಸರಳಗೊಳಿಸಿವೆ. ಅದೇ ರೀತಿ ಕನ್ನಡ ಅಕ್ಷರ ಜಗತ್ತನ್ನು ವಿಸ್ತಾರಗೊಳಿಸುವಲ್ಲಿ ಸೂಕ್ಷ್ಮಗೊಳಿಸುವಲ್ಲಿಯೂ ಮಹತ್ವದ ಪಾತ್ರ ವಹಿಸಿದ್ದನ್ನು ಕಂಡುಕೊಳ್ಳುವುದು ಈ ಅಧ್ಯಾಯದ ಉದ್ದೇಶವಾಗಿದೆ.

ಗಣಕಯಂತ್ರಕ್ಕಿಂತ ಮೊದಲು ಬಂದ ತಾಂತ್ರಿಕ ಉಪಕರಣವೆಂದರೆ ಬೆರಳಚ್ಚು ಯಂತ್ರ. "ಈ ಬೆರಳಚ್ಚು ಯಂತ್ರ ಅಕ್ಷರಗಳನ್ನು ಬರೆಯುವುದರ ಬದಲಾಗಿ ಮೂಡಿಸಬಲ್ಲಂತಹ ತಾಂತ್ರಿಕ ಆವಿಷ್ಕಾರ. ಇದರಿಂದ ಬರಹದ ಕುರಿತಾದ ಭಾಷಾ ತಾಂತ್ರಿಕತೆ ಮತ್ತಷ್ಟು ಸುಧಾರಣೆ ಆಯಿತು. ಈ ಬೆರಳಚ್ಚು ಯಂತ್ರಗಳಲ್ಲಿ ಹಲವು ರೀತಿಯ ಬೆರಳಚ್ಚು ಯಂತ್ರಗಳು ಬಂದವು. ನಂತರ ವಿದ್ಯುಚ್ಚಾಲಿತ ಬೆರಳಚ್ಚು ಯಂತ್ರ ಬಂದು ಅಕ್ಷರ ಮೂಡಿಸುವುದರ ಜೊತೆಗೆ ಅದರ ಮುದ್ರಣ ಪಡೆಯಬಹುದಾದ ಸಾಧ್ಯತೆಗಳು ತೆರೆದುಕೊಂಡವು. ಮುದ್ರಣದಂತೆಯೇ ಎರಡು ಭಾಗದಲ್ಲಿ ನಿರ್ದಿಷ್ಟ ಮಾರ್ಜಿನ್, ಫಾಂಟ್‌ಗಳನ್ನು ಹೊಂದಿತ್ತು." ಬೆರಳಚ್ಚು ಯಂತ್ರದಲ್ಲಿ ಒಮ್ಮೆಗೆ ಮೂರು ನಾಲ್ಕು ಪ್ರತಿಗಳನ್ನು ಮಾತ್ರ ತೆಗೆಯಬಹುದಿತ್ತು.

ಬರಹಕ್ಕೆ ಸಂಬಂಧಿಸಿದ ತಾಂತ್ರಿಕತೆ ಒಂದು ಕಡೆ ಸಾಗುತ್ತಿದ್ದರೆ, ಮತ್ತೊಂದೆಡೆ ಧ್ವನಿಯ ಉತ್ಪಾದನೆಯ ಸ್ವರೂಪವನ್ನು ಧ್ವನಿ ರಚನೆಯನ್ನು ತಿಳಿಯಲು ಭಾಷಾ ಪ್ರಯೋಗ ಶಾಲೆಗಳು ರೂಢಿಗೆ ಬಂದವು. ಇವು ಮುಖ್ಯವಾಗಿ ಧ್ವನಿ ವಿಶ್ಲೇಷಣೆ ಹಾಗೂ ಬೋಧನೆಗೆ ನೆರವಾದವು. ಧ್ವನಿ ವಿಶ್ಲೇಷಣೆಗೆ ಸಂಬಂಧಿಸಿದಂತೆ, ಧ್ವನಿಯ ಉತ್ಪಾದನೆಯ ಸ್ವರೂಪವನ್ನು ತಿಳಿಯಲು ಆಸಿಲೋಸ್ಕೋಪ್ ಮತ್ತು ಸ್ಪೆಕ್ಟ್ರೋಗ್ರಾಮ್ ಎಂಬ ಎರಡು ಯಂತ್ರಗಳು ಬಂದವು.

ಮಾಹಿತಿ ಸಂಗ್ರಹ ಹಾಗೂ ದಾಖಲೀಕರಣ ಪ್ರಕ್ರಿಯೆಯಲ್ಲಿ ಮತ್ತೊಂದು ಮಜವೆಂದರೆ ಟೇಪ್ ರೆಕಾರ್ಡರ್, ಮೈಕ್ರೋಫಿಲಂ, ಮೈಕ್ರೋಪಿಶ್ ಯಂತ್ರಗಳು. ಟೇಪ್‌ರೆಕಾರ್ಡರ್‌ಗಳು ಯಾವುದೇ ಧ್ವನಿಯನ್ನು ದಾಖಲಿಸಿಕೊಳ್ಳಬಹುದಾದ ಸಾಧನವಾಗಿವೆ. ಮಾಹಿತಿ ಸಂಗ್ರಹಕ್ಕೆ ಅಗತ್ಯವಾದ ಉಪಕರಣವಾಗಿದೆ. ಈ ಟೇಪ್‌ರೆಕಾರ್ಡರ್ ಯಾವುದೇ ಒಂದು ಧ್ವನಿ ಅಥವಾ ಶಬ್ಧ ಸಂಬಂಧಿ ಮಾಹಿತಿಯನ್ನು ಮತ್ತೆ ಮತ್ತೆ ಕೇಳಬಹುದಾದ ಸೌಲಭ್ಯವಿರುವುದರಿಂದ ಮಾಹಿತಿ ವಿಶ್ಲೇಷಣೆಗೆ ಸಹಕಾರಿಯಾಗಿದೆ. ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಯಾವುದೇ ಹಸ್ತಪ್ರತಿ ಆಕರ ಗ್ರಂಥಗಳನ್ನು ಮತ್ತು ಇತರೆ ಮಾಹಿತಿಗಳನ್ನು ಫೋಟೋ ತೆಗೆದು ಮೈಕ್ರೋ ಫಿಲಂಗಳ

ರೂಪದಲ್ಲಿಡಬಹುದಾಗಿದೆ. ಅಂತೆಯೇ ಮೈಕ್ರೋಫಿಶ್ ಕಾರ್ಡುಗಳ ಮೇಲೆ ಅನೇಕ ಪುಟಗಳನ್ನು ದಾಖಲಿಸಿಡಬಹುದಾಗಿದೆ. ಈ ಮೂರು ಸಲಕರಣೆಗಳು ಸಾಹಿತ್ಯಾಧ್ಯಯನದ ಸಲಕರಣೆಯಾಗಿವೆ. ಭಾಷೆ ಮತ್ತು ಸಾಹಿತ್ಯದ ಸಂಬಂಧಿಸಿದಂತೆ ಕೃತಿ ರಚನೆಗೆ ಸಂಬಂಧಿಸಿದಂತೆ ೧೮ನೇ ಶತಮಾನದವರೆಗೂ ಒಂದು ರೀತಿಯ ತಂತ್ರಜ್ಞಾನ ಬಳಕೆಯಾದರೆ ಹತ್ತೊಂಬತ್ತನೆಯ ಶತಮಾನದಲ್ಲಿ ಒಂದು ಬಗೆಯಾಯಿತು. ಹಾಗೆಯೇ ಮುಂದುವರೆದು ೨೦ನೇ ಶತಮಾನದಲ್ಲಿ ವಿದ್ಯುನ್ಮಾನ ತಾಂತ್ರಿಕತೆಯ ಆವಿಷ್ಕಾರ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಮತ್ತೊಂದು ತಿರುವು ನೀಡಿತು.

ಶ್ರವ್ಯ ಮಾಧ್ಯಮವಾದ ರೇಡಿಯೋ ನಂತರ ದೃಶ್ಯ ಹಾಗೂ ಶ್ರವ್ಯ ಮಾಧ್ಯಮವನ್ನೊಳಗೊಂಡ ದೂರದರ್ಶನ ಕನ್ನಡ ಭಾಷೆಯಲ್ಲಿಯೇ ಹಲವು ವಿಷಯಕ್ಕೆ ಸಂಬಂಧಿಸಿದಂತೆ ವಿಚಾರಗಳನ್ನು ಬಿತ್ತರಿಸುವ ಮೂಲಕ ಜನಮನದಲ್ಲಿ ಭಾಷಾಭಿಮಾನ ಮೂಡಿಸಿದವು. ಅದರಂತೆ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಸಾಹಿತ್ಯದ ಪ್ರಕಾರಗಳಲ್ಲಿ ಕಾರ್ಯಕ್ರಮ ನೀಡುವುದರ ಮೂಲಕ ಜನಮನಕ್ಕೆ ಸಾಹಿತ್ಯದ ಜೇನಹನಿಯನ್ನು ಉಣಬಡಿಸಿ ಆ ಮೂಲಕ ಸಾಹಿತ್ಯ ಬೆಳವಣಿಗೆಗೆ ನಾಂದಿ ಹಾಡಿದವು.

ರೇಡಿಯೋ, ದೂರದರ್ಶನದ ನಂತರ ಭಾಷೆ ಮತ್ತು ಸಾಹಿತ್ಯದ ಅಧ್ಯಯನ ಮತ್ತು ಪ್ರಸರಣ ಕಾರ್ಯದಲ್ಲಿ ಬಳಕೆಯಾದ ತಂತ್ರಜ್ಞಾನವೆಂದರೆ ಕಂಪ್ಯೂಟರ್. ಈ ಕಂಪ್ಯೂಟರ್ ತಂತ್ರಜ್ಞಾನವು ಇದಕ್ಕೂ ಮುನ್ನ ಸಾಂಪ್ರದಾಯಿಕವಾಗಿ ಬಳಸಲಾಗಿದ್ದ ಎಲ್ಲಾ ಬಗೆಯ ತಂತ್ರ, ಬಳಕೆ, ರೀತಿ ಇತ್ಯಾದಿಗಳನ್ನು ಮೀರಿ ಉನ್ನತ ತಂತ್ರಜ್ಞಾನ ಎಂದೆನಿಸಿಕೊಂಡಿದೆ. ವಿವಿಧ ರೀತಿಯ ಅಧ್ಯಯನಕ್ಕೆಂದೆ ರೂಪಿಸಲಾದ ತಂತ್ರಾಂಶಗಳ ನೆರವಿನಿಂದ ಅಧ್ಯಯನ ಕೈಗೊಂಡು ನಿಖರವಾದ ಫಲಿತಾಂಶವನ್ನು ಪಡೆಯಲು ಸಹಕಾರಿಯಾಗಿದೆ. ಸಾಹಿತ್ಯಾಧ್ಯಯನದಲ್ಲಿ ಕಂಪ್ಯೂಟರ್ ಬಳಕೆಯ ನಂತರ ಸಹಾಯಕವಾದ ಮುಖ್ಯ ಅಂಶಗಳೆಂದರೆ ವೇಗ ಮತ್ತು ಒಮ್ಮೆಗೆ ಹಲವು ಅಂಶಗಳನ್ನು ಸಂಸ್ಕರಿಸಬಹುದಾದ ಅನುಕೂಲ. ಒಂದೇ ಅಂಶವನ್ನು ಅವಶ್ಯಕತೆಗೆ ಅನುಗುಣವಾಗಿ ವಿವಿಧ ರೀತಿಯ ವಿಶ್ಲೇಷಣೆಗೆ ಒಳಗು ಮಾಡಿ ಫಲಿತಾಂಶವನ್ನು ಪಡೆಯಲು ಸೌಲಭ್ಯವಿರುವ ಈ ತಂತ್ರಜ್ಞಾನದ ಮೂಲಕ ಭಾಷೆಗೆ ಸಂಬಂಧಿಸಿದ ಅಧ್ಯಯನಗಳು ನಡೆಯುತ್ತಿದ್ದು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಲು ಕಂಪ್ಯೂಟರಿನಲ್ಲಿ ತಂತ್ರಾಂಶಗಳನ್ನು ರೂಪಿಸಿ ಅವುಗಳನ್ನು ಅನುಷ್ಠಾನಗೊಳಿಸಲಾಗಿದೆ. ಈ ತಂತ್ರಾಂಶದ ಅರ್ಥಸ್ವರೂಪ ಮತ್ತು ಅವುಗಳ ಕಾರ್ಯ ಹಾಗೂ ಅವುಗಳ ವಿಶಿಷ್ಟತೆಯನ್ನು ಅಧ್ಯಯನ ಮಾಡಲಾಗಿದೆ.

### ೫.೧. ಗಣಕ ಯಂತ್ರ

'ಕಂಪ್ಯೂಟರ್'ನ್ನು ಗಣಕಯಂತ್ರ ಎಂದು ಕರೆಯುತ್ತೇವೆ. ಗಣಕಯಂತ್ರವನ್ನು ಸಾಮಾನ್ಯವಾಗಿ ನಾವು ವಿದ್ಯುನ್ಮಾನ ಉಪಕರಣ ಅಥವಾ ಲೆಕ್ಕಾಚಾರ ಮಾಡುವ ಯಂತ್ರ ಎಂದು ಕರೆಯಬಹುದು.

ಈ Computer ಎಂಬ ಪದವು Compute ಎಂಬ ಪದದಿಂದ ಬಂದಿದೆ. ಇದರ ಅರ್ಥ ಲೆಕ್ಕಾಚಾರ ಮಾಡುವುದು ಎಂದಾಗುತ್ತದೆ. ಅಂದರೆ ಲೆಕ್ಕಾಚಾರ ಮಾಡುವ ಒಂದು ವಿದ್ಯುನ್ಮಾನ ಯಂತ್ರಕ್ಕೆ ಕಂಪ್ಯೂಟರ್ ಎಂದು ಕರೆಯಬಹುದು.

ವ್ಯಾಖ್ಯೆ: Computer is a divice which performs the arithmetic and Logical operations.

ಗಣಕಯಂತ್ರ ಎಂದರೆ ಸಂಚಯಿತ ಕಾರ್ಯಕ್ರಮದ ನಿಯಂತ್ರಣಕ್ಕೊಳಪಟ್ಟು ನಿಯೋಜಿತ ಕ್ರಮದಲ್ಲಿ ದತ್ತಾಂಶಗಳನ್ನು ಸಂಸ್ಕರಿಸಿ ನಿರ್ದಿಷ್ಟ ಮಾಹಿತಿಯನ್ನು ಒದಗಿಸಬಲ್ಲ ಒಂದು ವಿದ್ಯುನ್ಮಾನ ಯಂತ್ರ[೧] ಚಾರ್ಲ್ಸ್ ಬ್ಯಾಬೇಜ್‌ನು ೧೮೩೪ರಲ್ಲಿಯೇ ಪ್ರೋಗ್ರಾಂ ಮಾಡಬಲ್ಲ ಕಂಪ್ಯೂಟರ್ ಅಭಿವೃದ್ಧಿಪಡಿಸಿದರು. ಆದ್ದರಿಂದ ಇವರನ್ನು ಕಂಪ್ಯೂಟರ್ ಲೋಕದ ಪಿತಾಮಹನೆಂದು ಕರೆಯುತ್ತಾರೆ. ಈ ಕಂಪ್ಯೂಟರ್ ೫ ಹಂತಗಳಲ್ಲಿ ಬೆಳೆದುಬಂತು. ತಾಂತ್ರಿಕ ಕ್ಷೇತ್ರ, ವೈಜ್ಞಾನಿಕ ಕ್ಷೇತ್ರ, ಸಾರಿಗೆ ಕ್ಷೇತ್ರ, ವೈದ್ಯಕೀಯ ಕ್ಷೇತ್ರ ಮತ್ತು ಬಾಹ್ಯಾಕಾಶ ಕ್ಷೇತ್ರದಲ್ಲಿ ಮಹತ್ವಪೂರ್ಣವಾದ ಸಂಪನ್ಮೂಲ ವಿದ್ಯುನ್ಮಾನ ಸಾಧನವಾಗಿದೆ. ಇವುಗಳಲ್ಲದೆ ವಾಣಿಜ್ಯ ಬ್ಯಾಂಕ್, ತೆರಿಗೆ ಇಲಾಖೆ, ಅಂಚೆ, ಜೀವವಿಮಾ ನಿಗಮ, ಸಮೂಹ ಸಂವಹನ ಸೇನಾಪಡೆ, ವಾಣಿಜ್ಯ ಮಳಿಗೆಗಳು, ಹವಾಮಾನ ಮುನ್ಸೂಚನಾ ಕೇಂದ್ರ, ಕೃತಕ ಉಪಗ್ರಹ ನಿಯಂತ್ರಣ ಕೇಂದ್ರ, ಹೋಟೆಲ್‌ಗಳು ಹಾಗೂ ಕ್ರೀಡಾಂಗಣಗಳಲ್ಲಿ ಕೂಡ ಗಣಕಯಂತ್ರ ತನ್ನ ಬಹುಮುಖ ಸಾಮರ್ಥ್ಯವನ್ನು ಸಾಬೀತುಮಾಡಿದೆ.

'ಅಬಾಕಸ್'ನಿಂದ ಆರಂಭವಾದ ಗಣಕಯಂತ್ರ ಇಂದಿನ ಡಿಜಿಟಲ್ ಕಂಪ್ಯೂಟರ್‌ವರೆಗೆ ಹಲವು ಅವಸ್ಥಾಂತರದೊಳಗೆ ಬೆಳೆದುಬಂದಿದೆ. ೧೮೩೪ರ ಹೊತ್ತಿನಲ್ಲಿ 'ಚಾರ್ಲ್ಸ್ ಬ್ಯಾಬೇಜ್' ಮತ್ತೊಂದು ಹೊಸ ಯಂತ್ರವನ್ನು ವಿನ್ಯಾಸ ಗೊಳಿಸಿದ. ಇದೇ ಮೊಟ್ಟ ಮೊದಲ ಡಿಜಿಟಲ್ ಕಂಪ್ಯೂಟರ್ ಎನ್ನುವ ಖ್ಯಾತಿಗೆ ಪಾತ್ರವಾಯಿತು. ಕಂಪ್ಯೂಟರ್ ಕಾರ್ಯ ನಿರ್ವಹಿಸಲು ಅದಕ್ಕೊಂದು ಭಾಷೆ ಅತ್ಯಗತ್ಯವಾಗಿತ್ತು. ಕಂಪ್ಯೂಟರ್ ರೂಪಿಸಿದ ಪ್ರಾರಂಭದ ದಿನದಲ್ಲಿಯೇ ಆಂಗ್ಲ ಭಾಷೆಯನ್ನು ಅಂದರೆ ಇಂಗ್ಲಿಷ್ ಭಾಷೆಯನ್ನು ಈ ಯಂತ್ರದ ಕಾರ್ಯವಿಧಿ ಅಳವಡಿಸಿದರು. ಇದರಿಂದ ಆಂಗ್ಲ ಭಾಷೆಯನ್ನು ಕಲಿತಿದ್ದ ಅನೇಕ ರಾಷ್ಟ್ರದ ಜನರಿಗೆ ಉಪಯೋಗವಾಯಿತು. ಈ ಆಂಗ್ಲ ಭಾಷೆಯು ಕಂಪ್ಯೂಟರ್ ಎಂಬ ಅತ್ಯುನ್ನತ ತಂತ್ರಜ್ಞಾನಕ್ಕೆ ಯಾವಾಗ ಅಳವಡಿಕೆಯಾಯಿತೋ ಆಗಿನಿಂದ ಆಂಗ್ಲ ಭಾಷಾ ವ್ಯಾಮೋಹ ಜಗತ್ತಿನೆಲ್ಲೆಡೆ ಬೆಳೆಯತೊಡಗಿ ಭಾಷಾ ಪೈಪೋಟಿ ಉಂಟಾಗಿ ಪ್ರಪಂಚದಾದ್ಯಂತ ಎಷ್ಟೋ ಭಾಷೆಗಳು ಅಳಿವಿನ ಅಂಚಿನಲ್ಲಿವೆ. ಇಂತಹ ಪ್ರಭಾವ ಹಲವು ಭಾಷೆ, ಸಂಸ್ಕೃತಿಯನ್ನು ಹೊಂದಿರುವಂತಹ ಭಾರತದ ಮೇಲೂ ಬೀರಿದೆ. ಅದಕ್ಕಾಗಿಯೇ ಭಾರತದಲ್ಲಿ ಪ್ರಮುಖವಾಗಿರುವ ೨೨ ಭಾಷೆಗಳು ಸಹ ನಿರ್ದಿಷ್ಟ ಜನಸಮುದಾಯ, ಸಂಸ್ಕೃತಿ, ಪರಂಪರೆಯನ್ನು ಹೊಂದಿವೆ.

ಒಂದು ನಿರ್ದಿಷ್ಟ ಜನಸಮುದಾಯ, ಸಂಸ್ಕೃತಿ, ಪರಂಪರೆಯನ್ನು ಹೊಂದಿರುವ ಭಾಷೆಗಳಲ್ಲಿ ಕನ್ನಡವು ಒಂದು. ಕನ್ನಡ ಭಾಷೆಯು ಸಹ ಇಂಗ್ಲಿಷ್ ಭಾಷೆಯ ಪ್ರಭಾವಕ್ಕೆ ಸಿಲುಕಿರುವುದು ಕೂಡ ಸತ್ಯ ಸಂಗತಿ. ಆದ್ದರಿಂದ ಪ್ರಾದೇಶಿಕ ಭಾಷೆಗಳಾದ ತಮಿಳು, ಮಲೆಯಾಳಿ, ತೆಲುಗು, ಮರಾಠಿ ಮುಂತಾದವು ಕಂಪ್ಯೂಟರ್‌ನಲ್ಲಿ ಅಳವಡಿಕೆಯಾಗಿ ಸಾಕಷ್ಟು ತಂತ್ರಜ್ಞಾನದಲ್ಲಿ ಪ್ರಗತಿ ಸಾಧಿಸಿವೆ. ಅದೇ ರೀತಿ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಕನ್ನಡಕ್ಕೆ ತಂತ್ರಜ್ಞಾನದಲ್ಲಿ ಅಳವಡಿಕೆ ಅತ್ಯಗತ್ಯವಾದುದು ಮುಖ್ಯವಾಗಿದೆ. ಈ ಮುಖ್ಯ ಉದ್ದೇಶದಿಂದ ಕಂಪ್ಯೂಟರಿನಲ್ಲಿ ಕನ್ನಡ ತಂತ್ರಾಂಶಗಳು ಅಳವಡಿಸಬೇಕಾದುದು ಮುಖ್ಯ ಸಂಗತಿಯಾಗಿದೆ. ಆದ್ದರಿಂದ ಕಂಪ್ಯೂಟರಿನಲ್ಲಿ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ತಂತ್ರಾಂಶಗಳನ್ನು ಅಳವಡಿಸಿ ಅನುಷ್ಠಾನ ಮಾಡಲಾಗಿದೆ.

**೫.೨. ಗಣಕ ಯಂತ್ರದ ಯಂತ್ರಾಂಶ ಮತ್ತು ತಂತ್ರಾಂಶಗಳು**

ಕಂಪ್ಯೂಟರ್ ಎಂಬುದು ಒಂದು ಅರ್ಥದಲ್ಲಿ ಒಂದು ಯಂತ್ರ ಅಲ್ಲ. ಯಂತ್ರಗಳ ವ್ಯವಸ್ಥೆಯೇ ಆಗಿದೆ. ಕಂಪ್ಯೂಟರ್ ವ್ಯವಸ್ಥೆ ಒಳಗೊಂಡಿರುವ ಎಲ್ಲಾ ರೀತಿಯ ಭೌತಿಕ/ ಯಾಂತ್ರಿಕ ಸಲಕರಣೆ ಮತ್ತು ಸಾಧನಗಳನ್ನು ಯಂತ್ರಾಂಶ ಎಂಬ ಸಾಮಾನ್ಯ ಪದದಿಂದ ಕರೆಯುತ್ತೇವೆ. ಇವು ಕಣ್ಣಿಗೆ ಕಾಣುವ, ಸ್ಪರ್ಶಿಸಲು ಸಾಧ್ಯವಾಗಿರುವಂತಹವು ಆಗಿರುತ್ತವೆ. ಉದಾಹರಣೆಗೆ ಕಂಪ್ಯೂಟರ್‌ನ ಒಳ ಹಾಗೂ ಹೊರಗೆ ಕಂಡುಬರುವ ಪ್ರೋಸೆಸರ್, ಮದರ್‌ಬೋರ್ಡ್, ಮಾನಿಟರ್ (ದರ್ಶಕ), ಬೆರಳಚ್ಚು ಫಲಕ, ಮೌಸ್, ಮೊಡೆಮ್, ಧ್ವನಿವರ್ಧಕ, ಸಿಡಿ, ಪ್ಲಾಪಿ, ಸ್ಕ್ಯಾನರ್ ಮುಂತಾದವುಗಳು ಕಂಪ್ಯೂಟರ್‌ನ ಯಂತ್ರಾಂಶಗಳೆನಿಸಿಕೊಳ್ಳುತ್ತವೆ. ಈ ಎಲ್ಲಾ ಯಂತ್ರಾಂಶಗಳು ವಿವಿಧ ಆಕಾರ ಗಾತ್ರ ಹೊಂದಿರುವ ಹಾಗೂ ನಿರ್ದಿಷ್ಟ ಕಾರ್ಯ ನಿರ್ವಹಿಸುವ ಸ್ವತಂತ್ರ ಘಟಕಗಳಾಗಿವೆ.

ಕಂಪ್ಯೂಟರ್ ಮೂಲಕ ವಿಶಿಷ್ಟ ಸಮಸ್ಯೆಗಳನ್ನು ಬಗೆಹರಿಸಲು ಅಥವಾ ನಿರ್ದಿಷ್ಟ ಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗುವಂತೆ ಮಾಡುವ ಕ್ರಮಬದ್ಧ ಸೂಚನೆ/ನಿರ್ದೇಶನಗಳ ಗುಂಪಿಗೆ ಪ್ರೋಗ್ರಾಂ (Program) ಎಂದು ಕರೆಯುತ್ತಾರೆ. ಇಂತಹ ಹಲವು ಪ್ರೋಗ್ರಾಂಗಳ ಸಂಗ್ರಹವನ್ನು ತಂತ್ರಾಂಶ (Software) ಎನ್ನುತ್ತಾರೆ.[೨] ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಎಲ್ಲಾ ರೀತಿಯ ಪ್ರೋಗ್ರಾಂಗಳನ್ನು ಪ್ರತಿನಿಧಿಸಲು ಬಳಸುವ ಸಾಮಾನ್ಯ ಪದವೇ ತಂತ್ರಾಂಶ. ಯಂತ್ರಾಂಶಗಳ ಪರಸ್ಪರ ಸಂಯೋಜನೆ ಮತ್ತು ಹೊಂದಾಣಿಕೆಯ ಮೂಲಕ ಕಂಪ್ಯೂಟರ್‌ನ ಕಾರ್ಯನಿರ್ವಹಣೆ ಹಾಗೂ ಸೂಚನೆಗಳಿಗನುಸಾರವಾಗಿ ಕಂಪ್ಯೂಟರ್ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುವಂತೆ ಮಾಡುವುದೇ ತಂತ್ರಾಂಶಗಳ ಮೂಲೋದ್ದೇಶ. ತಂತ್ರಾಂಶಗಳು ಕಣ್ಣಿಗೆ ಗೋಚರಿಸುವ, ಸ್ಪರ್ಶಿಸಲು ಸಾಧ್ಯವಾಗುವಂತಹ ಸಲಕರಣೆಗಳಲ್ಲ. ತಂತ್ರಾಂಶಗಳ ಪರಿಣಾಮ ಮಾತ್ರ ನಮ್ಮ ಅನುಭವಕ್ಕೆ ನಿಲುಕವಂತಹದ್ದು.

ಯಂತ್ರಾಂಶ-ತಂತ್ರಾಂಶಗಳೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ತಂತ್ರಾಂಶವಿಲ್ಲದೆ ಕಂಪ್ಯೂಟರ್ ವ್ಯವಸ್ಥೆಯ ಕಾರ್ಯನಿರ್ವಹಣೆ ಅಸಾಧ್ಯ. ಯಂತ್ರಾಂಶಗಳಿಲ್ಲದೆ ತಂತ್ರಾಂಶಗಳಿಗೆ ಯಾವುದೇ ಮೌಲ್ಯವಿಲ್ಲ. ಇವೆರಡರ ಹೊಂದಾಣಿಕೆ, ಸೇರ್ಪಡೆ, ಸಮ್ಮಿಲನದಿಂದ ಮಾತ್ರ ವಿವಿಧ ರೀತಿಯ ಕಾರ್ಯಾಚರಣೆ ಸಾಧ್ಯ. ಯಂತ್ರಾಂಶ ತಂತ್ರಾಂಶಗಳಿಗೆ ಕೆಲವು ಸಾದೃಶ್ಯ ಒದಗಿಸಬಹುದಾಗಿದೆ. ಟಿ.ವಿ. ಸೆಟ್ ಯಂತ್ರಾಂಶ ಎನಿಸಿಕೊಂಡರೆ ಟಿ.ವಿಯಲ್ಲಿ ಮೂಡಿಬರುವ ಕಾರ್ಯಕ್ರಮಗಳನ್ನು ತಂತ್ರಾಂಶ ಎಂದು ಕರೆಯಬಹುದು. ಧ್ವನಿ ಮುದ್ರಕ ಸಾಧನವನ್ನು (Tape Recorder) ಯಂತ್ರಾಂಶ ಎಂದು ಕರೆದರೆ ಅದರ ಸಹಾಯದಿಂದ ಬಳಸಬಹುದಾದ ಧ್ವನಿಸುರುಳಿಯಲ್ಲಿ ಮುದ್ರಿತವಾಗಿರುವ ಶ್ರವ್ಯಾಂಶಗಳು (ಹಾಡು, ವಾದ್ಯ, ಸಂಗೀತ, ವಿವರಣೆ ಇತ್ಯಾದಿಗಳು) ತಂತ್ರಾಂಶಗಳು ಎನಿಸುತ್ತವೆ.

ತಂತ್ರಾಂಶವನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವರ್ಗೀಕರಿಸಬಹುದಾಗಿದೆ. ಅವುಗಳೆಂದರೆ

೧. ವ್ಯವಸ್ಥೆ ಸಂಬಂಧಿತ ತಂತ್ರಾಂಶಗಳು (System Software)

೨. ಅನ್ವಯ ಸಂಬಂಧಿತ ತಂತ್ರಾಂಶಗಳು (Application Software)[೩]

ಇಲ್ಲಿ ವ್ಯವಸ್ಥೆ ಎಂದರೆ ಕಂಪ್ಯೂಟರ್ ವ್ಯವಸ್ಥೆ ಎಂದರ್ಥ. ಕಂಪ್ಯೂಟರ್‌ನ ಆಂತರಿಕ ವ್ಯವಸ್ಥೆಯ ಕಾರ್ಯನಿರ್ವಹಿಸಲು, ನಿಯಂತ್ರಿಸಲು ಅನೇಕ ಕಾರ್ಯಕ್ರಮಗಳು ಲಭ್ಯವಿದೆ. ಈ ಎಲ್ಲಾ ರೀತಿಯ ಪ್ರೋಗ್ರಾಂಗಳು ವ್ಯವಸ್ಥೆ ಸಂಬಂಧಿತ ತಂತ್ರಾಂಶಗಳ ಗುಂಪಿಗೆ ಸೇರುತ್ತದೆ. ಇವುಗಳೆಲ್ಲವೂ ಕಂಪ್ಯೂಟರ್ ತಯಾರಕರು ಒದಗಿಸಿರುವ (ಬಳಕೆದಾರ ಉಪಯೋಗಿಸಿ ಕೊಳ್ಳಬಹುದಾದ) ಅನೇಕ ತಂತ್ರಾಂಶಗಳೇ ಆಗಿವೆ. ಈ ರೀತಿಯ ತಂತ್ರಾಂಶಗಳಿಗೆ ಉದಾಹರಣೆ ಎಂದರೆ ಕಾರ್ಯಾಚರಣೆ ವ್ಯವಸ್ಥೆ ತಂತ್ರಾಂಶ. ಡಾಸ್, ಯೂನಿಕ್ಸ್, ಡಿ.ಬಿ.ಎಂ.ಎಸ್. ಎಂ.ಎಸ್. ವಿಂಡೋಸ್ ಇತ್ಯಾದಿ. ಮತ್ತೊಂದು ಗುಂಪಿನ ತಂತ್ರಾಂಶಗಳೆಂದರೆ ಕಂಪ್ಯೂಟರ್ ಕಂಪನಿಗಳು ಕಂಪ್ಯೂಟರ್ ತಯಾರಕರು ವಿಶಿಷ್ಟ ಕಾರ್ಯನಿರ್ವಹಿಸಲು ಬಳಕೆದಾರನ ಪ್ರಯೋಜನಕ್ಕಾಗಿ ರೂಪಿಸಿರುವ ಹಲವಾರು ತಂತ್ರಾಂಶಗಳು, ಬೇರೆ ಬೇರೆ ಕ್ಷೇತ್ರಗಳಲ್ಲಿನ ನಿರ್ದಿಷ್ಟ ಕಾರ್ಯಗಳನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಈ ತಂತ್ರಾಂಶಗಳು ಸಹಾಯ ಮಾಡುತ್ತವೆ. ಇವುಗಳು ಕಂಪ್ಯೂಟರ್‌ನ ಆಂತರಿಕ ಕಾರ್ಯ ನಿರ್ವಹಿಸುವುದಿಲ್ಲ. ಇವುಗಳನ್ನು ಅನ್ವಯ ಸಂಬಂಧಿತ ತಂತ್ರಾಂಶಗಳೆಂದು ಕರೆಯುತ್ತಾರೆ. ಇವುಗಳಿಗೆ ಉದಾಹರಣೆ ಎಂದರೆ ಎಂ.ಎಸ್. ವರ್ಡ್, ಎಂ.ಎಸ್. ಎಕ್ಸೆಲ್, ಎಂ.ಎಸ್. ಆಕ್ಸೆಸ್, ಪೇಜ್‌ಮೇಕರ್, ಲೋಟಸ್, ಪೇ-ರೋಲ್, ಇನ್ವಂಟರಿ ಸಾಫ್ಟ್‌ವೇರ್, ಕಂಪ್ಯೂಟರ್ ಏಡೆಡ್ ಡಿಸೈನ್ ಇತ್ಯಾದಿ. ಇವುಗಳನ್ನು ವಿವಿಧ ಕಂಪ್ಯೂಟರ್‌ಗಳಿಗೆ ಅಳವಡಿಸಿ ಬಳಸಿಕೊಳ್ಳುವುದು ಸುಲಭ.

ಗಣಕಯಂತ್ರ ಬಳಸಲು ಇಂಗ್ಲೀಷ್ ಭಾಷೆ ಕಲಿಯಲೇಬೇಕು ಎನ್ನುವ ಅನಿವಾರ್ಯತೆಯನ್ನು ತೊಡೆದುಹಾಕಲು ತಂತ್ರಾಂಶದ ಅನುಷ್ಠಾನ ಮುಖ್ಯವಾಗಿತ್ತು. ಕನ್ನಡ ಟೈಪಿಂಗ್ ಮಾಡಬೇಕಾದರೂ

ಇಂಗ್ಲೀಷ್ ಮೂಲಕವೇ ಬರಬೇಕಾದ ಅನಿವಾರ್ಯತೆ ಇತ್ತು. ಇದಕ್ಕೆ ಸಂಪೂರ್ಣ ಕನ್ನಡ ಗಣಕಯಂತ್ರದ ಕೊರತೆ ಇದ್ದುದೇ ಕಾರಣವಾಗಿತ್ತು. ಈ ಸಮಸ್ಯೆಯನ್ನು ಅರಿತಂತಹ ಅನೇಕ ಭಾಷಾ ವಿದ್ವಾಂಸರು, ಭಾಷಾ ವಿಜ್ಞಾನಿಗಳು, ಭಾಷಾ ಪಂಡಿತರು ಸೇರಿ ಆಲೋಚಿಸಿ ಸುಮಾರು ೨೦೦೦ ವರ್ಷಗಳ ಕಾಲ ಇತಿಹಾಸವಿರುವ ಕನ್ನಡ ಭಾಷೆಯನ್ನು ತಂತ್ರಜ್ಞಾನಕ್ಕೆ ಅಳವಡಿಸುವ ಪ್ರಯತ್ನ ಮಾಡಿ ಕಂಪ್ಯೂಟರ್‌ನಲ್ಲಿ ಕನ್ನಡದಲ್ಲಿಯೇ ಸಂವಹನ ಮಾಡುವಂತಹ ಸಾಫ್ಟ್‌ವೇರ್‌ಗಳನ್ನು ಕಂಡುಹಿಡಿದರು. ಈ ಸಾಫ್ಟ್‌ವೇರ್‌ಗಳಿಂದ ಕನ್ನಡ ಭಾಷೆಯಲ್ಲಿ ದಿನನಿತ್ಯದ ಕಾರ್ಯಚಟುವಟಿಕೆಗೆ ಸಹಾಯವಾಗುವಂತೆ ಹಾಗೂ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಅನುಕೂಲವಾಗುವಂತೆ ಮಾಡಿದುದು ಬಹಳ ಮುಖ್ಯವಾದ ಕಾರ್ಯವಾಗಿದೆ.

**೫.೩. ಕನ್ನಡ ತಂತ್ರಾಂಶಗಳ ಬಗೆಗಳು ಮತ್ತು ವಿಶಿಷ್ಟತೆ**

ಗಣಕದ ಉಪಯೋಗಗಳಲ್ಲಿ ಮಾಹಿತಿ ಸಂಗ್ರಹಣೆ ಮತ್ತು ಪರಿಷ್ಕರಣೆ ಬಹಳ ಮುಖ್ಯವಾದುದು. ಯಾವುದೇ ತರಹದ ಮಾಹಿತಿ ಸಂಗ್ರಹಿಸಲು ನಮಗೆ ಭಾಷೆಯ ಅಗತ್ಯವಿದೆ. ಕೀಲಿಮಣೆಯ ಮೂಲಕ ಬೆರಳಚ್ಚಿಸಿ ಗಣಕಕ್ಕೆ ಮಾಹಿತಿಯನ್ನು ತುಂಬಿಸಲು ಮೊದಲು ಇಂಗ್ಲೀಷ್ ಭಾಷೆಯನ್ನು ಮಾತ್ರ ಸಾಧನ ಎಂದುಕೊಳ್ಳಲಾಗಿತ್ತು. ಆದರೆ ಈಗ ಅನೇಕ ಭಾರತೀಯ ಭಾಷೆಗಳನ್ನು ಗಣಕದಲ್ಲಿ ಬಳಸಲಾಗುತ್ತಿದೆ. ಕೆ.ಪಿ. ರಾವ್‌ರವರು ೧೯೮೮ರಲ್ಲಿ ಕನ್ನಡದಲ್ಲಿ 'ಸೇಡಿಯಾಪು' ಎಂಬ ತಂತ್ರಾಂಶವನ್ನು ನಿರ್ಮಿಸಿದರು. ಮಂಗಳೂರು ಸಮೀಪದ 'ಕಿನ್ನಿಕಂಬಳದ'ವರಾದ ಕೆ.ಪಿ.ರಾವ್‌ರವರು ಕನ್ನಡ ಅಕ್ಷರಗಳನ್ನು ಮೂಡಿಸಲು ಕೀಲಿಮಣೆ ತಯಾರಿಸಿದರು. ಅವರು ತಯಾರಿಸಿದ ಕೀಲಿಮಣೆಯೇ ಕರ್ನಾಟಕದ ಸರ್ಕಾರದ ಅಧಿಕೃತ ಕೀಲಿಮಣೆಯಾಗಿದೆ.

ಗಣಕಗಳಲ್ಲಿ ಕನ್ನಡವನ್ನು ಅಚ್ಚುಕಟ್ಟಾಗಿ ಬಳಸಲು ಸಾಧ್ಯವಾಗುವಂತೆ ತಾಂತ್ರಿಕ ಸೌಲಭ್ಯಗಳನ್ನು ಅಭಿವೃದ್ಧಿಸಿರುವಲ್ಲಿ ಬಳಕೆಗೆ ಸಿದ್ಧವಿರುವ ಕೆಲವೊಂದು ತಂತ್ರಾಂಶಗಳೇ ಸಾಕ್ಷಿಯಾಗಿರುವಂತಹದ್ದು. ಕನ್ನಡದ ಅಕ್ಷರಗಳನ್ನು ಗಣಕದಲ್ಲಿ ಮೂಡಿಸಲು 'ನುಡಿ' 'ಬರಹ' 'ಕುವೆಂಪು' ಇತ್ಯಾದಿ ಹಲವು ಲಿಪಿ ತಂತ್ರಾಂಶಗಳು ಇವೆ.

**ನುಡಿಲಿಪಿ ತಂತ್ರಾಂಶ**

'ನುಡಿ' ತಂತ್ರಾಂಶವನ್ನು ಕನ್ನಡ ಗಣಕ ಪರಿಷತ್ತು (ಕ.ಗ.ಪ.) ೧೯೯೭ನೇ ಇಸವಿಯಿಂದ ಗಣಕಗಳಲ್ಲಿ ಕನ್ನಡದ ಬಳಕೆಯನ್ನು ವ್ಯಾಪಕವಾಗಿ ಅಭಿವೃದ್ಧಿಪಡಿಸಲು ಶ್ರಮಿಸುತ್ತಿದೆ. ಈ ತಂತ್ರಾಂಶವು ಶಿಷ್ಟ ಮತ್ತು ಏಕರೂಪತೆಯನ್ನುಳ್ಳದ್ದಾಗಿದ್ದು ಈ ತಂತ್ರಾಂಶದ ಅಭಿವೃದ್ಧಿಯಿಂದ ಗಣಕಗಳ ಮೂಲಕ ಯಾವುದೇ ಅಡೆತಡೆಗಳಿಲ್ಲದೆ ಕನ್ನಡ ಮಾಹಿತಿಗಳ ಸಂವಹನ ಸಾಧ್ಯವಾಗಿದೆ. ಮತ್ತು ಸರ್ಕಾರ, ಸಂಘ ಸಂಸ್ಥೆಗಳು ಹಾಗೂ ಜನಸಾಮಾನ್ಯರ ನಡುವೆ ಮಾಹಿತಿಗಳ ಸಂವಹನ ನೇರ ಅತಿ ಸುಲಭ ಹಾಗೂ ಅತಿ ಶೀಘ್ರವಾಗಿದೆ. ನುಡಿ ಲಿಪಿ ತಂತ್ರಾಂಶ

ಉಚಿತವಾಗಿ ಅಂತರಜಾಲ ತಾಣದಲ್ಲಿ ಲಭ್ಯವಿದೆ. ಇದನ್ನು ಯಾರು ಬೇಕಾದರೂ ಬಳಸಿಕೊಳ್ಳಬಹುದು.

ಕನ್ನಡ ಗಣಕ ಪರಿಷತ್ತಿನ ಅಂತರಜಾಲ www.kagapa.org ನುಡಿ ತಂತ್ರಾಂಶವನ್ನು ಬಳಸಿ ಪದ ಸಂಸ್ಕರಣೆ (Word Processing) ದತ್ತ ಸಂಸ್ಕರಣೆ (Data Processing) ಅಂತರಜಾಲ ಅನ್ವಯಗಳು (Internet applications) ಬಹುಮಾಧ್ಯಮಗಳು ಅನ್ವಯಗಳು (Multimedia applications) ಮುಂತಾದ ಗಣಕ ಚಟುವಟಿಕೆಗಳನ್ನು ಮಾಡಲು ಸಾಧ್ಯ.[೪] ಜೊತೆಗೆ ಕನ್ನಡಕ್ಕೆ ಅಗತ್ಯವಾದ ಅನ್ವಯಿಕ ತಂತ್ರಾಂಶಗಳನ್ನು ಅಭಿವೃದ್ಧಿಗೊಳಿಸಲು ಅಗತ್ಯವಾದ ತಂತ್ರಾಂಶ ಅಭಿವೃದ್ಧಿ ಸಲಕರಣೆಗಳನ್ನು (Software Development Kit) ನುಡಿ ತಂತ್ರಾಂಶದೊಂದಿಗೆ ನೀಡಲಾಗಿದೆ. ಇದು ಪದ ಸಂಸ್ಕರಣೆಗೆ ಮತ್ತಷ್ಟು ಸೌಲಭ್ಯಗಳನ್ನು ನೀಡಿದೆ. ದತ್ತ ಸಂಸ್ಕರಣೆಗೆ ಅಗತ್ಯವಾದ ಅನುಕೂಲತೆಗಳನ್ನು ಒದಗಿಸಿದೆ. ಅಲ್ಲದೆ ಅಂತರಜಾಲ ಹಾಗೂ ವಿದ್ಯುನ್ಮಾನ ಅಂಚೆ ಕ್ಷೇತ್ರಗಳಲ್ಲೂ ಕನ್ನಡವನ್ನು ಯಶಸ್ವಿಯಾಗಿ ಬಳಸಲು ಸಾಧ್ಯವಾಗಿದೆ.

**'ನುಡಿ' ತಂತ್ರಾಂಶ ಬಳಕೆಯ ಕ್ಷೇತ್ರಗಳು**

* ವಿಂಡೋಸ್‌ನ (೯೫, ೯೮ ಎನ್.ಟಿ. ೨೦೦೦ ಎಕ್ಸ್‌ಪಿ ವಿಸ್ತಾ) ಎಲ್ಲಾ ಅನ್ವಯಿಕ (ಅಪ್ಲಿಕೇಶನ್) ತಂತ್ರಾಂಶಗಳು
* ಲೋಟಸ್ ಸ್ಮಾರ್ಟ್‌ಸೂಟ್
* ಎಲ್ಲಾ ರೀತಿಯ ಪದ ಸಂಸ್ಕರಣೆ (ಎಂ.ಎಸ್. ಆಫೀಸ್, ಸ್ಟಾರ್ ಆಫೀಸು, ಪೇಜ್ ಮೇಕರ್ ಇತ್ಯಾದಿ).
* ದತ್ತ, ಸಂಸ್ಕರಣೆ (ಡೇಟಾ ಪಾಸೆಸಿಂಗ್) (ಎಂ.ಎಸ್. ಆಕ್ಸೆಸ್, ವಿಷುಅಲ್, ಬೇಸಿಕ್ ಎಸ್‌ಕ್ಯೂಎಲ್, ಅರಾಕಲ್ ವಿಷುಅಲ್ ಫ್ಯಾಕ್ಸ್ ಪ್ರೊ. ಇತ್ಯಾದಿ)
* ಆಂತರಿಕ ಜಾಲ (ಇಂಟರ್‌ನೆಟ್) ಹಾಗೂ ಅಂತರಜಾಲ ವೆಬ್‌ಸೈಟ್ ಅನ್ವಯಗಳು ಇ-ಅಂಚೆ (ಇಂಟರ್‌ನೆಟ್)

**ನುಡಿ ತಂತ್ರಾಂಶದ ಅನುಸ್ಥಾಪನೆ**

ಗಣಕದಲ್ಲಿ ಕನ್ನಡದ ಅಕ್ಷರವನ್ನು ಮೂಡಿಸಲು ಮೊದಲು ಲಿಪಿ ತಂತ್ರಾಂಶವನ್ನು ಅಳವಡಿಸಬೇಕು. ಹೀಗೆ ಅಳವಡಿಸುವುದಕ್ಕೆ ಅನುಸ್ಥಾಪನೆ ಎನ್ನುತ್ತಾರೆ. ನುಡಿ ಅನುಸ್ಥಾಪಿಸಲು ಎರಡು ಮಾರ್ಗಗಳಿವೆ.[೫]

ಕನ್ನಡ ಗಣಕ ಪರಿಷತ್ತಿನ ಅಂತರಜಾಲ ತಾಣ www.kagapa org. ದಿಂದ ನುಡಿ ಅಡಕ ಮುದ್ರಿಕೆ (ಸಿಡಿ)ಯಿಂದ.

**'ನುಡಿ' ತಂತ್ರಾಂಶವನ್ನು ಅಡಕ ಮುದ್ರಿಕೆಯಿಂದ ಗಣಕಕ್ಕೆ ವರ್ಗಾಯಿಸಿಕೊಳ್ಳುವುದು.**

* ನುಡಿ ಅಡಕ ಮುದ್ರಿಕೆಯಲ್ಲಿರುವ ತಂತ್ರಾಂಶಗಳೆಲ್ಲವನ್ನೂ ನಿಮ್ಮ ದೃಢ ಮುದ್ರಿಕೆಗೆ (Hard disk) ನಕಲಿಸಿ.
* ನುಡಿ ಅಡಕ ಮುದ್ರಿಕೆಯನ್ನು ಅಡಕ ಮುದ್ರಿಕೆ ಚಾಲಕದಲ್ಲಿ (CD Drive) ಇಡಿ. (ಸಿಡಿ ಮೇಲಿರುವ 'ನುಡಿ' ಹೆಸರು ಮೇಲ್ಭಾಗದಲ್ಲಿ ಕಾಣುವಂತಿರಬೇಕು.)
* ಗಣಕ ತೆರೆಯ ಮೇಲಿರುವ ನನ್ನ ಗಣಕ (My Computer) ಲಾಂಛನವನ್ನು ಕ್ಲಿಕ್ಕಿಸಿ. ತೆರೆದುಕೊಳ್ಳುವ ನನ್ನ ಗಣಕ ಸಂವಾದ ಚೌಕದಲ್ಲಿ ದೃಡ ಮುದ್ರಿಕೆಯ C ಅಥವಾ ಇನ್ಯಾವುದೇ ವಿಭಾಗವನ್ನು ತೆರೆಯಿರಿ.
* ಒಂದು ಹೊಸ ಕಡತಕೋಶ (NewFolder) ಉದಾ. Kannada software ನಿರ್ಮಿಸಿ. ಅದನ್ನು ತೆರೆಯಿರಿ.
* ಒಂದು ಹೊಸ ಕಡತಕೋಶ (New Folder) ಉದಾಹರಣೆಗೆ (Kannada Software) ನಿರ್ಮಿಸಿ ಅದನ್ನು ತೆರೆಯಿರಿ.
* ನನ್ನ ಗಣಕ ಲಾಂಛನವನ್ನು ಮತ್ತೊಮ್ಮೆ ಕ್ಲಿಕ್ಕಿಸಿ Nudi CC ಅಡಕ ಮುದ್ರಿಕೆ ಚಾಲಕವನ್ನು ತೆರೆಯಿರಿ. ಸಂಪಾದನೆ ಪರಿವಿಡಿಯಲ್ಲಿ ಎಲ್ಲ ಆಯ್ಕೆ ಮಾಡು (Select all) ಆಯ್ಕೆ ಕ್ಲಿಕ್ಕಿಸಿ, ಎಲ್ಲಾ ಕಡತ ಕೋಶಗಳೂ ಆಯ್ಕೆಯಾಗುತ್ತವೆ. ಈಗ ಸಂಪಾದನೆ ಪರಿವಿಡಿಯಲ್ಲಿ ನಕಲಿಸಲು (Copy) ಕ್ಲಿಕ್ಕಿಸಿ ಎಲ್ಲವೂ ನಕಲಾಗುತ್ತದೆ.
* ಹೀಗೆ ನಕಲಿಸಿದ್ದನ್ನು ಈಗಾಗಲೇ ತೆರೆದು ಸಿದ್ಧಗೊಳಿಸಿದ ಕಡತಕೋಶ Kannada Softwareನಲ್ಲಿ ಅಂಟಿಸಿ. ಅಂಟಿಸಲು ಸಂಪಾದನೆ ಪರಿವಿಡಿಯಲ್ಲಿ ಅಂಟಿಸು (Paste) ಕ್ಲಿಕ್ಕಿಸಿ.
* ಆ ಬಳಿಕ 'ನುಡಿ' ಅಡಕ ಮುದ್ರಿಕೆಯನ್ನು ಗಣಕದಿಂದ ಹೊರಕ್ಕೆ ತೆಗೆಯಿರಿ.

ಅಥವಾ

* ಗಣಕವು ಅಂತರಜಾಲದ ಸಂಪರ್ಕ ಹೊಂದಿದ್ದರೆ www. Kagapa.org ಜಾಲತಾಣಕ್ಕೆ ಸಂಪರ್ಕ ಪಡೆದುಕೊಳ್ಳಿ.
* ಸೂಕ್ತ ಸೂಚನೆಗಳ ಪ್ರಕಾರ, ನುಡಿ ತಂತ್ರಾಂಶವನ್ನು ಡೌನ್‌ಲೋಡ್ ಮಾಡಿಕೊಂಡು ಮೇಲೆ ಹೇಳಿದಂತೆ kannada software ಕಡತ ಕೋಶದಲ್ಲಿ ಉಳಿಸಿಕೊಳ್ಳಿ.

**'ನುಡಿ' ಅನುಸ್ಥಾಪನೆ**

* Kannada software ಕನ್ನಡ ಕೋಶದಲ್ಲಿ ಇರುವ 'ನುಡಿ' ಕಡತ ಕೋಶವನ್ನು ತೆರೆಯಿರಿ.
* ಅದರಲ್ಲಿರುವ Setup. Exe ಕ್ಲಿಕ್ಕಿಸಿ.
* ಅನುಸ್ಥಾಪನೆ ಹಂತಗಳಲ್ಲಿ ಕಾಣಬರುವ ಸಲಹೆಗಳನ್ನು ಅನುಸರಿಸಿ.
* ಗಣಕವು ಸ್ಥಗಿತಗೊಂಡು, ಸ್ವಯಂಚಾಲಿತವಾಗಿ ಮತ್ತೊಮ್ಮೆ ಆರಂಭಗೊಂಡು ನುಡಿ ಅನುಸ್ಥಾಪನೆಯಾಗುತ್ತದೆ.

**ನುಡಿ ಅನುಸ್ಥಾಪನೆಗೊಂಡಿರುವುದನ್ನು ಖಚಿತಪಡಿಸಿಕೊಳ್ಳುವುದು ಹೇಗೆ?**

ನುಡಿ ಸ್ಥಾಪನೆಯಾಗಿದ್ದರೆ, ನುಡಿ ಲಾಂಛನ 'ಕರ್ನಾಟಕ ನಕ್ಷೆ'ಯು ಗಣಕ ಪರದೆಯ ಮೇಲೆ ಕಾಣುತ್ತದೆ.

**ನುಡಿ ಎಂಜಿನ್ ಚಾಲನೆ ಮಾಡುವುದು ಹಾಗೂ ಚಾಲನೆಯಾಗಿರುವುದನ್ನು ಖಚಿತಪಡಿಸಿಕೊಳ್ಳುವುದು ಹೇಗೆ?**

ಗಣಕ ಪರದೆಯ ಮೇಲೆ ಕಾಣುವ ನುಡಿ ಲಾಂಛನವನ್ನು ಎರಡು ಬಾರಿ ಕ್ಲಿಕ್ಕಿಸಿ. ನುಡಿಯ ವಿವರಗಳಿರುವ ಒಂದು ಚಿಕ್ಕ ಚೌಕ ತೆರೆಯ ಮೇಲೆ ಕಾಣಿಸಿಕೊಂಡು ನುಡಿ ಎಂಜಿನ್ ಚಾಲನೆಯಾಗುತ್ತಿದೆಯೆಂಬ ಸೂಚನೆ ನೀಡುತ್ತದೆ.

ಅನಂತರ ನುಡಿ ಲಾಂಛನವಾದ ಕರ್ನಾಟಕ ರಾಜ್ಯದ ನಕ್ಷೆ ಗಣಕ ಪರದೆಯ ಕೆಳಗಡೆಯಿಂದ ಕಾರ್ಯಪಟ್ಟಿಕೆಯ ಬಲಭಾಗದಲ್ಲಿ ಕಾಣುತ್ತದೆ.

ಕೀಲಿಮಣೆಯಲ್ಲಿರುವ ಸ್ಕ್ರಾಲ್‌ಲಾಕ್ ಕೀಲಿಯ ದೀಪ ಹೊತ್ತಿಕೊಳ್ಳುತ್ತದೆ.

ಪ್ರತಿಬಾರಿ ನುಡಿ ಬಳಸುವಾಗಲೂ ಈ ಮೇಲಿನ ಹಂತಗಳನ್ನು ಅನುಸರಿಸುವುದು ಅವಶ್ಯಕ.

ಸೂಚನೆ: ಇದೇ ಕ್ರಮದಲ್ಲಿ Kannada Software ಕಡತ ಕೋಶದಲ್ಲಿರುವ ಇತರ ತಂತ್ರಾಂಶಗಳಿಗೆ ಸಂಬಂಧಪಟ್ಟ ಪ್ರತಿಯೊಂದು Setup.exe ಕ್ಲಿಕ್ಕಿಸಿ 'ನುಡಿ' ಅಡಕ ಮುದ್ರಿಕೆಯಲ್ಲಿರುವ ಉಳಿದೆಲ್ಲಾ ತಂತ್ರಾಂಶಗಳನ್ನೂ ಅನುಸ್ಥಾಪಿಸಬಹುದು. ನುಡಿ ಅನುಸ್ಥಾಪನೆ ಆಗಿರುವುದರಿಂದ ಈಗ ಗಣಕದಲ್ಲಿ ಕನ್ನಡ ಅಕ್ಷರವನ್ನು ಮೂಡಿಸಬಹುದು.

**ಕೀಲಿಮಣೆ ವಿನ್ಯಾಸ (Keyboard Layout)**

ಕನ್ನಡ ಅಕ್ಷರಗಳನ್ನು ಗಣಕ ತೆರೆಯ ಮೇಲೆ ಮೂಡಿಸಲು ಮುಖ್ಯವಾಗಿ ಕೀಲಿಮಣೆ ವಿನ್ಯಾಸ ಅಗತ್ಯ.

ಕನ್ನಡ ಗಣಕ ಕೀಲಿಮಣೆ ವಿನ್ಯಾಸ ಎಂದರೆ ಗಣಕ ಕೀಲಿಮಣೆಯ ಯಾವ ಕೀಲಿಗೆ ಯಾವ ಕನ್ನಡ ಅಕ್ಷರ ಗೊತ್ತುಮಾಡುವುದು ಎಂಬುದೇ ಆಗಿದೆ. ಉದಾಹರಣೆಗೆ 'ಚ'

ಅಕ್ಷರವನ್ನು ಗುರುತಿಸಿರುವ ಕೀಲಿಯನ್ನು ಒತ್ತಿ 'ಅ' ಅಕ್ಷರವನ್ನು ಪಡೆಯುವಂತೆ ತಂತ್ರಾಂಶ(Software)ದ ಮೂಲಕ ಗಣಕಕ್ಕೆ ನಿರ್ದೇಶನ(ಮಾಡ) ನೀಡಬಹುದು. ಇಂಗ್ಲಿಷ್‌ನಲ್ಲಿಯೂ ಇದೇ ರೀತಿಯ ವ್ಯವಸ್ಥೆ ಇದೆ. ಇಂಗ್ಲಿಷ್ ಕೀಲಿಮಣೆಯನ್ನು ರೂಪಿಸಿರುವುದರಿಂದ ಅಲ್ಲಿ ಯಾವುದೇ ತೊಂದರೆಯೂ ಇಲ್ಲ. ೨೬ ಧ್ವನ್ಯಾಕ್ಷರಗಳಿರುವ ಇಂಗ್ಲಿಷ್ ಭಾಷಎಗೆ ನಿರ್ದಿಷ್ಟ ಪಡಿಸಿರುವ ಕೀಲಿಮಣೆ ವ್ಯವಸ್ಥೆಯು ಪ್ರಪಂಚದಾದ್ಯಂತ ಒಂದೇ ಆಗಿದೆ. ಆದ್ದರಿದಂ ಇದೇ ಕೀಲಿಮಣೆಗೆ ಸುಲಭ ಹಾಗೂ ಸರಳ ರೀತಿಯಲ್ಲಿ ಕನ್ನಡ ಭಾಷೆಯನ್ನು ಸಜ್ಜುಗೊಳಿಸುವ ಶಿಷ್ಟ ಕೀಲಿಮಣೆಯನ್ನು ಕನ್ನಡ ಗಣಕ ಪರಿಷತ್ತು ವಿನ್ಯಾಸಗೊಳಿಸಿದೆ.

ಕನ್ನಡ ಭಾಷೆಯಲ್ಲಿ ಸಹಸ್ರಾರು ಸಂಯುಕ್ತಾಕ್ಷರಗಳಿವೆ. ಹ್ರಸ್ವ, ದೀರ್ಘ, ಅಲ್ಪಪ್ರಣಾ, ಮಹಾಪ್ರಾಣ, ಒತ್ತುಗಳು, ಅನುಸ್ವಾರ(ಂ), ವಿಸರ್ಗ(ಃ) ಅರ್ಕಾವೊತ್ತು(ೠ) ಮತ್ತು ಮೂಲ ವ್ಯಂಜನವನ್ನನು ಮೂಡಿಸಲು ಬಳಸುವ ಅರ್ಧಾಕ್ಷರ ಚಿಹ್ನೆ(ಹಲಂತ್) ಇತ್ಯಾದಿ ಅಕ್ಷರಗಳನ್ನು ಆದಷ್ಟು ಸರಳವಾಗಿ, ಈಗಿರುವ ಕೀಲಿಮಣೆಯ ಕೀಲಿಗಳಿಂದ ಪಡೆಯುವಂತೆ ತಂತ್ರಾಂಶವನ್ನು ಸಿದ್ಧಪಡಿಸಬಹುದು. ಆದರೆ ಈ ರೀತಿ ಪ್ರತಿಯೊಬ್ಬರೂ ತಮಗೆ ಬೇಕಿನಿಸಿದಂತೆ ತಂತ್ರಾಂಶವನ್ನು ಸಿದ್ಧಪಡಿಸಿದರೆ ಗೊಂದಲಗಳಾಗುತ್ತವೆ. ಬಹಳ ಜನ ಒಂದು ಸೌಲಭ್ಯವನ್ನು ಉಪಯೋಗಿಸಿದಾಗ ಏಕರೂಪತೆ ಇರಬೇಕು. ಆದ್ದರಿಂದ ಕನ್ನಡದಲ್ಲಿ ಇಂತಹ ಶಿಷ್ಟತೆಯನ್ನು ಸಿದ್ಧಪಡಿಸಿ, ಅದರ ಆಧಾರದ ಮೇಲೆ ನುಡಿ ತಂತ್ರಾಂಶವನ್ನು ತಯಾರಿಸಲಾಗಿದೆ. ಈ ನುಡಿ ತಂತ್ರಾಂಶವನ್ನು ಯಾವ ಆಧಾರದ ಮೇಲೆ ಅಭಿವೃದ್ಧಿ ಪಡಿಸಲಾಗಿದೆ ಎಂದು ತಿಳಿದುಕೊಳ್ಳೋಣ.

**ಕನ್ನಡಕ್ಕೂ ೨೬ ಕೀಲಿ(ಮ)ಗಳು**

ಗಣಕಗಳ ಜೊತೆ ಕೀಲಿಮಣೆಯಲ್ಲಿ ಇಂಗ್ಲಿಷ್ ಅಕ್ಷರಗಳಿಗೆ ಇರುವ ೨೬ ಧ್ವನ್ಯಾಕ್ಷರ ಕೀಲಿಗಳನ್ನು ಮಾತ್ರವೇ ಕನ್ನಡಕ್ಕೂ ಬಳಸಿಕೊಂಡರೆ ಬಳಕೆಗೆ ಸುಲಭವಾಗುತ್ತದೆ. ಕನ್ನಡ ಭಾಷೆಯಲ್ಲಿ ಕೆಳಕಂಡ ೪೯ ಮತ್ತು ೨ ವಿಶೇಷ ಚಿಹ್ನೆಗಳು ಈಗ ಬಳಕೆಯಲ್ಲಿವೆ.

ಸ್ವರಗಳು ೧೩ (ಅ, ಆ, ಇ, ಈ, ಉ, ಊ, ಋ, ಎ, ಏ, ಐ, ಒ, ಓ, ಔ)

ಅ ಸ್ವರ ಸಹಿತವಾದ ವರ್ಗೀಯ ವ್ಯಂಜನಗಳು ೨೫ (ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಡ, ಢ, ಣ, ತ, ಥ, ದ, ಧ, ನ, ಪ, ಫ, ಬ, ಭ, ಮ)

ಅ ಸ್ವರ ಸಹಿತವಾದ ಅವರ್ಗೀಯ ವ್ಯಂಜನಗಳು ೯ (ಯ, ರ, ಲ, ವ, ಶ, ಷ, ಸ, ಹ, ಳ)

ಅನುಸ್ವಾರ(ಂ), ವಿಸರ್ಗ(ಃ) ಅರ್ಕಾವೊತ್ತು(ೠ) ಮತ್ತು ಮೂಲ ವ್ಯಂಜನವನ್ನನು ಮೂಡಿಸಲು ಬಳಸುವ ಅರ್ಧಾಕ್ಷರ ಚಿಹ್ನೆ(ಹಲಂತ್) ಒಟ್ಟು ೪ ಚಿಹ್ನೆಗಳು.[೭]

ಇವೆಲ್ಲವೂ ಸೇರಿ ೪೭ ಅಕ್ಷರ ಮತ್ತು ೪ ವಿಶೇಷ ಚಿಹ್ನೆಗಳಾಗುತ್ತವೆ. ಈಗ ಇಂಗ್ಲಿಷ್

ಕೀಲಿಮಣೆಯನ್ನು ಗಮನಿಸಿ ಸಹಜ(Normal)ವಾಗಿ ಕೀಲಿಗಳು ದೊರಕುತ್ತವೆ. (Shift) ಕೀಲಿಯನ್ನು ಬಳಸಿದರೆ ಮತ್ತೆ ೨೬ ಕೀಲಿಗಳು ದೊರೆಯುತ್ತವೆ. ಅಂದರೆ ಒಟ್ಟು ೫೨ ಸಾಧ್ಯತೆಗಳು ಸುಲಭವಾಗಿ ದೊರಕುತ್ತವೆ. ಅಂದರೆ ಬಳಕೆದಾರರು ಗಣಕಕ್ಕೆ ೫೨ ನಿರ್ದಿಷ್ಟ ಆದೇಶಗಳನ್ನು ನೀಡಲು ಸಾಧ್ಯವಿದೆ. ಒಟ್ಟಿನಲ್ಲಿ ದೊರಕುವ ಕೀಲಿಗಳನ್ನು ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಉಪಯೋಗಿಸಿಕೊಂಡು ಶಿಷ್ಟ ಕೀಲಿಮಣೆಯನ್ನು ಸಮರ್ಪಕವಾಗಿ ತಯಾರಿಸಲಾಗಿದೆ.

ಸಾಮಾನ್ಯವಾಗಿ ಕನ್ನಡದ ಅಕ್ಷರಗಳಿಗೆ ಅದೇ ಧ್ವನಿಯುಳ್ಳ ಇಂಗ್ಲಿಷ್ ಅಕ್ಷರದ ಕೀಲಿಯನ್ನೇ ನಿಗದಿಗೊಳಿಸಲಾಗಿದೆ. ಉದಾಹರಣೆಗೆ ಸ್ವರಗಳಾದ ಅ, ಇ, ಉ, ಋ, ಎ, ಒ ಅಕ್ಷರಗಳಿಗೆ ಕ್ರಮವಾಗಿ a i u sfift. r e o ಕೀಲಿಗಳನ್ನು, ಆ, ಈ, ಊ, ಏ, ಓ ಪಡೆಯಲು sfift ಕೀಲಿಯನ್ನು ಒತ್ತಿ ಹಿಡಿದು a i u e o ಕೀಲಿಗಳನ್ನು ಒತ್ತಬೇಕಾದ ಕ್ರಮವನ್ನು ನಿಗದಿಗೊಳಿಸಲಾಗಿದೆ.

ಇದೇ ರೀತಿ ವ್ಯಂಜನಗಳನ್ನು ಪಡೆಯಲು ಅಲ್ಪಪ್ರಾಣ ಅಕ್ಷರಗಲಿಗೆ ಅದೇ ಧ್ವನಿಯುಳ್ಳ ಇಂಗ್ಲಿಷ್ ಅಕ್ಷರವನ್ನೂ, ಮಹಪ್ರಾಣ ಪಡೆಯಲು ಕೀಲಿಯನ್ನು ಒತ್ತಿ ಹಿಡಿದು, ಅದೇ ಅಕ್ಷರವನ್ನು ಒತ್ತಬೇಕು. ಉದಾಹರಣೆಗೆ ಕ–k, ಚ–c, ಟ–q (ಡ– w ಗಮನಿಸಿ), ತ– t ಮತ್ತು ಪ– p ಇತ್ಯಾದಿ ಚಿತ್ರದಲ್ಲಿರುವ ಪ್ರತಿ ಕೀಲಿಯ ಮೇಲೆ ಎರಡು ಅಕ್ಷರಗಳಿವೆ. ಒಂದು ಕೆಳಗೆ ಮತ್ತೊಂದು ಅದರ ಮೇಲೆ. ಕೆಳಗಿರುವ ಅಕ್ಷರವನ್ನು ನೇರವಾಗಿ ಪಡೆಯಬಹುದು. ಮೇಲಿನ ಅಕ್ಷರವನ್ನು ಪಡೆಯಲು ಕೀಲಿಯನ್ನು ಒತ್ತಿ ಹಿಡಿಯಬೇಕಾಗುತ್ತದೆ. ಇದು ಸಾಮಾನ್ಯ ನಿಯಮ. ಉಳಿದ ಅಕ್ಷರಗಳನ್ನೂ ಹಾಗೂ ವಿಶೇಷ ಚಿಹ್ನೆಗಳನ್ನು ಪಡೆಯುವುದು ಹೇಗೆಂದು ಚಿತ್ರವನ್ನು ನೋಡಿ ತಿಳಿದುಕೊಳ್ಳಬಹುದಾಗಿದೆ. ಅಂಕಿಗಳ ವಿಷಯದದಲ್ಲಿ ಇಂಗ್ಲಿಷ್ ಅಂಕಿಗಳಿಗೆ ನಿಗದಿಸಿದ ಕೀಲಿಗಳೇ ನುಡಿ ತಂತ್ರಾಂಶ ಚಾಲನೆಯಲ್ಲಿದ್ದಾಗ ಕನ್ನಡ ಅಂಕಿಗಳನ್ನು ಒದಗಿಸುತ್ತವೆ.

**ವಿಶೇಷ ಅಕ್ಷರಗಳು ಮತ್ತು ಚಿಹ್ನೆಗಳು**

ಜೆರಾಕ್ಸ್ ಫಾಂಟಾ, ಅಜರ್ ಮುಂತಾದ ಇಂಗ್ಲಿಷ್, ಹಿಂದಿ ಅಥವಾ ಉರ್ದು ಪದಗಳ ಉಚ್ಚಾರಣೆಗಾಗಿ ಕೆಲವು ಅಕ್ಷರಗಳ ಕೆಳಗೆ ಎರಡು ಚುಕ್ಕೆಗಳನ್ನು ಅಳವಡಿಸಬೇಕು. ಅಲ್ಲದೆ ಹಳಗನ್ನಡದ ಱ, ೞ, ಅಕ್ಷರಗಳು ಬೇಕಾಗುತ್ತದೆ. ಈ ಅಗತ್ಯಗಳಿಗೆ ಬಳಸಬೇಕಾದ ಕ್ರಮ ಹೀಗಿದೆ– ಋ ಜ ಫ ರ ಳ ಮುಂತಾದ ಕೀಲಿಗಳ ಪೈಕಿ ಯಾವುದಾದರೊಂದು ಕೀಲಿಯನ್ನು ಒತ್ತಿದ ನಂತರ x ಕೀಲಿಯನ್ನು ಒತ್ತಿದರೆ ಅವು ಕ್ರಮವಾಗಿ ೠ, ಜ, ಫ, ಱ(ಱ) ೞ ಅಕ್ಷರಗಳಾಗಿ ಬದಲಾಗುತ್ತವೆ. ಈ ವಿನ್ಯಾಸದಲ್ಲಿ ಕೀಲಿಮಣೆಯಲ್ಲಿ ಇರುವ ಇತರ ಕೀಲಿಗಳಿಂದ ದೊರಕುವ ಅಗತ್ಯ ಚಿಹ್ನೆಗಳಾದ {}, [ ], %, *, (,) ಮುಂತಾದವುಗಳನ್ನು ಕನ್ನಡದಲ್ಲಿಯೂ ಬಳಸಲು ಸಾಧ್ಯವಾಗುತ್ತದೆ.

ಹೀಗೆ ನುಡಿ ಶಿಷ್ಟ ಕೀಲಿಮಣೆಯಲ್ಲಿ ಇಂಗ್ಲಿಷ್ ಅಕ್ಷರಗಳಿಗೂ ಕನ್ನಡ ಅಕ್ಷರಗಳಿಗೂ ಉಚ್ಚಾರಣಾ ಸಾಮೀಪ್ಯ ಸಂಬಂಧವನ್ನು ಕಾಣಬಹುದು.

**ನುಡಿ ಸಂಪಾದಕದಲ್ಲಿ ಅಕ್ಷರ ಜೋಡಣೆ**

ನುಡಿ ಸಂಪಾದಕದಲ್ಲಿ ಬೆರಳಚ್ಚಿಸಲು ಅನುಸರಿಸಬೇಕಾದ ಹಂತಗಳು

೧. 'ನುಡಿ' ತಂತ್ರಾಂಶವನ್ನು ನಿಮ್ಮ ಗಣಕದಲ್ಲಿ ಅನುಸ್ಥಾಪಿಸಲಾಗಿದೆಯೇ ಎಂಬುದು ಗಮನಿಸಿ

೨. ಗಣಕ ಪರದೆಯ ಮೇಲೆ ಕಾಣುವ ನುಡಿ ಲಾಂಛನವನ್ನು ಎರಡು ಬಾರಿ ಕ್ಲಿಕ್ಕಿಸಿ (ಡಬಲ್ ಕ್ಲಿಕ್)

ಅಥವಾ

ಈಗಾಗಲೇ ನುಡಿ ತಂತ್ರಾಂಶ ಚಾಲನೆಯಲ್ಲಿದ್ದು, ನುಡಿಯ ಲಾಂಛನ ಗಣಕ ಪರದೆಯ ಕಾರ್ಯಭಾರ ಪಟ್ಟಿಕೆಯ ಮೇಲೆ ಇದ್ದಲ್ಲಿ, ಅದರ ಮೆಲೆ ಮೌಸ್‌ನ ಬಲ ಗುಂಡಿಯನ್ನು ಒತ್ತಿ, ಆಗ ಕಾಣುವ ಪಟ್ಟಿಯಲ್ಲಿ ಸಂಪಾದಕ ಆಯ್ಕೆಯನ್ನು ಕ್ಲಿಕ್ಕಿಸಿ.

೩. ಆಗ ನುಡಿ ಸಂಪಾದಕ ಕಿಟಕಿಯು ತೆರೆದುಕೊಳ್ಳುತ್ತದೆ. ಅದರಲ್ಲಿ ಕಡತ ಪರಿವಿಡಿಯನ್ನು ಕ್ಲಿಕ್ಕಿಸಿ, ಕಾಣುವ ಪಟ್ಟಿಯಲ್ಲಿ ಹೊಸ ಆಯ್ಕೆಯನ್ನು ಕ್ಲಿಕ್ಕಿಸಿ.

೪. ಈಗ ಸಂಪಾದಕವನ್ನು ಬಳಸಿ ಬಳಕೆದಾರರು ಯಾವ ರೀತಿಯ ಕಡತವನ್ನು ಸಿದ್ಧಪಡಿಸುತ್ತಾರೆ ಎಂಬುದನ್ನು ನಿರ್ಧರಿಸಲು ಸಹಾಯಕವಾದ ಹೊಸ(New) ಸಂವಾದ ಚೌಕವು ತೆರೆದುಕೊಳ್ಳುತ್ತದೆ. ಇದರಲ್ಲಿ ನಾಲ್ಕು ಆಯ್ಕೆಗಳಿರುತ್ತವೆ.

- ನುಡಿ ಹೊಸ ದಸ್ತಾವೇಜು (Nudi New Document)
- ಎಚ್.ಟಿ.ಎಂ.ಎಲ್. ಕಡತ (HTML File)
- ಇಸ್ಕಿ ಪಠ್ಯ ಕಡತ (ISCII Text File)
- ಅಕ್ಷರ ಭಾಗ ಪಠ್ಯ ಕಡತ (Glyph Text File)

ಇವುಗಳಲ್ಲಿ ನಿಮಗೆ ಬೇಕಾದುದನ್ನು ಆಯ್ಕೆ ಮಾಡಿಕಂಒಡು ಓಕೆ ಗುಂಡಿಯನ್ನು ಒತ್ತಿ. ಉದಾಹರಣೆಗೆ ಮೊದಲಿಗೆ ಕಾಣುವ ಪಟ್ಟಿಯಿಂದ Nudi document ಆಯ್ಕೆಯನ್ನು ಕ್ಲಿಕ್ಕಿಸಿ. ಆಗ ನುಡಿ ಸಂಪಾದಕದ ಹೊಸ ಕಡತದ ತೆರೆ ಕಾಣಿಸುತ್ತದೆ.

ಉದಾಹರಣೆಗೆ 'ಕೋ' ಗುಣಿತಾಕ್ಷರವು ಬೇಕೆಂದರೆ 'ಕ' ಮತ್ತು 'ಓ' ಎರಡು ಅಕ್ಷರಗಳನ್ನು ಒತ್ತಬೇಕು (k. Shift to) ಹೀಗೆ ಮೂರು ಕೀಲಿಗಳನ್ನು ಬಳಸಬೇಕು.

• ಒಂದು ವ್ಯಂಜನ ಮತ್ತು ಸ್ವರ ಕೀಲಿಗಳನ್ನು ಅನುಕ್ರಮವಾಗಿ ಒತ್ತಿದಾಗ, ಅವೆರಡೂ ಸೇರಿ ಗುಣಿತಾಕ್ಷರ ಮೂಡುತ್ತದೆ. ನ+ಉ=ನು, ಕ+ಓ=ಕೋ ಗ+ಔ=ಗೌ

• ಯಾವುದೇ ಸ್ವರದ ಮುಂದೆ ಮತ್ತೊಂದು ಸ್ವರ ಅಥವಾ ವ್ಯಂಜನ ಬಂದಾಗ ಸ್ವರವು ತನ್ನ ಮೂಲ ರೂಪವನ್ನು ಉಳಿಸಿಕೊಳ್ಳುತ್ತದೆ. ಉದಾಹರಣೆಗೆ ವಿಷುಅಲ್ ಪದದಲ್ಲಿ ಅ ಸ್ವರವು ತನ್ನ ಮೂಲ ರೂಪದಲ್ಲಿ ಉಳಿದಿದೆ. ಏಕೆಂದರೆ ಆ ಸ್ವರದ ಹಿಂದೆ ಉ ಸ್ವರವು ಬಂದಿದೆ. ಹಾಗೂ ಮುಂದೆ ಲ ವ್ಯಂಜನ ಬಂದಿದೆ ಎಂಬುದನ್ನು ಗಮನಿಸಬಹುದು.

**ಸಂಯುಕ್ತಾಕ್ಷರಗಳು**

• ಸಾಮಾನ್ಯವಾಗಿ ಎರಡು ಅಥವಾ ಹೆಚ್ಚಿನ ವ್ಯಂಜನಗಳು ಹಾಗೂ ಒಂದು ಸ್ವರ ಸೇರಿ ಸಂಯುಕ್ತಾಕ್ಷರ ಉಂಟಾಗುತ್ತದೆ.(ಕ್ಷ, ಸ್ತ್ರೀ, ತ್ರ್ಯೋ, ಷ್ಟ್ರ, ಇತ್ಯಾದಿ) ಕನ್ನಡದಲ್ಲಿ ಮೊದಲ ವ್ಯಂಜನದ ಮೂಲರೂಪ ಉಳಿದು ಎರಡನೆಯ ವ್ಯಂಜನವು ಮೊದಲನೆಯ ವ್ಯಂಜನಕ್ಕೆ ಒತ್ತಕ್ಷರದ ರೂಪ ತಳೆಯುತ್ತದೆ.

್ ಕೀಲಿಯನ್ನು ಒತ್ತಿದಾಗ ತಂತ್ರಾಂಶವು ಚಿಹ್ನೆಯ ಹಿಂದಿನ ಅಕಾರಾಂತ ವ್ಯಂಜನದ 'ಅ' ಕಾರವನ್ನು ತೆಗೆದು ಹಾಕಿ ಅದನ್ನು ಮೂಲ ವ್ಯಂಜನವನ್ನಾಗಿ ಪರಿವರ್ತಿಸುತ್ತದೆ. (ಕ ್=ಕ್)

• ಕೀಲಿಮಣೆಯ ್ (F) ಕೀಲಿಯನ್ನು ಸಂಪರ್ಕ ಕೀಲಿ/ Link Key) ಒತ್ತಿ ಕಾರ್ಯ ಸಾಧಿಸಬಹುದು.

• ಈ ಮೂಲ ವ್ಯಂಜನವು ಮುಂದಿನ ವ್ಯಂಜನದೊಂದಿಗೆ ಸೇರಿ ಸಂಯುಕ್ತಾಕ್ಷರವಾಗುತ್ತದೆ. ಉದಾಹರಣೆಗೆ ಅನುಕ್ರಮವಾಗಿ ನ, ್ ಮತ್ತು ನ ಕೀಲಿಗಳನ್ನು ಒತ್ತಿದಾಗ ನ್ನ ಎಂಬ ಸಂಯುಕ್ತಾಕ್ಷರ ಮೂಡುತ್ತದೆ.

• ಈ ರೀತಿ ಪ್ರತಿ ಎರಡು ವ್ಯಂಜನಗಳ ಹಲಂತ್ ಕೀಲಿಯನ್ನು ಬಳಸಿ ಸಂಯುಕ್ತಾಕ್ಷರವನ್ನು ಪಡೆದಂತೆ ಎರಡಕ್ಕಿಂತ ಹೆಚ್ಚಿನ ವ್ಯಂಜನಗಳು ಸೇರಿದ ಸಂಯುಕ್ತಾಕ್ಷರಗಳನ್ನು ಪಡೆಯಬಹುದು.

• ಉದಾಹರಣೆಗೆ ಕ್ರ, ಸ್ತ್ರೀಗಳನ್ನು ಪಡೆಯಲು ಕ, ್, ರ ಹಾಗೂ ಸ, ್, ತ, ್, ರ ಈ ಗಳನ್ನು ಅನುಕ್ರಮವಾಗಿ ಕೀಲಿಸಬೇಕು.

• ಅಂದರೆ ಸಂಯುಕ್ತಾಕ್ಷರವನ್ನು ಮೂಡಿಸಲು ಅದರಲ್ಲಿನ ವ್ಯಂಜನಗಳನ್ನು ಉಚ್ಚಾರಣೆಯ ಅನುಕ್ರಮದಲ್ಲಿ (ವ್ಯಂಜನ ್ ವ್ಯಂಜನ ್ . . ್ ವ್ಯಂಜನ ಕೀಲಿಸಿ ಅಂತಿಮವಾಗಿ ಸ್ವರವನ್ನು ಕೀಲಿಸಬೇಕು. ಧ್ವನ್ಯಾತ್ಮಕವಾದ ಕನ್ನಡ ಭಾಷೆಗೆ ಈ ಕ್ರಮವು ಅತ್ಯಂತ ಸೂಕ್ತ, ವೈಜ್ಞಾನಿಕ ಹಾಗೂ ಭಾಷಾ ಶುದ್ಧಿಗೆ ಪ್ರಶಸ್ತ.

**ಕನ್ನಡ ಕೀಲಿಮಣೆ ಬೋಧಕ ತಂತ್ರಾಂಶ**

ಈ ಅನ್ವಯಿಕ ತಂತ್ರಾಂಶದ ಬಗ್ಗೆ ಈಗಾಗಲೇ ತಿಳಿದಿರುವಿರಿ ಮತ್ತು ಬಳಸಿದ್ದೀರಿ. ಇದನ್ನು ಬಳಸಿ ಸಂಯುಕ್ತಾಕ್ಷರಗಳು ಮತ್ತು ಗುಣಿತಾಕ್ಷರಗಳನ್ನು ಬೆರಳಚ್ಚಿಸುವುದನ್ನು ಸುಲಭವಾಗಿ ಕಲಿಯಬಹುದು.

ಈ ಬೋಧಕರದಲ್ಲಿ ನಿಮಗೆ ಕಾಗುಣಿತ ಕಲಿಯಲು ನಿರ್ದಿಷ್ಟ ಅಕ್ಷರದ ಮೇಲೆ ಸೂಚಕವನ್ನಿಟ್ಟಾಗ, ನೀವು ಒತ್ತಬೇಕಾದ ಇಂಗ್ಲಿಷ್ ಕೀಲಿಗಳು ಅನುಕ್ರಮವಾಗಿ ಕಾಣಿಸುತ್ತವೆ. ಹಾಗೆಯೇ ಪದಗಳ ಮೇಲೆ ಸೂಚಕವನ್ನೊಯ್ದಾಗ ಆ ಕೀಲಿಗಳು ಮೂಡುತ್ತವೆ. ಹೀಗೆ ಕನ್ನಡ ಬೆರಳಚ್ಚಿಸುವುದನ್ನು ಸುಲಭವಾಗಿ ಕಲಿಯಬಹುದು.

ಈ ವ್ಯವಸ್ಥೆಯಲ್ಲಿ ಎದುರಾಗುವ ಎರಡು ವಿಶೇಷ ಸಂದರ್ಭಗಳು

ಸಂದರ್ಭ ೧: ಲಾಯರ್‌ಗಳು ಎಂಬ ಪದದಲ್ಲಿರುವಂತೆ ಪದದ ಮಧ್ಯೆ ರ್ ಅನ್ನು ಪಡೆಯಲು ಸಂಪರ್ಕ ಕೀಲಿಯನ್ನು ಎರಡು ಬಾರಿ ಬಳಸಬೇಕು.(ಅಂದರೆ ರ ್ ್ ಗ=ರ್‌ಗ)

ಸಂದರ್ಭ ೨: ಪದದ ಮಧ್ಯೆ ವ್ಯಂಜನದ ನಂತರ ಕೀಲಿಸುವ ಸ್ವರವನ್ನು ಅದರ ಮೂಲ ರೂಪದಲ್ಲೇ ಉಳಿಸಿಕೊಳ್ಳಬಹುದು. (ಉದಾ: ಕಇ ಟಒ ಇತ್ಯಾದಿ) ಇಲ್ಲಿ ವ್ಯಂಜನದೊಡನೆ ಸ್ವರವನ್ನು ಸೇರಿಸದಂತೆ ತಂತ್ರಾಂಶಕ್ಕೆ ಸೂಚನೆಯನ್ನು ನೀಡಲು ಅವೆರಡರ ನಡುವೆ ಅ ಅಕ್ಷರದ ಕೀಲಿಯನ್ನು ತಡೆಕೀಲಿಯಾಗಿ ಬಳಸಬೇಕು. ಉದಾಹರಣೆಗೆ ಕಇ ಪದವು ಬೇಕೆಂದಾಗ ನಾವು ಒತ್ತಬೇಕಾದ ಕೀಲಿಗಲು ಕ, ಅ ಮತ್ತು ಇ.

**ನುಡಿ ಮತ್ತು ಯೂನಿಕೋಡ್**

'ಯೂನಿಕೋಡ್ ಎನ್ನುವುದು ಅಂತರಾಷ್ಟ್ರೀಯ ಒಕ್ಕೂಟವು ನಿಗದಿಪಡಿಸಿರುವ ಶಿಷ್ಟತೆ.'[೮] ನುಡಿ ಬಳಸಿಕೊಂಡು ಯೂನಿಕೋಡ್ ಶಿಷ್ಟತೆಯಲ್ಲಿ ಬೆರಳಚ್ಚು ಮಾಡಬಹುದಾಗಿದೆ. ಇದನ್ನು ಬಳಸಲು ಕೆಲವು ಪೂರ್ವನಿಶ್ಚಿತ ಅಗತ್ಯಗಳಿವೆ. ಅವುಗಳೆಂದರೆ,

'ಯೂನಿಕೋಡ್‌ನಲ್ಲಿ ನುಡಿ ಬಳಸಲು ಗಣಕ ವ್ಯವಸ್ಥೆಯು

೧. ಯೂನಿಕೋಡ್ ಬೆಂಬಲಿಸುವ ಕಾರ್ಯಾಚರಣ ವ್ಯವಸ್ಥೆ. ವಿಂಡೋಸ್ ಎಕ್ಸ್‌ಪಿ ಅಥವಾ ಅದಕ್ಕಿಂತ ಮುಂದಿನ ಆವೃತ್ತಿಯನ್ನು ಹೊಂದಿರಬೇಕು.

೨. ಯೂನಿಕೋಡ್ ಅನ್ನು ಬೆಂಬಲಿಸುವ ಕನ್ನಡ ಓಪನ್ ಟೈಪ್ ಅಕ್ಷರ ಶೈಲಿಗಳಲ್ಲಿ ಸಂಪಿಗೆ, ತುಂಗ, ಎಂ.ಎಸ್., ಏರಿಯಲ್ ಯೂನಿಕೋಡ್ ಇತ್ಯಾದಿ ಒಂದು ಶೈಲಿಯನ್ನಾದರೂ ಹೊಂದಿರಬೇಕು.'[೯]

ಯೂನಿಕೋಡ್‌ನಲ್ಲಿ ಮಾಹಿತಿ ಊಡಿಕೆ: ನೇರ ನುಡಿಯನ್ನು ಆಯ್ಕೆ ಮಾಡಿದ ನಂತರ ಗಣಕದ ಕಾರ್ಯ ಪಟ್ಟಿಕೆಯ ಮೇಲೆ ಕರ್ನಾಟಕ ರಾಜ್ಯದ ನಕ್ಷೆಯು ಕಾಣಿಸುತ್ತದೆ. ಹಾಗೂ ನುಡಿ ಆರ್ಯ ಸಿದ್ಧವಾಗಿರುವುದನ್ನು ಸೂಚಿಸುತ್ತದೆ. ಈ ಲಾಂಛನದ ಮೇಲೆ ಮೌಸ್‌ನ ಬಲಗುಂಡಿಯನ್ನು ಕ್ಲಿಕ್ಕಿಸಿದಾಗ ಒಂದು ಬೀಳುಪಟ್ಟಿಯು ಮೂಡುತ್ತದೆ. ಅದರಲ್ಲಿರುವ ಆಯ್ಕೆಗಳಿಂದ ಯೂನಿಕೋಡ್ ಆಯ್ಕೆಯನ್ನು ಕ್ಲಿಕ್ಕಿಸಿದಾಗ, ಅದರ ಪಕ್ಕದಲ್ಲಿ 'ಸರಿ' ಗುರುತು ಕಾಣಿಸುತ್ತದೆ. ನಂತರ ಎಂ.ಎಸ್.ವರ್ಡ್‌ನ ಕಡತದಲ್ಲಿ ಯೂನಿಕೋಡ್ ಅಕ್ಷರ ಶೈಲಿಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಂಡು ಕನ್ನಡದಲ್ಲಿ ಬೆರಳಚ್ಚಿಸಬಹುದು.

'ನುಡಿ ಸಂಪಾದಕದ ಕಡತವನ್ನು ಯೂನಿಕೋಡ್ ಕಡತವಾಗಿ ಉಳಿಸುವುದು.

೧. ನುಡಿ ಸಂಪಾದಕದಲ್ಲಿ ಹೊಸ ಕಡತವನ್ನು ತೆರೆದು ನೋಡಿ ಅಕ್ಷರ ಶೈಲಿಗಳನ್ನು ಒಂದನ್ನು ಆಯ್ಕೆ ಮಾಡಿಕೊಳ್ಳಿ.

೨. ಮಾಹಿತಿಯನ್ನು ಊಡಿಸಿ

೩. ನಂತರ ನುಡಿ ಸಂಪಾದಕದ ಕಡತ ಪರಿವಿಡಿಯನ್ನು ಕ್ಲಿಕ್ಕಿಸಿ.

೪. ಅಲ್ಲಿ ದೊರಕುವ ಆಯ್ಕೆ ಪಟ್ಟಿಯಲ್ಲಿ ಯುಟಿಎಫ್ ೧೬ರಂತೆ ಉಳಿಸು ಹಾಗೂ ಯೂನಿಕೋಡ್ ಯುಟಿಎಫ್ ೮ರಂತೆ ಉಳಿಸು ಎಂಬ ಆಯ್ಕೆಗಳಿರುತ್ತವೆ. ನಿಮ್ಮ ಅಗತ್ಯಕ್ಕೆ ತಕ್ಕಂತೆ ಒಂದು ಆಯ್ಕೆಯನ್ನು ಕ್ಲಿಕ್ಕಿಸಿ.

೫. ಕಡತಕ್ಕೆ ಹೆಸರು ಸೂಚಿಸುವ ಅಂತೆ ಉಳಿಸು ಸಂವಾದ ಚೌಕ ತೆರದುಕೊಳ್ಳುತ್ತದೆ.

೬. ಉಳಿಸಬೇಕಾದ ನಿರ್ದೇಶಿಕೆಯನ್ನು ಆರಿಸಿಕೊಂಡು, ಕಡತಕ್ಕೆ ಸೂಕ್ತವಾದ ಹೆಸರು ನೀಡಿ ಉಳಿಸು ಗುಂಡಿಯನ್ನು ಒತ್ತಿ.

ಹೀಗೆ ತಯಾರಿಸಿದ ಕಡತವು ಯೂನಿಕೋಡ್ ಶಿಷ್ಟತೆಯಲ್ಲಿ ಇರುತ್ತದೆ.[೧೦] ತಂತ್ರಾಂಶವು ೪.೦ ಇಲ್ಲಿಯವರೆಗೂ ಇರುವಂತಹದ್ದು. ಆದಾಗ್ಯೂ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಕನನಡ ಗಣಕ ಪರಿಷತ್ ಸಹಯೋಗದಲ್ಲಿ ೬.೦ ನುಡಿ ತಂತ್ರಾಂಶವನ್ನು ಅಭಿವೃದ್ಧಿ ಪಡಿಸಿರುವರು. ಇದನ್ನು ದಿನಾಂಕ ೦೩.೦೧.೨೦೧೯ರಂದು ಮಾನ್ಯ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಅವರು ಗೃಹಕಛೇರಿ ಕೃಷ್ಣಾದಲ್ಲಿ ಗುರುವಾರ ಬಿಡುಗಡೆ ಮಾಡಿದರು.[೧೧] ಉಚಿತವಾದ ಈ ತಂತ್ರಾಂಶದ ಬಳಕೆಯಿಂದ ಸರ್ಕಾರದ ಆಡಳಿತ ಇನ್ನಷ್ಟು ಸುಗಮವಾಗಲಿದ್ದು, ಜಗತ್ತಿನಾದ್ಯಂತ ಕನ್ನಡಿಗರು ಪರಸ್ಪರ ಇ-ಸಂಪರ್ಕಕ್ಕೆ ಪೂರಕವಾಗಲಿದೆ. ಸರ್ಕಾರದ ಎಲ್ಲಾ ಅಂತರ್ಜಾಲ ತಾಣಗಳಲ್ಲಿ ಈ ತಂತ್ರಾಂಶ ಬಳಕೆಗೆ ಲಭ್ಯವಾಗಲಿದೆ ಎಂದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಎಸ್.ಜಿ. ಸಿದ್ಧರಾಮಯ್ಯ 'ಹಿಂದಿನ ನುಡಿ ತಂತ್ರಾಂಶಗಳಲ್ಲಿ ಇದ್ದ ಲೋಪಗಳನ್ನು ಸರಿಪಡಿಸಲಾಗಿದೆ' ಎಂದರು. ಜಿ. ಪರಮೇಶ್ವರ, ಪಿ.ಟಿ. ಪರಮೇಶ್ವರ ನಾಯ್ಕ, ಹಂಪ ನಾಗರಾಜಯ್ಯ, ಕಮಲಾ ಹಂಪನಾ, ಮುಖ್ಯಮುಂತ್ರಿ ಚಂದ್ರು ಅವರು ಉಪಸ್ಥಿತರಿದ್ದರು.

### ಬರಹ ತಂತ್ರಾಂಶ

ಈ ಬರಹ ತಂತ್ರಾಂಶವನ್ನು ಶೇಷಾದ್ರಿವಾಸು ಚಂದ್ರಶೇಖರನ್ ೧೯೯೮ರಲ್ಲಿ ನಿರ್ಮಿಸಿದರು. ಇದು ನುಡಿ ತಂತ್ರಾಂಶದಂತೆ ಉಚಿತವಾದ ತಂತ್ರಾಂಶವಾಗಿದೆ. ಈ ತಂತ್ರಾಂಶದಲ್ಲಿ ಒಂದೂವರೆ ಲಕ್ಷ ಸಾಲುಗಳಿವೆ. ಕನ್ನಡವನ್ನು ಕಂಪ್ಯೂಟರಿಗೆ ಅಳವಡಿಸುವಲ್ಲಿ, ಕಂಪ್ಯೂಟರ್ ಮೂಲಕ ಕನ್ನಡವನ್ನು ಕಲಿಯಬೇಕೆನ್ನವರಿಗೆ ಈ ಬರಹ ಸಾಫ್ಟ್‌ವೇರ್ ತುಂಬಾ ಅನುಕೂಲವಾಗಿದೆ. ಕನ್ನಡದ ಮಟ್ಟಿಗೆ ಈ ತಂತ್ರಾಂಶ ಒಂದು ಅಮೂಲ್ಯವಾದ ತಂತ್ರಾಂಶವಾಗಿದೆ. ಬ ಬರಹ ಇಂಗಲಿಷ್ ವರ್ಣಮಾಲೆಗಳನ್ನು ಬಳಸಿ ಕಂಪ್ಯೂಟರ್ ಕಾರ್ಯಕ್ಷಮತೆಗೊಳಿಸುತ್ತಿದ್ದ ಹಳೆಯ ಪ್ಯಾಕೆಟ್‌ಗಳಿಗಿಂತ ಕನನಡದ ಸಂಕೇತಗಳನ್ನು ಬಳಸಿ ಗಣಕಯಂತ್ರವನ್ನು ಕಾರ್ಯ ಸಿದ್ಧಗೊಳಿಸಬಲ್ಲ ಶಕ್ತಿಯನ್ನು ಪಡೆದಿರುವ ಬರಹ ತಂತ್ರಾಂಶ ತುಂಬಾ ವಿಶಿಷ್ಟತೆಯನ್ನು ಪಡೆದಿದೆ.

ಕನ್ನಡದಲ್ಲಿ ಗಣಕಕ್ಕೆ ಆಜ್ಞೆಗಳನ್ನು ನೀಡಿ ಕಾರ್ಯ ಮಾಡಿಸಲು ಮಾದರಿಯಾದ ಬ-ಬರಹ ವಿಂಡೋ-೯೫ ಅಪರೇಟಿಂಗ್ ಸಿಸ್ಟ್‌ಂನಲ್ಲಿ ಮಾತ್ರ ಕಾರ್ಯಪ್ರವೃತ್ತವಾಗುತ್ತದೆ. ಬಣ್ಣದ ಗಣಕ ತೆರೆಯೂ ಅತಯಗತ್ಯ ಐ.ಬಿ.ಎಂ. ಸಂಸ್ಥೆಯ ಗಣಕಗಳಾದ ಎಟಿ ೪೮೭ ಅಥವಾ ೫೮೬ ಪೆಂಟಿಯಂ ಗಣಕಯಂತ್ರಗಳಲ್ಲಿ ಬಣ್ಣದ ಗಣಕ ತೆರೆ ಪಡೆದ ಐಬಿಎಂ ಗಣಕ ಅಥವಾ ಆಯಪಲ್ ಸಂಸ್ಥೆಯ ಮ್ಯಾಂಕಿಂಟೋಷ್ ಗಣಕದಲ್ಲಿ ಈ ಅಳವಡಿಕೆ ಸಾಧನ(ಕನ್ನಡ ಅಪ್ಲಿಕೇಷನ್ ಸಾಪ್ಟ್‌ವೇರ್) ಕಾರ್ಯ ನಿರ್ವಹಿಸದು. ಬ-ಬರಹದ ಹೆಸರಿನ ಸಾಲು ಮೇಲ್ತುದಿಯ ಎಡಬದಿಯಲ್ಲಿ ಕಾಣಿಸಿಕೊಳ್ಳುತ್ತದೆ. ಅದರ ಕೆಳಗಿನ ಸಾಲಿನಲ್ಲಿ ಕಡತ(ಫೈಲ್) ಸಂಕಲನ(ಎಡಿಟ್) ನೋಟ(ವ್ಯೂ) ಸಿದ್ಧತೆ(ಫಾರ್ಮೆಟ್) ಬಣ್ಣ(ಕಲರ್) ಸಹಾಯ(ಹೆಲ್ಪ್) ಪದಗಳು ಸಾಲಾಗಿ ಕಾಣಿಸುತ್ತದೆ. ಹೀಗೆ ಕ್ರಾಂತಿಕಾರ ರೀತಿಯಲ್ಲಿ ರೂಪ ಪಡೆದಿರುವ ಈ ಬ-ಬರಹ ಕನ್ನಡ ಅಳವಡಿಕೆ ಸಾಧನ ಡಿಟಿಪಿ ವಿಭಾಗದಲ್ಲಿ ಹಾಗೂ ಅಂತರಾಷ್ಟ್ರೀಯ ಜಾಲದಲ್ಲಿ ಕನ್ನಡ ಭಾಷೆಯಲ್ಲಿ ನಡೆಸುವ ಸಂವಹನ ಕ್ರಿಯೆಗೆ ಒಂದು ಹೊಸ ಆಯಾಮವನ್ನು ನೀಡಿದೆ ಎಂದೇ ಹೇಳಬಹುದು.

### ಕುವೆಂಪು ಕನ್ನಡ ತಂತ್ರಾಂಶ

ಕನ್ನಡ ತಂತ್ರಾಂಶದ ಸಮಸ್ಯೆಯು ಸಂಕೀರ್ಣವೂ ಜಟಿಲವೂ ಆಗಿರುವ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯವು ಕುವೆಂಪು ಕನ್ನಡ ತಂತ್ರಾಂಶ ೧.೦ ಎಂಬ ಕನ್ನಡ ತಂತ್ರಾಂಶವನ್ನು ಸಿದ್ಧಪಡಿಸುವ ಮೂಲಕ ಕನ್ನಡಿಗರ ಅಗತ್ಯ ಮತ್ತು ಅವಶ್ಯಕತೆಗಳನ್ನು ಪೂರೈಸುವ ಜವಾಬ್ದಾರಿಯನನು ಹೊತ್ತಿದೆ. ಕನ್ನಡ ಭಾಷಎಯು ತಂತ್ರಾಂಶ ಕ್ಷೇತ್ರದಲ್ಲಿ ಎದುರಿಸುತ್ತಿರುವ ಕೆಲವು ಸಮಸ್ಯೆಗಳನ್ನು ಮನಗಂಡು ಕನ್ನಡ ವಿಶ್ವವಿದ್ಯಾಲಯವು ನುರಿತ ತಂತ್ರಜ್ಞರ ನೆರವು ಪಡೆದು ಕುವೆಂಪು ಕನ್ನಡ ತಂತ್ರಾಂಶವನ್ನು ಸಿದ್ಧಪಡಿಸಿದೆ. ಈ ತಂತ್ರಾಂಶವು ಮುಖ್ಯವಾಗಿ ಮೂರು ರೀತಿಯ ವಿಶೇಷ ಸೌಲಭ್ಯಗಳನ್ನು ಹೊಂದಿದೆ.

೧. ಕನ್ನಡ ಭಾಷೆಗೆ ಒಗ್ಗುವ ವಿವಿಧ ಇಪ್ಪತ್ತು ನಮೂನೆಯ ಕನ್ನಡ ಅಕ್ಷರಗಳ (ಟಿಟಿಎಫ್ ಫಾಂಟ್ಸ್) ಸೌಲಭ್ಯ.

೨. ವಿವಿಧ ಇಪ್ಪತ್ತು ನಮೂನೆಯ ಅಂಚಿನ ವಿನ್ಯಾಸಗಳ ಫಾಂಟ್ಸ್‌ಗಳ (ಬಾರ್ಡರ್ ಡಿಸೈನ್‌ಗಳು) ಸೌಲಭ್ಯ.

೩. ಹೇಮಾವತಿ, ನೇತ್ರಾವತಿ, ಶರಾವತಿ, ಕಾವೇರಿ ಎಂಬ ನಾಲ್ಕು ಬಗೆಯ ಕೀಲಿಮಣೆ ವಿನ್ಯಾಸಗಳ ಅಳವಡಿಕೆ.

೪. ನಾಲ್ಕು ಪರಿವರ್ತಕಗಳನ್ನು ಹೊಂದಿದೆ. ಅಲ್ಲದೆ ಕರ್ನಾಟಕ ಸರ್ಕಾರವು ನಿಗದಿಪಡಿಸಿದ ಗ್ಲಿಪ್ ಹಾಗೂ ಕೀಲಿಣೆಯ ಶಿಷ್ಟತೆ ಹಾಗೂ ಏಕ ರೂಪತೆಗೆ ಅನುಗುಣವಾಗಿ ಈ ತಂತ್ರಾಂಶ ಇದೆ.[೨]

ಕುವೆಂಪು ಕನ್ನಡ ತಂತ್ರಾಂಶ ೧.೦ ಆವೃತ್ತಿಯ ಜೊತೆಗೆ ತಂತ್ರಾಂಶದ ಓಪನ್ ಸೋರ್ಸ್ ಕೋಡ್‌ನ್ನು ಉಚಿತವಾಗಿ ನೀಡಲಾಗುತ್ತಿದೆ. ಈ ಕ್ರಮವು ಕನ್ನಡ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಪ್ರಥಮ ಹೆಜ್ಜೆಯಾಗಿದೆ. ಈವರೆಗೂ ಕನ್ನಡ ಲಿಪಿ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸಿರುವ ತಂತ್ರಜ್ಞರು ಸೋರ್ಸ್‌ಕೋಡನ್ನು ನೀಡಿರುವುದಿಲ್ಲ. ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕನ್ನಡದ ಬೆಳವಣಿಗೆಗೆ ಸಹಾಯಕವಾಗಲು ವಿಶ್ವವಿದ್ಯಾಲಯವು ಓಪನ್ ಸೋರ್ಸ್‌ಕೋಡ್ ನೀಡುತ್ತಿದೆ. ಇದನ್ನು ಕನ್ನಡ ವಿಶ್ವವಿದ್ಯಾಲಯದ ಅಂತರ್ಜಾಲ ತಾಣದಲ್ಲಿ ಉಚಿತವಾಗಿ ಪಡೆಯಬಹುದಾಗಿದೆ. ಈ ತಂತ್ರಾಂಶದ ಹಿಂದಿನ ರೂಪಿಕೆಯ ಪ್ರಮುಖ ರುವಾರಿ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ವಿಂಡೋಸ್ ೯೮, ೨೦೦೦ ಎನ್.ಟಿ. ಎಕ್ಸ್‌ಪಿ, ಮಿಲೇನಿಯಂ, ವಿಸ್ತಾ ಈ ಎಲ್ಲಾ ಆವತರಣಿಕೆಗಳಲ್ಲಿ ಇದು ಕೆಲಸ ಮಾಡುತ್ತದೆ. ಕನಿಷ್ಠ ೧೨೮ ಎಂ.ಬಿ. ಸಾಮರ್ಥ್ಯದ ರ್‍ಯಾಮ್ ೮೦೦, ಮೆ.ಹ. ಅಥವಾ ಅದಕ್ಕಿಂತ ಮೇಲ್ಪಟ್ಟ ಪ್ರೊಸೆಸರ್ ಇದಕ್ಕೆ ಅಗತ್ಯ.

**ಕಣಜ ತಂತ್ರಾಂಶ**

ಕನ್ನಡ ಕಲಿಕೆಗೆ ಉತ್ತಮ ಅವಕಾಶ ಕಲ್ಪಿಸಲು ಹಾಗೂ ಜನಸಾಮಾನ್ಯರಿಗೆ ಮುಕ್ತ ಜ್ಞಾನವನ್ನು ತಲುಪಿಸುವ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಕಣಜ ತಂತ್ರಾಂಶವನ್ನು ಜಾರಿಗೆ ತಂದಿದೆ. ಈ ಒಂದು ತಂತ್ರಾಂಶ ಮುಕ್ತ ತಂತ್ರಾಂಶವಾಗಿದೆ. ಕಣಜವು ಕರ್ನಾಟಕ ಸರ್ಕಾರದ ಜ್ಞಾನ ಆಯೋಗದ ಪರಿಕಲ್ಪನೆಯಂತೆ ರೂಪಿಸಿ, ಪ್ರಸಕ್ತ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಜಾರಿಗೊಳಿಸುತ್ತಿರುವ ಅಂತರಜಾಲ ಕನ್ನಡ ಜ್ಞಾನಕೋಶವಾಗಿದೆ. ಎಲ್ಲಾ ಜ್ಞಾನ ಸಾಹಿತ್ಯವನ್ನು ಕಲಿಕೆಗೆ ಕನ್ನಡದಲ್ಲಿ ಸಾರ್ವಜನಿಕರಿಗೆ ನೀಡುವುದು ಯೋಜನೆಯ ಉದ್ದೇಶವಾಗಿದೆ. ಈ ಕಣಜ ಅಂತರಜಾಲದಲ್ಲಿ ವಚನ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಮಾಹಿತಿ ಹಾಗೆಯೇ ಸಾಲಾ ಪಠ್ಯಪುಸ್ತಕಗಳು, ಜ್ಞಾನಪೀಠ ಪುರಸ್ಕೃತರ ಕೃತಿಗಳು ಕರ್ನಾಟಕ ಗ್ಯಾಸೆಟಿಯರ್, ಮಕ್ಕಳ ಸಾಹಿತ್ಯ, ನಿಯತಕಾಲಿಕೆಗಳು, ಕೃಷಿ ಪರಿಸರ ವಿಜ್ಞಾನ-ತಂತ್ರಜ್ಞಾನ ಕಲೆ ಮತ್ತು ಸಂಸ್ಕೃತಿ, ಧ್ವನಿ

ಚಿತ್ರಸಂಪುಟ, ಮುಂತಾದವು. ಕಣಜ ಅಂತರಜಾಲದಲ್ಲಿ ಲಭ್ಯವಾಗುವಂತಹವುದಾಗಿವೆ. ಕಣಜ ಅಂತರಜಾಲದಲ್ಲಿ ಇತ್ತೀಚೆಗೆ ಕೆಲವೊಂದು ವಿಷಯಗಳು ಸೇರ್ಪಡೆಯಾಗಿವೆ. ಸೂಕ್ಷ್ಮಾಣು ಜೀವಿಗಳ ಲೋಕನ ತೀವ್ರವಾದಿ, ಮಕ್ಕಳ ಮೇಲೆ ಸೈಬರ್ ಅಪರಾಧಿಗಳ ದೌರ್ಜನ್ಯ ಪ್ರೊಟೋ ಝೋವಾ ಎಂಬ ಪುಟ್ಟ ಪ್ರಾಣಿಯ ಪ್ರವರ, ಕದಂಬರು ಮತ್ತು ಕುಂತಲೇಶ್ವರ ದೌತ್ಯ ಮುಂತಾದ ವಿಷಯಗಳು ಸೇರ್ಪಡೆಯಾಗಿವೆ. ಈ ಅಂತರಜಾಲದಿಂದ ಸಾಹಿತ್ಯ ಬರವಣಿಗೆಯ ಆಸಕ್ತರು ತಾವು ರಚಿಸಿದ ಸಾಹಿತ್ಯವನ್ನು ಓದುಗ ವಲಯಕ್ಕೆ ಸಮರ್ಪಿಸಬಹುದು. ಹಾಗೆಯೇ ಸಾಹಿತ್ಯ ತಿಳಿಯುವಂತಹವರು ಈ ಒಂದು ಅಂತರಜಾಲದಿಂದ ಸಾಹಿತ್ಯಕ್ಕೆ ಸಂಬಂಧಿಸಿದಂತಹ ಮಾಹಿತಿಯನ್ನು ಪಡೆದುಕೊಳ್ಳಬಹುದು. ಇಂತಹ ಅನುಕೂಲವು ಕಣಜ ಅಂತರಜಾಲದಿಂದ ಜನಸಾಮಾನ್ಯರಿಗೆ ಇರುವಂತಹದಾಗಿದೆ.

**ಕನ್ನಡ ಸೌರಭ ತಂತ್ರಾಂಶ**

ಇನ್ನೊಬ್ಬರ ಅಂದರೆ ಗುರುಗಳ ಅಥವಾ ಮಾರ್ಗದರ್ಶಕರ ನೆರವಿಲ್ಲದೆ, ಕಡಿಮೆ ವೇಳೆಯಲ್ಲಿ, ಅತ್ಯಂತ ಕ್ಷಿಪ್ರಗತಿಯಲ್ಲಿ ಕನ್ನಡ ಕಲಿಯಲು ಈ ತಂತ್ರಾಂಶವನ್ನು ರೂಪಿಸಲಾಗಿದೆ. ಇದನ್ನು ರೂಪಿಸಿದವರು ಭಾಗೂರು ಮಾರ್ಕಂಡೇಯ. ಎಂಟು ವರ್ಷಗಳ ಸತತ ಪರಿಶ್ರಮದಿಂದ 'ಕನ್ನಡ ಸೌರಭ' ಹೆಸರಿನ ಕಲಿಕಾ ತಂತ್ರಾಂಶವನ್ನು ಸಿದ್ಧಪಡಿಸಿದ್ದಾರೆ.

"ಕಂಪ್ಯೂಟರ್ ಪರದೆ ಮೇಲೆ ಮೂಡುವ ಚಿಹ್ನೆಗಳ(ಐಕಾನ್) ಮೇಲೆ ಮೌಸ್ ಒತ್ತಿದರೆ ಕನ್ನಡ ಸೌರಭ ತಂತ್ರಾಂಶದಲ್ಲಿನ ಪಾಠಗಳ ಪರಿವಿಡಿ, ಪರದೆ ಮೇಲೆ ಅನಾವರಣಗೊಳ್ಳುತ್ತದೆ. ಪಾಠ ಕಲಿಯಲು ಬಳಸಿರುವ ಬಣ್ಣಗಳೂ ನೋಡಲು ಹಿತಕರವಾಗಿದೆ. ಪ್ರತಿ ಅಂಕಿ ಮತ್ತು 'ಅ'ಕಾರದಿ ಅಕ್ಷರಗಳಿಗೆ ಅರ್ಥಪೂರ್ಣ ಕವಿತೆ ರಚಿಸಿ ಸಂಗೀತ ಸಂಯೋಜಿಸಿ ಇಂಪಾಗಿ ಹಾಡಲಾಗಿದೆ."[೧೩] ಶಿಕ್ಷಣ ಮತ್ತು ಕಲಾ ಕ್ಷೇತ್ರದಲ್ಲಿನ ಪರಿಣಿತರು ಅರಗಿಸಿಕೊಳ್ಳುವಂತೆ ಮಾಡಲು ಶ್ರಮಿಸಿದ್ದಾರೆ. ಕನ್ನಡ ಕಲಿಸುವ ಈ ತಂತ್ರಾಂಶದ ನೆರವಿನಿಂದ ಯಾರೇ ಆಗಲಿ ಸುಲಭವಾಗಿ ಕನ್ನಡ ಕಲಿಯಬಹುದು. ಚಿಣ್ಣರನ್ನು ದೃಷ್ಟಿಯಲ್ಲಿಟ್ಟುಕೊಂಡೇ ಈ ಸಾಫ್ಟ್‌ವೇರ್ ರೂಪಿಸಲಾಗಿದೆ. ಈ ಉದ್ದೇಶಕ್ಕೆ ಚಿತ್ರ, ಕವಿತೆ, ಹಿನ್ನೆಲೆ ಸಂಗೀತ, ಧ್ವನಿ ಉಚ್ಚಾರಣೆ ಚಿತ್ರಗಳ ಚಲನೆಗೆ ಅನಿಮೇಷನ್ ಬಳಸಿಕೊಂಡಿರುವುದು. ಇವರ ಹೆಗ್ಗಳಿಕೆಯಾಗಿದೆ. ಮಕ್ಕಳು ಮತ್ತು ಅನ್ಯ ಭಾಷಿಕರಿಗೂ ಇದು ಮೆಚ್ಚುಗೆ ಆಗಲಿದೆ. ಪ್ರಾಥಮಿಕ ಶಾಲೆಯ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮದ ಮಕ್ಕಳಿಗೆ ಕನ್ನಡ ಭಾಷೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಕಲಿಸಲು ಇದರಿಂದ ಸಾಧ್ಯವಾಗಲಿದೆ.

**ಕಲಿತ**

'ಕಲಿತ ಸಾಫ್ಟ್‌ವೇರ್' ಕಂಪ್ಯೂಟರಿನಲ್ಲಿ ಬಳಸಲು ಲಭ್ಯವಿರುವ ಏಕೈಕ ಮಾನಕ ತಂತ್ರಾಂಶ.(ಬೆಂಚ್ ಮಾರ್ಕ್ ಸಾಫ್ಟ್‌ವೇರ್) ಕಲಿತ ಸಾಫಟ್‌ವೇರ್ ಈ ವೆಚ್ಎ ಲೆಬಲ್ ಆಗಿ

ವೆಬ್‌ಸೈಟಿನಲ್ಲಿಯೇ ದೊರಕುವುದರಿಂದ ಬೇಕೆಂದಾಗ ಡೌನ್‌ಲೋಡ್ ಮಾಡಿಕೊಳ್ಳುವ ಸೌಲಭ್ಯವಿದೆ. ಹೀಗಾಗಿ ಹಿಂದಿನಂತೆ ಸಾವಿರಾರು ರೂಪಾಯಿ ಖರ್ಚು ಮಾಡಿ ಹೊಸ ತಂತ್ರಾಂಶ ಖರೀದಿಸುವ ಸಮಸ್ಯೆಯಿಲ್ಲ. ಇಂಥ ಒಂದು ಉಪಯುಕ್ತ ಮತ್ತು ಉಚಿತವಾದ ಭಾಷಾ ಸಾಫ್ಟ್‌ವೇರ್‌ನ್ನು ಅಭಿವೃದ್ಧಿಪಡಿಸುವ ಮೂಲಕ ಕರ್ನಾಟಕ ಸರ್ಕಾರವು ದೇಶದಲ್ಲಿಯೇ ಅಗ್ರಸ್ಥಾನದಲ್ಲಿದೆ. ಕಂಪ್ಯೂಟರಿನಲ್ಲಿ ಕನ್ನಡವನ್ನು ಅಳವಡಿಸುವ ನಿಟ್ಟಿನಲ್ಲಿ ಕ್ರಾಂತಿಕಾರಿಯಾದ ಹೆಜ್ಜೆಯನ್ನಿಟ್ಟಿದೆ. ಮೈಕ್ರೋಸಾಫ್ಟ್ ಕಾರ್ಪೋರೇಷನ್ ಅವರು ವಿಂಡೋಸ್ ಮೂಲಕ ಸಂಪೂರ್ಣ ಕನ್ನಡಮಯ ಕಂಪ್ಯೂಟರ್ ಸಿಸ್ಟಮನ್ನು ತಯಾರಿಸಿದ್ದು ಗಮನಾರ್ಹ. ಇದುವರೆಗೆ ಬರೀ ಶಬ್ದ ಸಂಸ್ಕರಣೆಯನ್ನು ಅವು ತೀವ್ರವಾಗಿ ಪರಿಗಣಿಸಿರಲಿಲ್ಲ. "ಕಲಿತ ಸಾಫ್ಟ್‌ವೇರ್ ಶಿಷ್ಟತೆ ಹಾಗೂ ಏಕರೂಪತೆಯನ್ನು ಪಡೆದುಕೊಳ್ಳುವ ಮೂಲಕ ಅಂಥ ಒಂದು ಕೊರತೆಯನ್ನು ತುಂಬಿಕೊಟ್ಟಿದೆ. ಕನ್ನಡದಲ್ಲಿ ಅಕಾರಾದಿ, ಸೂಚೀಕರಣದಂತಹ ಬಹುಮುಖ್ಯ ಸಾಧ್ಯತೆಗಳನ್ನು ಈ ತಂತ್ರಾಂಶ ಒದಗಿಸಿಕೊಟ್ಟಿದೆ."[೧೪]

**ಕ ಮತ್ತು ಬ ಬರಹಗಳು**

ಕನ್ನಡ ಖ್ಯಾತ ಬರಹಗಾರ ಅನಕೃ ಅವರ ನೆನಪಿನಲ್ಲಿ ಕ ಬರಹವನ್ನು ಕೆಪಿರಾವ್ ಅವರು ಅಭಿವೃದ್ಧಿ ಪಡಿಸಿದ್ದಾರೆ. ಕನ್ನಡವನ್ನು ಕಂಪ್ಯೂಟರಿಗೆ ಅಳವಡಿಸುವಲ್ಲಿ, ಕಂಪ್ಯೂಟರ್ ಮೂಲಕ ಕನ್ನಡವನ್ನು ಕಲಿಯಬೇಕೆನ್ನುವುರಿಗೆ ಈ ಎರಡು ಸಾಫ್ಟ್‌ವೇರ್‌ಗಳು ತುಂಬಾ ಅನುಕೂಲವಾಗಿವೆ. ಈ ಎರಡೂ ತಂತ್ರಾಂಶಗಳು ಕನ್ನಡದಲ್ಲಿ ಅಪಾರ ತಾಂತ್ರಿಕ ಸಾಧ್ಯತೆಗಳನ್ನು ತೆರೆದಿಟ್ಟಿವೆ. ಕನ್ನಡದ ಮಟ್ಟಿಗೆ ಇವು ಅನೂಲ್ಯ ರತ್ನಗಳಾಗಿವೆ. ಅಂತರಾಷ್ಟ್ರೀಯ ಗಣಕ ಜಾಲದಲ್ಲಿ(ಇಂಟರ್‌ನೆಟ್) ಬಿಡಲಾಗಿರುವ ಇವು ಕೇಳಿದ್ದನ್ನು ಕೊಡಬಲ್ಲ ಕಲ್ಪತರುಗಳಾಗಿವೆ. ಕ-ಬರಹದ ಪರಿಷ್ಕೃತ ಆವೃತ್ತಿ ಬ-ಬರಹ ಇಂಗ್ಲಿಷ್ ವರ್ಣಮಾಲೆಗಳನ್ನು ಬಳಸಿ ಕಂಪ್ಯೂಟರ್‌ನ್ನು ಕಾರ್ಯಕ್ಷಮತೆಗೊಳಿಸುತ್ತಿದ್ದ ಹಲೆ ಪ್ಯಾಕೇಜ್‌ಗಳಿಗಿಂತ ಕನ್ನಡದ ಸಂಕೇತಗಳನ್ನೇ ಬಳಸಿ ಗಣಕಯಂತ್ರವನ್ನು ಕಾರ್ಯ ಸಿದ್ಧಗೊಳಿಸಬಲ್ಲ ಶಕ್ತಿಯನ್ನು ಪಡೆದಿರುವ ವ ಕ ಮತ್ತು ಬರಹಗಳು ತುಂಬಾ ವಿಶಿಷ್ಟತೆಯನ್ನು ಪಡೆದಿವೆ.

ಮತ್ತೊಬ್ಬರ ಕೈಬರಹಗಳನ್ನು ಕಷ್ಟಪಟ್ಟು ಓದಬೇಕಾದ ಪರಿಸ್ಥಿತಿಗೆ ಈ ತಂತ್ರಾಂಶಗಳು ಸಂಜೀವನಿಯಾಗಿವೆ. ನೇರವಾಗಿ ಗಣಕ ತೆರೆಯ ಮೇಲೆ ಲೇಖನವನ್ನು ಬರೆಯುವ ಸಾಧ್ಯತೆಗಲು ಇಲ್ಲಿವೆ. ಕೈಗೆ ಮಸಿ ಅಂಟುವ, ಅಕ್ಷರಗಳು ಚಿತ್ತಾಗುವ ಪ್ರಮೇಯವೇ ಇಲ್ಲಿಲ್ಲ. ಎಲ್ಲವೂ ಶಿಸ್ತು ಹಾಗೂ ಸುಂದರ. ಇಂಗ್ಲಿಷ್ ಟೈಪಿಂಗ್ ಬರುವ ಯಾರಾದರೂ ಗಣಕದ ಮೂಲಕ ಕನ್ನಡದಲ್ಲಿ ಬರೆಯಬಹುದಾಗಿದೆ. ಸರಳವಾಗಿ ಹೇಳುವುದಾದರೆ ಗಣಕಯಂತ್ರದ ಬಿಳಿಯ ಬಣ್ಣದ ತೆರೆಯ ಭಾಗದಲ್ಲಿ ನಈವು ಆಂಗ್ಲ ಭಾಷೆಯಲ್ಲಿ ಬೆರಳಚ್ಚಿಸಿದರೆ ಆ ಆಂಗ್ಲ ಅಕ್ಷರಗಳ ಹಳದಿ ಭಾಗದ ತೆರೆಯಲ್ಲಿ ಕನ್ನಡ ಅಕಷರಗಳಾಗಿ ರೂಪ ತಳೆಯುತ್ತ ಹೋಗುತ್ತದೆ. ಇದೇ ಗಣಕಯಂತ್ರದ

ಚೋದ್ಯವಾಗಿದೆ. ಈ ಮೂಲಕ ಕನ್ನಡ ಭಾರದವರೂ ಕನ್ನಡ ಬರವಣಿಗೆ ಮತ್ತು ಉಚ್ಚಾರಗಳನ್ನು ಕಲಿಯಬಹುದಾಗಿದೆ. ಇಂಡಿಯನ್ ಇನ್ಸಿಟ್ಯೂಟ್ ಇತ್ತೀಚೆಗೆ ಬ-ಬರಹದ ಕನ್ನಡ ಅಕ್ಷರಗಳನ್ನು ಓದಬಲ್ಲ ಮಲ್ಟಿಮೀಡಿಯ ಸಾಫ್ಟ್‌ವೇರ್‌ಗಳನ್ನು ರೂಪಿಸಿರುವುದು ಬ-ಬರಹದ ಉಪಯುಕ್ತತೆಯನ್ನು ಇನ್ನೂ ಹೆಚ್ಚಿಸಿದೆ.

ಕನ್ನಡದಲ್ಲಿ ಗಣಕಕ್ಕೆ ಆಜ್ಞೆಗಳನ್ನು ನೀಡಿ ಕಾರ್ಯಮಾಡಿಸಲು ಮಾದರಿಯಾದ ಬ-ಬರಹ ವಿಂಡೋ-೯೫ ಅಪರೇಟಿಂಗ್ ಸಿಸ್ಟಂನಲ್ಲಿ ಮಾತ್ರ ಕಾರ್ಯಪ್ರವೃತ್ತವಾಗುತ್ತದೆ. ಬಣ್ಣದ ಗಣಕ ತೆರೆಯೂ ಅತ್ಯಗತ್ಯ ಐಬಿಎಂ ಸಂಸ್ಥೆಗಳಾದ ಎಟಿ ೪೮೬ ಅಥವಾ ಎಟಿ ೫೮೬ ಪೆಂಟಿಯಂ ಗಣಕಯಂತ್ರಗಳಲ್ಲಿ ಬಣ್ಣದ ಗಣಕತೆರೆ ಪಡೆದ ವಿಂಡೋ-೯೫ ಇರುವ ಗಣಕದಲ್ಲಿ ಮಾತ್ರ ನಿರ್ವಹಿಸುತ್ತದೆ. ಕಪ್ಪು ಬಿಳುಪು ಗಣಕ ತೆರೆ ಪಡೆದ ಐಬಿಎಂ ಗಣಕ ಅಥವಾ ಆಯಪಲ್ ಸಂಸ್ಥೆಯ ಮ್ಯಾಕಿಂಟೋಷ್ ಗಣಕದಲ್ಲಿ ಈ ಅಳವಡಿಕೆ ಸಾಧನ (ಕನ್ನಡ ಅಪ್ಲಿಷೇಶನ್ ಸಾಫ್ಟ್‌ವೇರ್) ಕಾರ್ಯ ನಿರ್ವಹಿಸದು. ಕ-ಬರಹ ಅಥವಾ ಬ-ಬರಹದ ಆಜ್ಞಾ ಆಕೃತಿಯ ಚಿತ್ರವನ್ನು ಎರಡು ಸಲ (ಮೂಷಕದ ಗುಂಡಿಯನ್ನು) ಕ್ಲಿಕ್ಕಿಸಿದರೆ ಕ-ಬರಹ ಅಥವಾ ಬ-ಬರಹ ಹೆಸರಿನ ಸಾಲು ಮೇಲ್ತುದಿಯ ಎಡಬದಿಯಲ್ಲಿ ಕಾಣಿಸಿಕೊಳ್ಳುತ್ತದೆ. ಅದರ ಕೆಳಗಿನ ಸಾಲಿನಲ್ಲಿ ಕಡತ(ಫೈಲ್) ಸಂಕಲನ(ಎಡಿಟ್), ನೋಟ(ವ್ಯೂ) ಸಿದ್ಧತೆ(ಫಾರ್ಮೆಟ್) ಬಣ್ಣ(ಕಲರ್) ಸಹಾಯ(ಹೆಲ್ಫ್) ಪದಗಳು ಸಾಲಾಗಿ ಕಾಣಿಸುತ್ತದೆ.[೧೫]

ಹೀಗೆ ಕ್ರಾಂತಿಕಾರಕ ರೀತಿಯಲ್ಲಿ ರೂಪ ಪಡೆದಿರುವ ಈ ಬ-ಬರಹ ಕನ್ನಡ ಅಳವಡಿಕೆ ಸಾಧನ ಡಿಟಿಪಿ ವಿಭಾಗದಲ್ಲಿ ಹಾಗೂ ಅಂತರಾಷ್ಟ್ರೀಯ ಜಾಲದಲ್ಲಿ ಕನ್ನಡ ಭಾಷೆಯಲ್ಲಿ ನಡೆಸುವ ಸಂವಹನ ಕ್ರಿಯೆಗೆ ಒಂದು ಹೊಸ ಆಯಾಮ ನೀಡಿದೆ ಎಂದೇ ಹೇಳಬೇಕು.

ಈ ತಂತ್ರಾಂಶಗಳಲ್ಲದೆ ಆಕೃತಿ, ಶ್ರೀಲಿಪಿ, ಕೆಬಿಲಿಪಿ, ಲೀಪ್‌ಲೈಟ್, ಲೀಪ್ ಆಫೀಸ್ ಮೊದಲಾದ ಕನ್ನಡ ಸಂಬಂಧಿ ಅಪ್ಲಿಕೇಶನ್ ಸಾಫ್ಟ್‌ವೇರ್‌ಗಳು ಬಳಕೆಗೆ ಬಂದಿವೆ. ಇವುಗಳೆಲ್ಲವು ನುಡಿ, ಬರಹ, ಕುವೆಂಪು ತಂತ್ರಾಂಶದ ಹಾಗೆ ಮುಕ್ತವಾಗಿ ಸಮುದಾಯಕ್ಕೆ ದೊರಕಬೇಕಾಗಿದೆ. ಇದರಿಂದ ಕನ್ನಡ ಸಂಬಂಧಿ ಕಾರ್ಯ ನಿರ್ವಹಿಸಲು ಹೆಚ್ಚು ಹೆಚ್ಚು ಸಾಧ್ಯವಾಗುತ್ತದೆ.

ಕನ್ನಡ ಭಾಷೆಯಲ್ಲಿ ಬರಹ ಮತ್ತು ನುಡಿ ಎನ್ನುವ ತಂತ್ರಾಂಶಗಳು ಉಚಿತವಾಗಿ ಲಭ್ಯವಿದ್ದು, ಇವುಗಳನ್ನು ಬಳಸಲು ಇಂಗ್ಲಿಷ್ ಭಾಷೆಯಲಲಿರುವ ಆಪರೇಟಿಂಗ್ ಸಿಸ್ಟಂಗಳನ್ನು ಉಪಯಿಗಿಸಬೇಕಾಗಿದೆ.

ಕಂಪ್ಯೂಟರ್ ತಂತ್ರಾಂಶದಲ್ಲಿ ಸಾಮಾನ್ಯವಾಗಿರುವ ಮಾಲಿಕತ್ವ ಹೊಂದಿದ ಲೈಸೆನ್ಸ್ ಆಧಾರಿತ ತಂತ್ರಾಂಶಗಳನ್ನು ಕೊಳ್ಳಲು ಬೆಲೆ ತೆರಬೇಕು. ಬಹುತೇಕ ಎಲ್ಲರೂ ಬಳಸುತ್ತಿರುವ ಎಂ.ಎಸ್. ವಿಂಡೋಸ್ ತಂತ್ರಾಂಶವು ಈ ಬಗೆಯದಾಗಿದ್ದು, ಇದಕ್ಕೆ ಮಾಲೀಕತ್ವ ತಂತ್ರಾಂಶವೆಂದು ಕರೆಯುತ್ತಾರ? ಇಂತಹ ಸಾಫ್ಟ್‌ವೇರ್‌ಗಳನ್ನು (ಬಳ) ನಕಲು ಮಾಡಿ ಬಳಸುವುದು

ಅಪರಾಧವಾಗುತ್ತದೆ. ಈಗ ಲಭ್ಯವಿರುವ ಕನ್ನಡ ಲಿಪಿ ತಂತ್ರಾಂಶಗಳು ಲೈಸೆನ್ಸ್ ಆಧಾರಿತವಾಗಿದ್ದು ವೆಚ್ಚ ತಗಲುವುದು. ಬೆರಳಚ್ಚು ಕೀಬೋರ್ಡ್‌ಗಳು ತಂತ್ರಾಂಶದಿಂದ ತಂತ್ರಾಂಶಕ್ಕೆ ಬೇರೆ ಬೇರೆಯಾಗಿವೆ. ವರ್ಷದಿಂದ ವರ್ಷಕ್ಕೆ ಸಾಫ್ಟ್‌ವೇರ್ ಅಭಿವೃದ್ಧಿಗೊಂಡ ಬಗ್ಗೆ ಮತತು ಅವುಗಳನ್ನು ಅಳವಡಿಸುವ ಬಗ್ಗೆ ಭರವಸೆ ಇರುವುದಿಲ್ಲ. ಲೈಸನ್ ಪದ್ಧತಿಯ ಸಾಫ್ಟ್‌ವೇರ್ ತಯಾರಿಕರಿಗೆ ಹಣಗಳಿಗೆ ಮುಖ್ಯವೇ ಹೊರತು ಬಳಕೆದಾರರಿಗೆ ಅನುಕೂಲವಾಗುವ ಭಾಷೆಯಲ್ಲಿ ತಯಾರಿಸಿ ಕೊಡಲು ಸಿದ್ದರಿಲ್ಲ. ವಿಂಡೋಸ್ ಸಾಫ್ಟ್‌ವೇರ್‌ನಲ್ಲಿ ಕನ್ನಡ ಮತ್ತು ಇತರೆ ಭಾರತೀಯ ಭಾಷೆಗಳ ಯೂನಿಕೋಡ್ ತಾಂತ್ರಿಕತೆ ಬಳಸಿದದು ಅವುಗಳನ್ನು ಉಪಯೋಗಿಸಲು ಸಾಫ್ಟ್‌ವೇರ್ ತಯಾರಿಸಲು ಎಂ.ಎಸ್. ವಿಂಡೋಸ್ ಕಂಪನಿಗೆ ಲೈಸೆನ್ಸ್‌ಗಾಗಿ ಶುಲ್ಕ ತೆರಬೇಕಾಗುವುದು. ಅಲ್ಲದೆ ಇತರೆ ಸಾಫ್ಟ್‌ವೇರ್‌ಗಳನ್ನು ಎರವಲು ಪಡೆಯಲು ಹಣ ಕೊಡಬೇಕಾಗಿರುವುದರಿಂದ ಖಾಸಗಿಯವರು ಈ ಪ್ರಯತ್ನಗಳಿಗೆ ಮುಂದೆ ಬರುತ್ತಿಲ್ಲ. ಲೈಸನ್ಸ್ ಪದ್ಧತಿಯಲ್ಲಿ ಸಾಫ್ಟ್‌ವೇರ್ ತಯಾರಿಸಿದಲ್ಲಿ ಕೊಳ್ಳುವವರಿಗೆ ದುಬಾರಿ ವೆಚ್ಚ ತಗಲುವುದು.

ಎಂ.ಎಸ್. ವಿಂಡೋಸ್ ಮತ್ತಿತರ ಲೈಸೆನ್ಸ್/ಮಾಲೀಕತ್ವದ ಪದ್ಧತಿಯ ತಂತ್ರಾಂಶಗಳ ಬಳಕೆಯಿಂದ ತಂತ್ರಾಂಶಗಳ ಗುಲಾಮಗಿರಿ ಪರಿಣಾಮಗಳನ್ನು ತೊಡೆಯಲು ಕಳೆದ ಇಪ್ಪತ್ತು ವರ್ಷಗಳಿಂದ ತೆರೆದ ಮುಕ್ತ ತಂತ್ರಾಂಶಗಲನ್ನು ಅಭಿವೃದ್ಧಿ ಪಡಿಸುತ್ತಾ ಬಂದಿದ್ದಾರೆ.

ತೆರೆದ/ಮುಕ್ತ ತಂತ್ರಾಂಶದಲ್ಲಿ ಉಚಿತವಾಗಿ ಬಳಸುವ/ಇತರರಿಗೆ ಹಂಚಿಕೊಳ್ಳುವ, ಅಭಿವೃದ್ಧಿಪಡಿಸುವ ಹಕ್ಕು ಸ್ವಾಂತತ್ರ ಇರುತ್ತದೆ. ಕಳೆದ ವರ್ಷದಿಂದ ಭಾರತದಾದ್ಯಂತ ಭಾರತೀಯ ಭಾಷೆಗಳಲ್ಲಿ ತಂತ್ರಾಂಶ ಅಭಿವೃದ್ಧಿಪಡಿಸುವ ಚಟುವಟಿಕೆಗಳು ನಡೆಯುತ್ತಿವೆ. ಈ ಚಟುವಟಿಕೆಗಳಿಗೆ ಆಧಾರ ಜಿಎನ್‌ಯು/ಲಿನಕ್ಸ್ ಎನ್ನುವ ತೆರೆದ ಮುಕ್ತ ತಂತ್ರಾಂಶ.[೧೬]

ಲಿನಕ್ಸ್ ತೆರೆದ/ಮುಕ್ತ ತಂತ್ರಾಂಶವು ಸಾಂಸ್ಕೃತಿಕ ದೃಷ್ಟಿಯಿಂದ ಮುಖ್ಯವಾಗಿದೆ. ಸ್ಥಳೀಯ ಸಂಸ್ಕ-ತಿ ಭಾಷೆಗಳಿಗೆ ಅನುಗುಣವಾದ ಚೌಕಟ್ಟಿನೊಳಗೆ ಕಂಪ್ಯೂಟರ್ ನಿರ್ವಹಣಾ ತಂತ್ರಾಂಶ ತಯಾರಿಸಲು ತೆರೆದ ತಂತ್ರಾಂಶ ತಂತ್ರಜ್ಞಾನ ಉಪಯೋಗಿಸಬಹುದಾಗಿದೆ. ಇದರಿಂದ ಸೀಮಿತ ಪ್ರದೇಶದ ಅಲ್ಪ ಜನಸಂಖ್ಯೆ ಭಾಷಿಕರ ಅನುಕೂಲಗಳಿಗೆ ಒಗ್ಗುವ ಹಾಗೆ ತಂತ್ರಾಂಶ ರೂಪಿಸುವ ಅವಕಾಶ ದೊರಕುವುದಲ್ಲದೆ ಅಲ್ಪ ವೆಚ್ಚದಲ್ಲಿ ತಂತ್ರಾಂಶ ತಯಾರಿಕೆ ಸಾಧ್ಯವಾಗುವುದು.

ಕನ್ನಡಕ್ಕೆ ಸಂಬಂಧಿಸಿದಂತೆ ಲಿನಕ್ಸ್‌ದಲ್ಲಿ ಕನ್ನಡ ಕೀಬೋರ್ಡ್ ಅಳವಡಿಸಲಾಗಿದ್ದು, ಓಪನ್ ಆಫೀಸ್ ತಂತ್ರಾಂಶದಲ್ಲಿ ಭಾಗಶಃ ಕನ್ನಡ ಲಿಪಿಯ ಬಳಕೆ ಮಾಡಲಾಗಿದೆ. ಇನ್ನು ಲಿಟಾಕಲಾದಿ ಅವಲೋಕಿಸಿದಾಗ ಲಭ್ಯವಿರುವ ಎಲ್ಲಾ ಕೀಬೋರ್ಡ್ ವಿನ್ಯಾಸಗಳನ್ನು ಬಳಕೆದಾರರ ಅನುಕೂಲಕ್ಕೆ ಆಯ್ಕೆ ಮಾಡುವ ಸ್ವಾತಂತ್ರವಿರುವಂತೆ ಅಭಿವೃದ್ಧಿ ಪಡಿಸಿದರೆ ಕೀಬೋರ್ಡ್‌ಗಳ ಗೊಂದಲಕ್ಕೆ ಪರಿವಾರವಾಗುವುದು.

ಮುಂದಿನ ದಿನಗಳಲ್ಲಿ ಕೀಬೋರ್ಡ್‌ಗಳ(ಗೊಂದಲ್ಲಕ್ಕೆ ಪರಿಹಾರ) ಅವಶ್ಯಕತೆಯಿಲ್ಲದಂತೆ ಕಂಪ್ಯೂಟರ್‌ನಲ್ಲಿ ಲಿಪಿ ಮೂಡಿಸುವ ತಂತ್ರಜ್ಞಾನ ಬರಲಿದೆ. ಕೈಬರವಣಿಗೆಯನ್ನು ಗುರುತಿಸಿ ಅದಕ್ಕೆ ತಕ್ಕಂತೆ ಅಕ್ಷರಗಳನ್ನು ಕಂಪ್ಯೂಟರ್ ಸ್ಕ್ರೀನ್‌ನಲ್ಲಿ ಮೂಡಿಸುವ ಮುದ್ರಿಸುವ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸುತ್ತಿದ್ದಾರೆ. ಮರಾಠಿ, ಹಿಂದಿ, ಗುಜರಾತಿಗಳಲ್ಲಿ ಕೈಬರಹ ಗುರುತಿಸಿ ಲಿಪಿ ಮೂಡಿಸುವ ಮುದ್ರಿಸುವ ತಂತ್ರಾಂಶ ಅಭಿವೃದ್ಧಿ ಪಡಿಸಿದ್ದು, ಆಸಕ್ತರಿಗೆ ತಂತ್ರಾಂಶ ಉಚಿತವಾಗಿ ಲಭ್ಯವಿದೆ. ಮುಂದಿನ ದಿನಗಳಲ್ಲಿ ಕಂಪ್ಯೂಟರ್ ಮತ್ತು ಸ್ಕ್ರೀನ್ ಅವಶ್ಯಕತೆ ಇಲ್ಲದೆ ಸಣ್ಣ ಪ್ರಿಂಟರ್ ಮತ್ತು ಕೈಬರಹದ ಗುರುತಿಸುವ ಉಪಕರಣವಿದ್ದರೆ ಸಾಕು. ಮುದ್ರಿಸಿದ ಮಾಹಿತಿ ಪಡೆಯುವ ದಿನಗಳು ದೂರವಿಲ್ಲ ಎಂದೆನಿಸುತ್ತದೆ.

ಇದಕ್ಕೆ ಪುರಕವಾಗಿಯೇ, ತಂತ್ರಜ್ಞಾನ ಬಳಕೆ ಈಗಾಗಲೇ ಬಂದಿದ್ದು, ಅಂಗೈ ಕಂಪ್ಯೂಟರ್ ಎಂದು ಕರೆಯುವ ಸಿಂಪ್ಯೂಟರ್ ಸ್ಕ್ರೀನ್ ಮೇಲೆ ಕೈಬರಹದಲ್ಲಿ ಬರೆದ ಮಾಹಿತಿಯನ್ನು ಇಂಟರ್‌ನೆಟ್ ಮುಖಾಂತರ ಈ ಮೇಲ್ ಕಳುಹಿಸಬಹುದು. ಕೀಬೋರ್ಡ್ ಅವಶ್ಯಕವಿಲ್ಲದೆ ಎನ್ನುವ ತಂತ್ರಜ್ಞಾನದಿಂದಲ ಕೆಲವೇ ಒತ್ತು ಕೀಲಿಗಳನ್ನು ಬಳಸಿ ಸಿಂಪ್ಯೂಟರ್‌ನಿಂದ ಇಂಟರ್‌ನೆಟ್, ಮಾಹಿತಿ ಸಂಗ್ರಹಣೆ, ಬ್ಯಾಂಕಿಂಗ್ ವ್ಯಾಪಾರ ಮುಂತಾದವುಗಳಿಗೆ ಉಪಯೋಗಿಸಬಹುದು. ಸಿಂಪ್ಯೂಟರ್‌ನಲ್ಲಿ ಲಿನಕ್ಸ್ ತಂತ್ರಾಂಶ ಬಳಸಲಾಗಿದ್ದು, ಕನ್ನಡ ಅಕ್ಷರ ಪದಗಳನ್ನು ಶಬ್ದಕೋಶವನ್ನು ಅಳವಡಿಸಿದ್ದಾರೆ. ಕರ್ನಾಟಕ ಸರ್ಕಾರವು ತನ್ನ ಭೂಮಿ ಯೋಜನೆಯಲ್ಲಿ ಸಿಂಪ್ಯೂಟರ್‌ಗಳನ್ನು ಬಳಸಿಕೊಳ್ಳಲು ನಿರ್ಧರಿಸಿದೆ. ಸಿಂಪ್ಯೂಟರ್‌ನಲ್ಲಿ ಕೂಡಾ ಇನ್ನಷ್ಟು ಕನ್ನಡ ಭಾಷೆಯ ಉಪಯೋಗಿ ತಂತ್ರಾಂಶಗಳನ್ನು ಅಭಿವೃದ್ಧಿ ಪಡಿಸಲು ಅವಕಾಶವಿದೆ. ಆಸಕ್ತರು ತಾಂತ್ರಿಕ ಮಾಹಿತಿಗಾಗಿ ನೋಡಬಹುದು.

ನಮ್ಮ ದೇಶದಲ್ಲಿ ಲಿನಕ್ಸ್ ತಂತ್ರಾಂಶಕ್ಕೆ ಬೆಂಬಲವಾಗಿ ಎಂಟರ್ ಪ್ರೈಜಸ್ ಎನ್ನುವ ಸಂಸ್ಥೆ ಲಿನಕ್ಸಸ್ ಫಾರ್ ಯು ಎನ್ನುವ ಮಾಸಪತ್ರಿಕೆ ಬಿಡುಗಡೆ ಮಾಡಿ ಒಂದು ವರ್ಷವಾಯಿತು. ಪ್ರತಿ ತಿಂಗಳು ಲಿನಕ್ಸ್ ತಂತ್ರಾಂಶಗಳ ಬಗ್ಗೆ ಮಾಹಿತಿ, ತಂತ್ರಾಂಶ ಪೂರೈಕೆ, ತಾಂತ್ರಿಕ ಬೆಂಬಲ, ಸೇವೆ ನೀಡುವ ಸಾಫ್ಟವೇರ್ ಸಂಸ್ಥೆಗಳ ಬಗ್ಗೆ ಮಾಹಿತಿ ಮತ್ತು ಇಂಟರ್‌ನೆಟ್‌ನಲ್ಲಿ ದೊರಕುವ ಉಚಿತ ಲಿನಕ್ಸ್ ತಂತ್ರಾಂಶಗಳ ಆವೃತ್ತಿಗಳನ್ನು ಸಿಡಿರೋಮ್‌ನ ಡಿಸ್ಕನಲ್ಲಿ ಕೊಡುತ್ತಿದೆ.

ಡಿಸ್ಕ್ ಮೂಲಕ ತಂತಾನೇ ಸ್ಥಾಪನೆಗೊಳ್ಳುವ ವ್ಯವಸ್ಥೆಯಲ್ಲಿ ಸಿಡಿ ರೊಂ ಡಿಸ್ಕ್ ಮೂಲಕ ಲಿನಕ್ಸ್ ತಂತ್ರಾಂಶ ಕಂಪ್ಯೂಟರ್‌ನಲ್ಲಿ ಸ್ಥಾಪನೆಗೊಳ್ಳುತ್ತದೆ. ತಿಂಗಳಿಗೊಮ್ಮೆ ಪ್ರಪಂಚದಾದ್ಯಂತ ಮತ್ತು ಭಾರತದಲ್ಲಿ ಬಿಡುಗಡೆಯಾಗುವ ಹೊಸ/ ಪರಿಷ್ಕೃತಗಂಬಡ ಲಿನಕ್ಸ್ ತಂತ್ರಾಂಶಗಳು, ಮುದ್ರಣ ತಂತ್ರಾಂಶಗಳು, ಸಂಗೀತ, ಕಂಪ್ಯೂಟರ್ ಗೇಮ್ಸ್ ತಂತ್ರಾಂಶಗಳು ಇತ್ಯಾದಿಗಳನ್ನು ಪುಕ್ಕಟೆಯಾಗಿ ಡಿಸ್ಕನಲ್ಲಿ ಕೊಡಲಾಗುತ್ತಿದೆ. ಅಂತರ್‌ಜಾಲ ಸಂದರ್ಶಿಸಬಹುದು.

ನಮ್ಮ ದೇಶದಲ್ಲಿ ಮೂರ್ನಾಲ್ಕು ಲಿನಕ್ಸ್ ತಂತ್ರಾಂಶಗಳು ಬಿಡುಗಡೆ(ಯಾಗಿವೆ) ಮಾಡಿದ್ದಾರೆ. ಇತ್ತೀಚೆಗೆ ಪಂಜಾಬಿನ ನಾಲ್ವರು ಯುವಕರು ಸೇರಿ ಪಂಜಾಬಿ ಲಿನಕ್ಸ್ ಬಿಡುಗಡೆ ಮಾಡಿದ್ದಾರೆ. ಕಂಪ್ಯೂಟರ್ ಪ್ರಾರಂಭದಿಂದ, ಕೊನೆಗೆ ಬಂದ್ ಮಾಡುವವರೆಗೆ ಪಂಜಾಬಿ ಭಾಷೆಯಲ್ಲಿ ಕಾರ್ಯನಿರ್ವಹಿಸುತ್ತದೆ. ತಂತ್ರಾಂಶ ಅಳವಡಿಸುವಾಗ ಲಿಪಿಗಳ ಗ್ರಾಫಿಕ್ಸ್ ಸಂಯೋಜನೆ ಮತ್ತು ಭಾಷಾಂತರ ಕಾರ್ಯ ಮುಖ್ಯವಾದುದು. ಭಾಷಾಂತರ ಕಾರ್ಯದ ನಿರ್ವಹಣೆ ಕೆಲವರಿಂದ ಸಾಧ್ಯವಿಲ್ಲ. ಇದಕ್ಕೆ ಎಲ್ಲರೂ ಕೈಗೂಡಿಸಬೇಕಾಗಿದೆ. ಭಾಷಾಂತರ ನಿರ್ವಹಣೆ ಕನ್ನಡ ವಿಶ್ವವಿದ್ಯಾಲಯ ನಿರ್ವಹಿಸಿದಲ್ಲಿ ಶೀಘ್ರವಾಗಿ ಕನ್ನಡ ಲಿನಕ್ಸ್ ತಂತ್ರಾಂಶ ರೂಪಿಸಬಹುದು.[೧೭]

ಕನ್ನಡದಲ್ಲಿ ಲಿನಕ್ಸ್ ರೂಪಿಸಿದಾಗ ಲಿನಕ್ಸ್ ಮೂಲ ವಿನ್ಯಾಸದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಪ್ರಪಂಚದ ಇತರ ಇಂಗ್ಲಿಶ್ ಇಲ್ಲದೆ ಯಾವುದೇ ಭಾಷೆ ಆಧಾರಿತ ಲಿನಕ್ಸ್ ತಂತರಾಂಶದೊಂದಿಗೆ ಹೊಂದಿಗೆ ಬಳಕೆಯಾಗುತ್ತದೆ. ಕಾರ್ಯನಿರ್ವಹಣೆ ಕನ್ನಡದಲ್ಲಿ ಇದ್ದರೂ ಇಂಟರ್‌ನೆಟ್ ಮತ್ತು ನೆಟ್‌ವರ್ಕಿಂಗ್ (ಅಂತರಜಾಲ)ದಲ್ಲಿ ಯೂನಿಕೋಡ್ ತಾಂತ್ರಿಕತೆಯ ಮುಖಾಂತರ ಆಂತರಿಕವಾಗಿ ಇಂಗ್ಲಿಷ್ ಭಾಷೆಯ ತಂತ್ರಾಂಶದೊಂದಿಗೆ ವ್ಯವಹರಿಸುವುದರಿಂದ ಯಾವುದೇ ತೊಡಕು ತೊಂದರೆಗಳು ಉಂಟಾಗುವುದಿಲ್ಲ. ಒಂದು ಸಾರಿ ಕನ್ನಡ ಭಾಷೆಯಲ್ಲಿ ಲಿನಕ್ಸ್ ಆಪರೇಟಿಂಗ್ ಸಿಸ್ಟಮ್ ತಂತ್ರಾಂಶ ರೂಪಗೊಂಡರೆ ಅದರ ತಂತ್ರಾಂಶಗಳೆಲ್ಲ ಮುಕ್ತವಾಗಿ ದೊರಕುವುದುರಿಂದ ಬೇರೆಯವರು ಅಂದರೆ ಖಾಸಗಿಯವರೂ ಕೂಡ ಭಾಷೆಗಳ ಆಧಾರಿತ ಅಪ್ಲಿಕೇಷನ್‌ಗಳನ್ನು ಕಡಿಮೆ ವೆಚ್ಚದಲ್ಲಿ ತಯಾರಿಸಬಹುದು. ಯಾರು ಕನ್ನಡದಲ್ಲಿಯೇ ತಂತ್ರಾಂಶ ಅಭಿವೃದ್ಧಿಗೊಳ್ಳುವ ದಿನಗಳೂ ಕೂಡ ದೂರವಿಲ್ಲ.

ಕರ್ನಾಟಕದಲ್ಲಿ ಆಸಕ್ತ ತಂತ್ರಜ್ಞರು ಅಂತರಜಾಲ ವೆಬ್‌ಸೈಟ್ ನಿರ್ಮಿಸಿ ಅದರಲ್ಲಿ ಕನ್ನಡ ಭಾಷೆಯನ್ನು ಲಿನಕ್ಸ್ ಆಪರೇಟಿಂಗ್ ಸಿಸ್ಟಂನಲ್ಲಿ ಅಳವಡಿಸುವ ಬಗ್ಗೆ ಮತ್ತು ಶಿಕ್ಷಣ, ವ್ಯಾಪಾರ ತಂತ್ರಜ್ಞಾನ, ಸಾಹಿತ್ಯ, ಸಂಗೀತ ಮುಂತಾದವುಗಳ ಬಗ್ಗೆ ಉಪಯೋಗಿ ತಂತ್ರಾಂಶಗಳನ್ನು ಅಭಿವೃದ್ಧಿಪಡಿಸುವ ಬಗ್ಗೆ ಚರ್ಚೆ ತಂತ್ರಜ್ಞಾನ ವಿನಿಮಯ, ಸಂಪನ್ಮೂಲ ವಿನಿಮಯ ಬಗ್ಗೆ ತಂತ್ರಾಂಶ ಅಭಿವೃದ್ಧಿ ಪಡಿಸುವ ಗುಂಪುಗಳನ್ನು ರಚಿಸಬೇಕಾದ ಅವಶ್ಯಕತೆಯಿದೆ.

## ೫.೪. ದಾಖಲೆ ಮತ್ತು ಸಂಗ್ರಹ ಮಾಧ್ಯಮಗಳು

ಹಸ್ತಪ್ರತಿಯೆಂದರೆ ಕೈಯಿಂದ ರೂಪಪಡೆದ ಬರವಣಿಗೆ ಎಂದು ಅರ್ಥ. ಈ ಅರ್ತದಲ್ಲಿ ಕೈಯಿಂದ ಬರೆದ ಪ್ರಾಚೀನ ಕಾಲದ ಗ್ರಂಥ, ದಾಖಲೆ, ಶಾಸನಗಳಲ್ಲದೆ, ಅಚ್ಚಿಗಾಗಿ ಸಿದ್ಧಪಡಿಸಿದ ಇಂದಿನ ಯಾವುದೇ ಬರವಣಿಗೆಗಳು ಹಸ್ತಪ್ರತಿಗಳೇ ಆಗಿವೆ.[೧೮] 'ಹಸ್ತಪ್ರತಿ' ಎಂಬುದು ಬಹುಪ್ರತಿ ರೂಪದಲ್ಲಿ ಸಿಗುತ್ತದೆ ಮತ್ತು ಸಾಮಾನ್ಯೀಕೃತ ಬರವಣಿಗೆಯಾಗಿರುತ್ತದೆ. ಹಸ್ತಪ್ರತಿಗಳು ಹಲವು ಪ್ರಕಾರದಲ್ಲಿ ದೊರೆಯುತ್ತವೆ. ತಾಳೆಗರಿ, ಭೂರ್ಜಪತ್ರ, ಕಾಗದ, ಕಡತ, ಅರಿವೆ, ಮರದ ತೊಗಟೆ, ಧರ್ಮ ಮುಂತಾದ ವಸ್ತುಗಳ ರೂಪದಲ್ಲಿ ದೊರೆಯುತ್ತದೆ. ಭಾರತದಲ್ಲಿರುವ

ಸಾಹಿತ್ಯ ಸಂಪತ್ತು ಹೊಂದಿರುವಂತಹ ಭಾಷೆಗಳಲ್ಲಿ ರಚಿತವಾಗಿರುವಂತಹ ಹಸ್ತಪ್ರತಿಗಳು ಸಾಕಷ್ಟು ದೊರೆಯುತ್ತವೆ. ಅದರಂತೆಯೇ ಕನ್ನಡ ಭಾಷೆಯ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಸ್ತಪ್ರತಿಗಳು ದೊರೆಯುತ್ತವೆ. ಭೂಮಿಯು ತನ್ನೊಡಲಲ್ಲಿ ಅಮೂಲ್ಯವಾದ ಸಾಹಿತ್ಯ ಸಂಪತ್ತನ್ನು ಹೊಂದಿವೆ. ಇವು ನಮಗೆ ನಮ್ಮ ಪೂರ್ವಜರು ಬಿಟ್ಟುಹೋದ ಅಮೂಲ್ಯ ಆಸ್ತಿಯೆನ್ನಬಹುದಾಗಿವೆ. ಸುಮಾರು ಎರಡು ಸಾವಿರ ವರ್ಷದ ಇತಿಹಾಸವಿರುವ ಕನ್ನಡ ಭಾಷೆ ಮತ್ತು ಸಾಹಿತ್ಯದ ನಿಖರತೆ ತಿಳಿಯುವುದು ನಮ್ಮ ಪೂರ್ವಜರು ರಚಿಸಿದ ಸಾಹಿತ್ಯ ಕೃತಿಯ ಪ್ರತಿಯಿಂದ.

'ಹಸ್ತಪ್ರತಿಗಳು' ನಮ್ಮ ಹಿಂದಿನ ತಲೆಮಾರಿನವರು ವಿದ್ವಾಂಸರು, ಕವಿಗಳು ರಚಿಸಿದ ಜ್ಞಾನದ ಮತ್ತು ಸಾಹಿತ್ಯದ ನೆಲೆಗಳು ಒಂದು ಕಡೆಯಾದರೆ ಶ್ರಮದಾಯಕ ಸಮುದಾಯಗಳು ಕೌಶಲ್ಯ ಪೂರ್ಣಕ್ರಿಯೆ ಅಥವಾ ತಾಂತ್ರಿಕ ಜ್ಞಾನದಿಂದ ಆದ ಅಮೂಲ್ಯವಾದ ಜ್ಞಾನ ಸಂಪತ್ತು ಹೊಂದಿರುವ ಪರಿಕರಗಳು ಎನ್ನಬಹುದು. ಇಂತಹ ಹಸ್ತಪ್ರತಿಗಳಲ್ಲಿ ವಿವಿಧ ರೀತಿಯ ಸಾಹಿತ್ಯ ಪ್ರಕಾರಗಳಿವೆ. ಕಾವ್ಯ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ಗೀತ ಸಾಹಿತ್ಯ, ಗದ್ಯ ಸಾಹಿತ್ಯ, ಪುರಾಣ, ಚರಿತ್ರೆ, ಮಹಾತ್ಮ ಮುಂತಾದ ಹಲವಾರು ಬಗೆಯ ಸಾಹಿತ್ಯ ಪ್ರಕಾರಗಳನ್ನು ಹೊಂದಿದೆ. ಧಾರ್ಮಿಕ, ಲೌಕಿಕ, ತಾಂತ್ರಿಕ, ವೈಚಾರಿಕ ಮುಂತಾದ ವಿಷಯ ವಸ್ತುಗಳನ್ನು ಹಸ್ತಪ್ರತಿಗಳಲ್ಲಿ ಕಾಣಬಹುದು. ಹಸ್ತಪ್ರತಿಗಳು ನಮ್ಮ ಸಂಸ್ಕೃತಿ ಹಾಗೂ ಬದುಕಿನ ಎಲ್ಲಾ ಆಯಾಮಗಳನ್ನು ತಿಳಿಸುವಂತಹವು. ಇಂತಹ ಸಾಂಸ್ಕೃತಿಕ ಸಂಪನ್ಮೂಲಗಳಾದ ಹಸ್ತಪ್ರತಿಗಳು ಬೆಲೆಕಟ್ಟಲಾರಂದಂತಹವು. ಇಂತಹ ಹಸ್ತಪ್ರತಿಗಳನ್ನು ಉಳಿಸಿ ಕಾಪಾಡಿದರೆ ಸಮಾಜಕ್ಕೆ ತುಂಬಾ ಅನುಕೂಲ ಇದೆ. ಹಸ್ತಪ್ರತಿಗಳು ಕಾಲಗರ್ಭದಲ್ಲಿ ಪೀಳಿಗೆಯಿಂದ ಪೀಳಿಗೆಗೆ ಸಾಗುವಾಗ ನೀರು, ಬೆಂಕಿ, ಕಾಳಿ, ಎಣ್ಣೆ, ಕೀಟ ಹಾಗೂ ಶತ್ರುಗಳ ವಿನಾಶಕಾರಿ ಪ್ರವೃತ್ತಿ. ಹೀಗೆ ಮುಂತಾದ ಹಲವು ಕಾರಣಗಳಿಂದ ನಾಶ ಹೊಂದುತವೆ. ಇದು ಪ್ರಕೃತಿಯಲ್ಲಿನ ಸ್ವಾಭಾವಿಕ ಪ್ರಕ್ರಿಯೆ. ಈಗಾಗಲೇ ನಮ್ಮ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಹಲವಾರು ಪ್ರಾಚೀನ ಕೃತಿಗಳು ಅವುಗಳ ಹಸ್ತಪ್ರತಿಗಳು ಲಭ್ಯವಿಲ್ಲ. ಒದು ವೇಳೆ ದೊರೆತರೆ ಕನ್ನಡ ಸಾಹಿತ್ಯದ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಆದರೂ ಕೂಡ ನಮ್ಮ ಪೂರ್ವಜರು ಅವರೇ ಆದ ತಾಂತ್ರಿಕ ವಿಧಾನವನ್ನು ಅನುಸರಿಸಿ ಅವುಗಳ ರಕ್ಷಣೆ ಮಾಡಿದ್ದಾರೆ. ಆದ್ದರಿಂದಲೇ ಇಂದಿನ ಮಮ್ಮ ತಲೆಮಾರಿನ ಜನಸಮುದಾಯಕ್ಕೆ ಸಾಹಿತ್ಯದ ಜ್ಞಾನ ಲಭ್ಯವಾಗಿದೆ. ಇಂತಹ ಅತ್ಯಮೂಲ್ಯ ಹಸ್ತಪ್ರತಿಗಳನ್ನು ಆಧುನಿಕ ತಾಂತ್ರಿಕ ವಿದಾನವನ್ನು ಬಳಸಿ ಅವುಗಳನ್ನು ಸಂರಕ್ಷಿಸಬೇಕಾಗಿದೆ.

ಹಸ್ತಪ್ರತಿ ಸಂರಕ್ಷಣೆಯ ಬಗ್ಗೆ "ಕಷ್ಟೇನ ಲಿಖಿತಂ ಮಯಾ ಯತ್ನೆನ ಪರಿಪಾಲಯೆತ್" ಎಂದು ಲಿಪಿಕಾರನು ಹಸ್ತಪ್ರತಿ ಪುಷ್ಪಿಕೆಗಳಲ್ಲಿ ವಿನಮ್ರವಾಗಿ ಹೇಳಿಸುವುದುಂಟು. ಅಂದರೆ ಕಷ್ಟಪಟ್ಟು ಬರೆದಿದ್ದೇನೆ ಪ್ರಯತ್ನ ಪೂರ್ವಕ ರಕ್ಷಿಸಿ ಎಂದು ಸಮಸ್ತ ಲಿಪಿಕಾರರ ಪರವಾಗಿ ಹೇಳಿರುವುದುಂಟು.[೯] ಹೀಗೆ ಹೇಳಿರುವುದರ ಹಿಂದೆ ತಮ್ಮ ದೈಹಿಕ ಮತ್ತು ಮಾನಸಿಕ ಶ್ರಮದ ಫಲದ ರೂಪಗಳಾದ ಹಸ್ತಪ್ರತಿಗಳನ್ನು ಮುಂದಿನ ತಲೆಮಾರಿನವರೆಗೆ ಉಳಿಸಬೇಕು ಎಂಬುದಾಗಿದೆ.

ಏಕೆಂದರೆ ಹಿಂದೆ ಒಂದು ಕೃತಿ ಅಥವಾ ಒಂದು ಗ್ರಂಥವನ್ನು ರಚಿಸಿವುದು ಇಂದಿನ ಹಾಗೆ ಸುಲಭವಾಗಿರಲಿಲ್ಲ. ಇಂದು ಮುದ್ರಣ ಮಾಧ್ಯಮ ಹಾಗೂ ತಂತ್ರಜ್ಞಾನ ಹೆಚ್ಚು ಬೆಳವಣಿಗೆಯಾಗುತ್ತಿರುವುದರಿಂದ ಪುಸ್ತಕಗಳ ರಚನೆ ಬಹಳ ಸುಲಭವಾಗಿದೆ. ಯಾವುದೇ ಒಂದು ಸಾಹಿತ್ಯ ಕೃತಿ ರಚನೆ ಮಾಡಬೇಕಾದರೆ ಬರಹಗಾರನ ನೈಪುಣ್ಯತೆ, ಕೌಶಲ್ಯ ಹಾಗೂ ಏಕತಾನತೆ ಬಹಳ ಮುಖ್ಯವಾಗಿ ಬೇಕಾಗಿತ್ತು.

ಲಿಪಿಕಾರನು ಕೃತಿಯ ಬರವಣಿಗೆಯಲ್ಲಿರುವಾಗ ಓಲೆಗರಿಗಳನ್ನು ತೊಡೆಯ ಮೇಲೆ ಇಟ್ಟುಕೊಂಡು ಆ ಓಲೆಗರಿಗಳ ಭದ್ರತೆ ಮತ್ತು ಹಿಡಿತಕ್ಕಾಗಿ ಆ ಓಲೆಗರಿಯ ಕೆಳಗೆ ಹಲಗೆಯಂತಹ ಘನಾಕೃತಿಯ ಫಲಕ(ಹಲಗೆಗಳನ್ನು) ಬಳಸುತ್ತಿದ್ದರು. ಹಾಗೆ ಕೊರೆಯುತ್ತಿರುವ ಸಂದರ್ಭದಲ್ಲಿ ಸ್ವಲ್ಪ ಆಯ ತಪ್ಪಿದರೂ ಲಿಪಿಕಾರನಿಗೆ ಹಾಗೂ ಓಲೆಗರಿಗಳಿಗೆ ಏಕಕಾಲದಲ್ಲಿ ಅಪಾಯ ಸಂಭವಿಸುತ್ತಿತ್ತು. ಕಾರಣ ಓಲೆಯ ಮೇಲೆ ಕೊರೆಯುವ ಕಂಠವು ಕಬ್ಬಿಣದ ಚೂಪಾದ ವಸ್ತುವಾಗಿತ್ತು. ಅದರ ಮೂತಿಯೂ ಚೂಪಾಗಿರುತ್ತಿತ್ತು. ಹಾಗಾಗಿ ಲಿಪಿಕಾರ ಒಂದು ಆಯಕಟ್ಟಿನಲ್ಲಿ ಬರೆಯುತ್ತಿದ್ದ. ಒಂದು ವೇಳೆ ಆಯತಪ್ಪಿದರೆ ಜಾರಿ ನೇರವಾಗಿ ತೊಡೆಗೆ ಚುಚ್ಚಿ ನೋವುಂಟು ಮಾಡುವ ಅಪಾಯವೇ ಹೆಚ್ಚಿರುತ್ತಿತ್ತು. ಕಂಠವನ್ನು ಒತ್ತಿ ಬರೆದರೆ ಗರಿ ಮುರಿದು ಹಾಳಾಗುವುದು ಮತ್ತು ಹಿಂದಿನ ಪುಟದ ಅಕ್ಷರಗಳೂ ನಾಶವಾಗುತ್ತಿದ್ದವು. ಪ್ರತಿಯಲ್ಲಿ ಅಕ್ಷರ ಸ್ಖಾಲಿತ್ಯವಾದರೆ ಅವುಗಳನ್ನು ಅಳಿಸಿ ಹಾಕಿ ಮತ್ತೇ ಹೊಸ ಅಕ್ಷರ ಕೊರೆಯಲು ಬರುತ್ತಿರಲಿಲ್ಲ. ಗರಿಗಳ ಮೇಲೆ ಅಕ್ಷರಗಳನ್ನೂ ಎರಡು ಬದಿಯಲ್ಲಿ ಅಂದರೆ ಒಂದೇ ಗರಿಯ ಹಿಂದೆ ಮತ್ತು ಮುಂದೆ ಕೊರೆಯಲಾಗುತ್ತಿತ್ತು. ಇಂಥ ಸಂದರ್ಭದಲ್ಲಿ ಲಿಪಿಕಾರ ಏಕಕಾಲದಲ್ಲಿ ತನ್ನ ರಕ್ಷಣೆಯನ್ನು ಹಾಗೂ ಹಸ್ತಪ್ರತಿಯ ಬರಹವೂ ಯಾವುದೇ ರೀತಿ ಕೆಡದಂತೆ ರಚಿಸಬೇಕಾಗಿತ್ತು. ಹೀಗೆ ಬಹಳ ಪರಿಶ್ರಮದಿಂದ ಸೃಷ್ಟಿಯಾದ ಹಸ್ತಪ್ರತಿಗಳು ನಾಡಿನಲ್ಲೆಲ್ಲಾ ಪ್ರಚಾರಗಳನ್ನು ನೀಡುತ್ತಿದ್ದವು. ಇಂತಹ ಹಸ್ತಪ್ರತಿಗಳು ಅನೇಕ ಕಾರಣಗಳಿಂದ ಮೂಲೆಗುಂಪಾಗಿ ಕೊಳೆಯುತ್ತಾ ಬಿದ್ದಿವೆ. ಆದರೂ ಸಹ ನಮ್ಮ ಪ್ರಾಚೀನರು ಲಿಪಿಕಾರರಲ್ಲದೆ ಅಭ್ಯಾಸಿಗಳು, ಧರ್ಮಾಧಿಕಾರಿಗಳು, ಧರ್ಮಾಭಿಮಾನಿಗಳು, ಮೋಕ್ಷ ಆಪೇಕ್ಷಿಗರು, ಮುಂತಾದ ಹಸ್ತಪ್ರತಿಗಳ ಮೌಲ್ಯ ತಿಳಿದ ವ್ಯಕ್ತಿಗಳು ಇಲ್ಲಿಯವರೆಗೂ ರಕ್ಷಣೆ ಮಾಡುತ್ತಾ ಪ್ರಸಾರ ಮಾಡುತ್ತಾ ಬಂದಿದ್ದಾರೆ.

ಹಸ್ತಪ್ರತಿಗಳ ಸಂರಕ್ಷಣೆಯು ಪ್ರಾಚೀನ ಕಾಲದಿಂದಲೂ ಕೆಲವೊಂದು ವಿಧಾನಗಳ ಮೂಲಕ ನಡೆಯುತ್ತಾ ಬಂದಿದೆ. ೧ ಬಾಹ್ಯ ಸಂರಕ್ಷಣೆ ಮತ್ತು ೨. ಆಂತರಿಕ ಸಂರಕ್ಷಣೆ ಎಂದು ವಿಗಂಡಿಸಬಹುದಾಗಿದೆ. ಬಾಹ್ಯ ಸಂರಕ್ಷಣೆಯಲ್ಲಿ ಕೆಲವೊಂದೂ ಪಾರಂಪರಿಕ ವಿಧಾನವನ್ನು ಅನುಸರಿಸಲಾಗಿದೆ. ಅರಿವೆ ಸುತ್ತುವುದು. ರಕ್ಷಾ ಕವಚಗಳನ್ನು ಮಾಡುವುದು, ಸಂದೂಕ ಅಥವಾ ಪೆಟ್ಟಿಗೆಗಳನ್ನು ಮಾಡಿ ಪೆಟ್ಟಿಗೆಯಲ್ಲಿ ಇಟ್ಟು ಕಾಪಡುವುದು. ಹಸ್ತಪ್ರತಿಗಳಿಗೆ ಯಾವುದೇ ಕ್ರಿಮಿಕೀಟ ಹತ್ತಬಾರದೆಂದು ಹೊಗೆ ಗೂಡಿನಲ್ಲಿ ಇಡುವುದು. ಹಾಗೆಯೇ ಯಾರು ಮುಟ್ಟದಂತೆ ಜಗುಲಿಯ ಮೇಲೆ ಇರಿಸುವುದು. ಹೀಗೆ ಹಲವು ವಿಧಾನಗಳಿಂದ ಸಂರಕ್ಷಣೆ ಮಾಡಿದ್ದಾರೆ.

ಹಸ್ತಪ್ರತಿಗಳ ಆಂತರಿಕ ರಕ್ಷಣೆಯಲ್ಲಿ ಪ್ರಾಚೀನ ವಿಧಾನವನ್ನು ಕಾಣಬಹುದಾಗಿದೆ. 'ಪ್ರಾಚೀನ ವಿಧಾನದಲ್ಲಿ ಸಂಪ್ರತಿ ಮುಖ್ಯವಾಗಿತ್ತು. 'ಸಂಪ್ರತಿ' ಎಂದರೆ ಮೂಲಪ್ರತಿ ಇದ್ದಂತೆ ಮರುಪ್ರತಿ ಮಾಡುವುದು,[೨೦] ಹಸ್ತಪ್ರತಿ ಮಾಡುವ ಲಿಪಿಕಾರರಿಂದ ನಕಲು ಮಾಡುತ್ತಿದ್ದರು. ಹಸ್ತಪ್ರತಿ ಸಂರಕ್ಷಣೆಯಲ್ಲಿ ಈ ವಿಧಾನ ಬಹಳ ಮುಖ್ಯವಾಗಿದೆ ಎನ್ನಬಹುದು. ಕಾರಮ ಒಂದು ಕೃತಿಯ ಪ್ರತಿಗಳು ಹಲವು ಇದ್ದಾಗ ಆ ಕೃತಿಯ ವಸ್ತು ವಿಷಯ ಜ್ಞಾನ ಸಾಹಿತ್ಯ ನಾಶ ಹೊಂದದೆ ಇರುತ್ತದೆ.

ಕಾಲ ಬದಲಾದ ಹಾಗೆ ಹಸ್ತಪ್ರತಿ ಸಂರಕ್ಷಣೆಯು ಮುಂದುವರೆದು ಇಂದಿನ ಸಂದರ್ಭದಲ್ಲೂ ಕೂಡ ನಡೆಯುತ್ತಿದೆ. ಇಂದಿನ ಸಂದರ್ಭದಲ್ಲೂ ಕೂಡ ಹಸ್ತಪ್ರತಿಯ ಬಾಹ್ಯ ಸಂರಕ್ಷಣೆ ಮತ್ತು ಆಂತರಿಕ ಸಂರಕ್ಷಣೆಯೂ ನಡೆಯುತ್ತಿದೆ. ಬಾಹ್ಯ ಸಂರಕ್ಷಣೆಯ ಆಧುನಿಕ ಪದ್ಧತಿಯಲ್ಲಿ ದುರಸ್ತಿ ಕಾರ್ಯ, ಗರಿಗಳ ದುರಸ್ತಿ ಕಾರ್ಯ, ಸುಸಜ್ಜಿತ ಕೊಠಡಿ, ಲ್ಯಾಮಿನೇಷನ್ ಹವಾನಿಯಂತ್ರಣ, ಮಉಂತಾದ ರೀತಿಯಿಂದ ಹಸ್ತಪ್ರತಿಗಳ ಆಂತರಿಕ ಸಂರಕ್ಷಣೆಯಲ್ಲಿ ಆಧುನಿಕ ವಿಧಾನಗಳನ್ನು ಕಾಣಬಹುದಾಗಿದೆ.

ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸಿ ಹಸ್ತಪ್ರತಿಗಳನ್ನು ಸಂರಕ್ಷಣೆ ಮಾಡಬಹುದಾಗಿದೆ.

**೧. ಮೈಕ್ರೋಫಿಲಂ**

ಹಸ್ತಪ್ರತಿಗಳ ಮೂಲ ಪ್ರತಿಗಳು ಹೇಗಿರುತ್ತವೆಯೋ ಹಾಗೆಯೇ ಮೈಕ್ರೋಫಿಲಂ ದಾಖಲಿಸುವ ಕಾರ್ಯ ಮಾಡುತ್ತದೆ. ಅಂದರೆ ಹಸ್ತಪ್ರತಿಯ ಒದೊಂದೇ ಗರಿಗಳನ್ನು ಅನುಕ್ರಮವಾಗಿ ಸ್ಕ್ಯಾನ್ ಮಾಡುವುದು. ಇದು ಹಸ್ತಪ್ರತಿ ಕ್ಷೇತ್ರಕಾರ್ಯಗದ ಸಂದರ್ಭದಲ್ಲಿಯೂ ಇದನ್ನು ಬಳಸಬಹುದಾಗಿದೆ. ಹಸ್ತಪ್ರತಿ ಇದ್ದಂತವರು ಹೊರಗಡೆ ಕೊಡದೆ ಇರುವಾಗ ಮೈಕ್ರೋಫಿಲಂ ರೂಪದಲ್ಲಿ ಸಂಗ್ರಹಿಸಬಹುದಾಗಿದೆ. ಹಸ್ತಪ್ರತಿ ಭಂಡಾರದಲ್ಲಿರುವ ಏಕೈಕ ಹಸ್ತಪ್ರತಿಗಳನ್ನು ಮೈಕ್ರೋ ಫಿಲಂ ಮೂಲಕ ಸಿದ್ಧಪಡಿಸಿಕೊಂಡರೆ ಮೂಲ ಪ್ರತಿಯನ್ನು ಯಥಾವತ್ತಾಗಿ ಕಾಪಾಡಬಹುದು. ಒಂದು ವೇಳೆ ಒಂದು ಪ್ರತಿ ಯಾವುದೇ ರೀತಿಯಲ್ಲಿ ಹಾನಿಗೊಳಗಾದರೆ ಮತ್ತೊಂದು ಪ್ರತಿಯಿಂದ ಸಹಾಯವಾಗುತ್ತದೆ.[೨೧] ಹೀಗೆ ಹಸ್ತಪ್ರತಿ ಸಂರಕ್ಷಣೆಯಲ್ಲಿ ಮೈಕ್ರೊ ಫಿಲಂ ಸಹಕಾರಿಯಾಗಿದೆ.

**೨. ಝೀರಾಕ್ಸ್ ಯಂತ್ರ**

ಇದು ಒಂದು ದೊಡ್ಡ ಯಂತ್ರವಾಗಿದೆ. ಇದು ಕೂಡ ಮೈಕ್ರೋಫಿಲಂ ತರಹವೇ ಕಾರ್ಯನಿರ್ವಹಿಸುತ್ತದೆ. ಒಂದು ಹಸ್ತಪ್ರತಿಯನ್ನು ಝೆರಾಕ್ಸ್ ಮಾಡುವುದರ ಮೂಲಕ ಹಲವಾರು ಪ್ರತಿಗಳನ್ನಾಗಿ ಮಾಡಿಕೊಳ್ಳಬಹುದು. ಆದರೆ ಇದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಉಪಯೋಗವಾಗಲಿರದು.

### ೩. ಫೋಟೋಸ್ಟ್ಯಾಪ್

ಹಸ್ತಪ್ರತಿಗಳಲ್ಲಿನ ಬರಹವನ್ನು ಸಂರಕ್ಷಿಸುವ ವಿಧಾನದಲ್ಲಿ ಫೋಟೋಸ್ಟ್ಯಾಪ್ ಒಂದು. ಇದರ ಮೂಲಕ ಹಸ್ತಪ್ರತಿಗಳ ಪ್ರತಿಯೊಂದು ಪುಟಗಳನ್ನು ಅನುಕ್ರವಾಗಿ ಫೋಟೋ ಕ್ಲಿಕ್ ಮಾಡುತ್ತಾ ಹೋಗಬೇಕು. ಹಾಗೆ ಕ್ಲಿಕ್ ಮಾಡಿದವುಗಳನ್ನು ಫೋಟೋ ಸ್ಟುಡಿಯೋದಲ್ಲಿ ಪ್ರಿಂಟ್ ಹಾಕಿಸಬೇಕು. ಒಂದೇ ಪ್ರತಿಯನ್ನು ಹಲವು ಸಲ ಪ್ರಿಂಟ್ ಹಾಕಿಸಬಹುದಾಗಿದೆ. ಇಂದು ಫೋಟೋ ಕ್ಯಾಮರಾಗಳು ಹೆಚ್ಚು ಸುಧಾರಿಸಿವೆ. ಖಜಿಟಲ್ ಕ್ಯಾಮರಾಗಳು ಒಂದೇ ಬಾರಿಗೆ ಸಾವಿರಾರು ಫೋಟೋಗಲನ್ನು ಶೇಖರಿಸಿಕೊಳ್ಳಬಲ್ಲವು. ಮತ್ತು ಇಂಥ ಕ್ಯಾಮರಾಗಳಿಂದ ಯು.ಎಸ್.ಪಿ. ಮೂಲಕ ನೇರವಾಗಿ ಟಿವಿಯಲ್ಲಿ ಸಂಪರ್ಕ ಸಾಧಿಸಿ ಪರದೆಯಲ್ಲಿ ನೋಡಬಹುದು.

### ೪. ವಿಡಿಯೋಗ್ರಫಿ

ವಿಡಿಯೋಗ್ರಫಿ ಇದೊಂದು ದೃಶ್ಯಾವಳಿಗಳ ಚಿತ್ರೀಕರಣ ಸಾಧನ. ವಿಶೇಷವಾಗಿ ಹಸ್ತಪ್ರತಿಗಳನ್ನು ಚಿತ್ರೀಕರಿಸುವ ಅತ್ಯಂತ ಸುಲಭದ ಉಪಕರಣವಾಗಿದೆ. ಇದರಲ್ಲಿ "ಸೆರೆಹಿಡಿದಿರುವ ಚಿತ್ರಗಳು ಡಿಜಿಟಲ್ ಫೋಟೋ ತರಹನೇ ಮೆಮೋರಿಕಾರ್ಡಿನಲ್ಲಿ ಶೇಖರಣೆಗೊಳ್ಳುತ್ತವೆ. ಅತಿ ಚಿಕ್ಕದಾದ ಈ ಮೆಮೋರಿಕಾರ್ಡ್‌ವೊಂದಿದ್ದರೆ ಸಾಕು. ಇದನ್ನು ಕಂಪ್ಯೂಟರಿಗೆ ಅಳವಡಿಸಿ ಸೆರೆಹಿಡಿದ ದೃಶ್ಯಾವಳಿಗಳನ್ನು ನೋಡಬಹುದು. ಹ್ಯಾಂಡಿಕಾಮ್ ಮೂಲಕ ಟಿವಿಸಕ್ತಕರು ಇದನ್ನು ಉಪಯೋಗಿಸುವುದು ಗೊತ್ತಿರಬೇಕಾಗುತ್ತದೆ."[೨೨] ಕಂಪ್ಯೂಟರ್ ವಿದ್ಯುತ್‌ಚ್ಛಕ್ತಿ ಬೇಕಾಗುತ್ತದೆ. ಇವುಗಳು ಎಲ್ಲರಲ್ಲೂ ಎಲ್ಲ ಸಮಯದಲ್ಲೂ ಇರಲು ಸಾಧ್ಯವಿಲ್ಲ. ಆದರೆ ಹಸ್ತಪ್ರತಿಗಳ ಮೂಲ ಪ್ರತಿಗಳನ್ನು ಸಂರಕ್ಷಿಸಲು ಈ ವಿಧಾನದ ಮೂಲಕ ಸಾಧ್ಯವಿದೆ.

### ೫. ಕಂಪ್ಯೂಟರ್

ಆಧುಇಕ ಜಗತ್ತಿನ ವೈಜ್ಞಾನಿಕ ಆವಿಷ್ಕಾರಗಳಲ್ಲಿಯೇ ಶ್ರೇಷ್ಠವಾದುದು ಕಂಪ್ಯೂಟರ್. ಪ್ರಸ್ತುತದಲ್ಲಿ ಕಂಪ್ಯೂಟರ್ ತಂತ್ರಜ್ಞಾನ ಹೊಸ ಶಕೆಯನ್ನೇ ಸೃಷ್ಟಿಸಿದೆ. ಕಂಪ್ಯೂಟರಿನ ಮೂಲಕ ಏನು ಬೇಕಾದರೂ ರಕ್ಷಿಸಬಹುದು. ಹಾಗೂ ದಾಖಲಿಸಬಹುದು. ಹಾಗೂ ಮಾನಿಟರ್ ಪರದೆಯ ಮೇಲೆ ನೋಡಬಹುದು ಮತ್ತು ಮಾಹಿತಿಯನ್ನು ಪರಿಚಲನಗೊಳಿಸಬಹುದು. ಇಡೀ ಜಗತ್ತನ್ನೇ ಕ್ಷಣ ಮಾತ್ರದಲ್ಲಿ ಸುತ್ತಾಡಿಕೊಂಡು ಬರಬಹುದು. ಇವೆಲ್ಲಾ ಕಾರ್ಯಗಳು ಮಾಹಿತಿ ತಂತ್ರಜ್ಞಾನದ ಮೂಲಕ ಇದು ಸಾಧ್ಯವಾಗಿದೆ. ಕಂಪ್ಯೂಟರ್ ಹೊಂದಿರುವ ಗುಣಾತ್ಮಕ ಸಾಧ್ಯತೆಗಳಿಂದ ವಿವಿಧ ರೀತಿಯ ಭಾಷೆ, ಸಾಹಿತ್ಯದ ಸಂಸ್ಕರಣ ಕೆಲಸವನ್ನು ನಿಭಾಯಿಸಬಹುದಾಗಿದೆ. ಇಂದು ಕಂಪ್ಯೂಟರ್‌ನಲ್ಲಿ ಸಂರಕ್ಷಣೆ ಸಂಗ್ರಹಣೆ ಮಾಡುವ ಹಲವು ಸಾಧ್ಯತೆಯನ್ನು ಹೊಂದಿದೆ. ಕಂಪ್ಯೂಟರ್‌ನ ಮೂಲಕ ಕೆಲವು ವಿಧಾನಗಳಿಂದ ಸಂರಕ್ಷಣೆ ಮತ್ತು ಸಂಗ್ರಹಣೆ ಮಾಡಬಹುದಾಗಿದೆ.

೧. "ಸ್ಕ್ಯಾನರ್ ಯಂತ್ರದ ಮೂಲಕ ಸ್ಕ್ಯಾನ್ ಮಾಡುವುದು. ಅಥವಾ ಡಿಜಿಟಲ್ ಕ್ಯಾಮರಾ ಮೂಲಕ ಸೆರೆ ಹಿಡಿಯುವುದು.

೨. ಮೈಕ್ರೋಫೋನ್ ಮುಖಾಂತರ ಓದಿ ರೆಕಾರ್ಡ್ ಮಾಡುವುದು.

೩. ಡಿ.ಟಿ.ಪಿ."[೨೩]

ಈ ವಿಧಾನವು ಹಸ್ತಪ್ರತಿಯಲ್ಲಿರುವ ಪಠ್ಯವನ್ನು ಕಂಪ್ಯೂಟರ್ ಕೀಬೋರ್ಡ್ ಮೂಲಕ ಟೈಪಿಸುವುದು.

ಕನ್ನಡ ಹಸ್ತಪ್ರತಿಗಳ ಸಂರಕ್ಷಣಾ ವಿಷಯದಲ್ಲಿ ಸ್ಕ್ಯಾನಿಂಗ್, ಮಾನಿಟರಿ ರೀಡಿಂಗ್, ಟೈಪಿಂಗ್, ಓ.ಸಿ.ಆರ್. ಇಂಟರ್‌ನೆಟ್‌ನಂತಹ ಅವಕಾಶಗಳು ಮಹತ್ವದ ದಾರಿಗಳನ್ನೇ ತೆರದಿಟ್ಟಿವೆ. ಗ್ರಾಫಿಕ್ ಸಾಫ್ಟ್‌ವೇರ್‌ನ ಸಹಾಯದಿಂದ ಕಂಪ್ಯೂಟರಿನಲ್ಲಿ ಹಸ್ತಪ್ರತಿಗಳನ್ನು ಸ್ಕ್ಯಾನಿಂಗ್ ಮಾಡುವಲ್ಲಿ ಎರಡು ಅಂಶಗಳು ಮುಖ್ಯ. ೧) ಗ್ರಾಫಿಕ್ ಮೋಡ್ ಇದನ್ನು ಹೆಚ್ಚಾಗಿ ರೇಖಾಚಿತ್ರಗಳ ರಚನೆಗೆ ಬಳಸಬಹುದಾಗಿದೆ. ೨) ಟೆಕ್ನಿಕ್ ಮೋಡ್. ಇದನ್ನು ಅಕ್ಷರ ಸಂಸ್ಕರಣೆಗೆ ಬರವಣಿಗೆಗೆ ಬಳಸುತ್ತಾರೆ. ಸಂಗ್ರಹಿಸಿರುವಂತಹ ಹಸ್ತಪ್ರತಿಗಳು ತೃಟಿತಗೊಂಡಿದ್ದರೆ ಮುರಿದು ಹೋಗಿದ್ದರೆ, ಅಕ್ಷರಗಳು ಸ್ಫುಟವಾಗಿರದಿದ್ದರೆ ಅವುಗಳನ್ನು ಕಂಪ್ಯೂಟರ್‌ಗೆ ಅಳವಡಿಸಿ ದುರಸ್ತಿ ಕಾರ್ಯ ಮಾಡಬಹುದು. ಇದು ಕಂಪ್ಯೂಟರ್ ತಂತ್ರಾಂಶದಿಂದ ಸಾಧ್ಯವಾಗುತ್ತದೆ. ಹಸ್ತಪ್ರತಿಗಳಲ್ಲಿನ ಕಲೆಗಳನ್ನು ತೆಗೆದು ಬರೀ ಅಕ್ಷರಗಳು ಮಾತ್ರ ಉಳಿಸಿಕೊಂಡು ಸ್ಫುಟವಾಗಿ ಕಾಣಿಸಲು ಇಮೇಜ್ ಮಾಡಿಡುವ ಮೂಲಕ ಸಂಸ್ಕರಣೆ ಮಾಡಬಹುದಾಗಿದೆ. ಅಕ್ಷರಗಳ ಶೈಲಿಯನ್ನು ಬದಲಿಸುವ ತಂತ್ರಜ್ಞಾನ ಕಂಪ್ಯೂಟರ್‌ನಲ್ಲಿ ಇದೆ. ಉದಾಹರಣೆಗೆ ಬರಹ, ನುಡಿ, ನುಡಿಯಲ್ಲಿಯೇ ನುಡಿ ೧, ೨, ೩, ೪, ೫, ೬, ೭, ೮, ೯, ೧೦ ಇತ್ಯಾದಿ ಅಕ್ಷರ ಸ್ಟೈಲಿಸ್ ಇರುತ್ತವೆ. ಇದರಿಂದ ಹಸ್ತಪ್ರತಿಯ ಬರಹವನ್ನು ನಮಗೆ ಬೇಕಾದ ರೀತಿಯಲ್ಲಿ ಬದಲಾಯಿಸಿ ಸಂಸ್ಕರಣೆಗೊಳಿಸುವಂತಹ ಕಂಪ್ಯೂಟರ್ ತಂತ್ರಜ್ಞಾನವಿದೆ. ಹೀಗೆ ಸಂಸ್ಕರಣೆಗೊಂಡ ವಿಷಯವನ್ನು ಪುನರ್ ಮುದ್ರಿಸಲು ಕಡಿಮೆ ಸಮಯದಲ್ಲಿ ಆ ಕೃತಿಯ ಮೂಲಾಂಶವನ್ನು ತಿಳಿಯಲು ನಮಗೆ ಬೇಕಾದ ಮಾಹಿತಿಯನ್ನು ಟೈಪ್ ಮಾಡಿ Search ಮಾಡುವ ಮೂಲಕ ಕ್ಷಣಾರ್ಧದಲ್ಲಿ ಪ್ರತಿಯ ರೂಪವನನು ಯಥಾವತ್ತಾಗಿ ಸ್ಕ್ಯಾನಿಂಗ್ ಮಾಡುವ ಮೂಲಕ ಜ್ಞಾನ ಸಂರಕ್ಷಣೆ ಸಂವರ್ಧನೆ ಕಾರ್ಯ ನಡೆಯುತ್ತಿದೆ.[೨೪] ಅಕ್ಷರಗಳಿಲ್ಲದ ಭಾಗಗಳನ್ನು ಪುನರಚಿಸುವ ಸಾಧನಗಳನ್ನು ಕಂಪ್ಯೂಟರಿನಿಂದ ಪ್ರಾಪ್ತವಾಗಿವೆ. ಇಲ್ಲವಾದ ಅಕ್ಷರಗಳನ್ನು ಗಣಕೀಕೃತ ಪಠ್ಯದಲ್ಲಿಯೇ ಹುಡುಕಿ ತೆಗೆಯುವುದು ಒಂದು ರೀತಿಯಾದರೆ, **ಸ್ಟೈಲೆಸ್** ಎನ್ನುವ ಪೆನ್ನಿನಂತಹ ಉಪಕರಣದಿಂದ ಬರೆದು ಸೇರಿಸುವುದು ಮತ್ತೊಂದು ರೀತಿಯ ಸಾಧ್ಯತೆಯಾಗಿದೆ. ಗಣಕ ಪರದೆಯ ಮೇಲೆ ಊನಗೊಂಡ ಹಸ್ತಪ್ರತಿಯನ್ನು ಹೀಗೆ ಹಲವು ಉಪಾಯಗಳಿಂದ ಪುನಾರಚಿಸಬಹುದಾಗಿದೆ.

ಹಸ್ತಪ್ರತಿಗಳನ್ನು ಸಂರಕ್ಷಿಸುವ, ಸಂಗ್ರಹಿಸಿಡುವ ಕೆಲಸದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕಂಪ್ಯೂಟರ್‌ನ್ನು ಬಳಕೆ ಮಾಡಲಾಗುತ್ತಿದೆ. ಕಂಪ್ಯೂಟರ್‌ನಿಂದಾಗಿ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಸಂಗ್ರಹದಲ್ಲಿ ಇದ್ದ ಪ್ರಾಚೀನ ವಿಧಾನವನ್ನು ಹಿಂದಕ್ಕೆ ಸರಿಸಿದೆ ಎನ್ನಬಹುದು. ಕಂಪ್ಯೂಟರ್‌ನಿಂದ ಹಸ್ತಪ್ರತಿಗಳನ್ನು ಸಂರಕ್ಷಣೆಯನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ೧೯೯೯ರಿಂದಲೂ ಮಾಡುತ್ತಿದೆ. ಮೊಟ್ಟ ಮೊದಲ ಬಾರಿಗೆ ಹಸ್ತಪ್ರತಿಗಳನ್ನು ಕಂಪ್ಯೂಟರ್‌ಗೆ ಒಳಪಡಿಸುವಲ್ಲಿ ಮಾಡಿದ ಕೀರ್ತಿ ಈ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ್ದು. ವಿಭಾಗದ ಪ್ರಾಧ್ಯಾಪಕರಾದ ಡಾ. ವೀರೇಶ ಬಡಿಗೇರ ಅವರು ನಾಡಿನಲ್ಲೇ ಮೊಟ್ಟ ಮೊದಲಿಗೆ ಕಂಪ್ಯೂಟರ್ ಮೂಲಕ ಹಸ್ತಪ್ರತಿಗಳನ್ನು ಸಂರಕ್ಷಣೆ ಮಾಡುವಲ್ಲಿ ಯಶಸ್ವಿಯಾಗಿದ್ದು ಪ್ರಸ್ತುತದಲ್ಲಿಯೂ ಈ ಕಾರ್ಯದಲ್ಲಿ ನಿರತರಾಗಿದ್ದಾರೆ.

**ಹಸ್ತಪ್ರತಿಗಳ ಸಂರಕ್ಷಣೆ ಹಾಗೂ ಪುನರ್‌ರಚನೆಯಲ್ಲಿ ಕಾರ್ಪಸ್ ತಂತ್ರಾಂಶ ಮತ್ತು ಓಸಿಆರ್(OCR) ತಂತ್ರಾಂಶ**

**ಕಾರ್ಪಸ್ ತಂತ್ರಾಂಶ :**

ಗಣಕ ಪರದೆಯ ಮೇಲೆ ಊನಗೊಂಡ ಹಸ್ತಪ್ರತಿಯೊಂದನ್ನು ಪರಿಷ್ಕರಿಸಲು ಮುಖ್ಯವಾಗಿ ಬೇಕಾಗಿರುವುದು ಕಾರ್ಪಸ್ ತಂತ್ರಾಂಶ. ಹಸ್ತಪ್ರತಿಗಳಂತಹ ಭಾಷಾ ಸಾಮಾಗ್ರಿಗಳ ಸಂರಕ್ಷಣೆಯ ಎಲ್ಲಾ ಕಾರ್ಯಗಳಿಗೆ ಆಧಾರವಾಗಿರುವುದೇ ಈ ಕಾರ್ಪಸ್. ಕಾರ್ಪಸ್ ಎಂದರೆ ಸೂಕ್ಷ್ಮವಾಗಿ ಎಚ್ಚರಿಕೆಯಿಂದ ಆಯ್ದ ಪ್ರಾತಿನಿಧಿಕ ಪಠ್ಯಗಳ ಎಲೆಕ್ಟ್ರಾನಿಕ್ ರೂಪದ ಸಂಗ್ರಹ. ಹಸ್ತಪ್ರತಿಗಳು ಪ್ರಧಾನವಾದ ಕಾರ್ಪಸ್ಸನ್ನು ಮೂರು ರೀತಿಯಲ್ಲಿ ಸೃಷ್ಟಿಸಬಹುದಾಗಿದೆ. ಅಂದರೆ ಹಸ್ತಪ್ರತಿಯೊಂದನ್ನು ಗಣಕೀಕರಣಕ್ಕೆ ಅಳಪಡಿಸಲು ಮೂರು ರೀತಿಯ ವಿಧಾನಗಳನ್ನು ಬಳಸಬಹುದು.

೧. ಡಿ.ಟಿ.ಪಿ ಸಾಫ್ಟ್‌ವೇರ್ ಅಥವಾ ಪದ ಸಂಸ್ಕರಣ ಅಥವಾ ಸಂಕಲನ ಬಳಸಿಕೊಂಡು ಕೀಬೋರ್ಡ್ ಸಹಾಯದಿಂದ ಕಂಪ್ಯೂಟರ್‌ಗೆ ಅಳವಡಿಸುವುದು. ಇದನ್ನು ಈ ಇನ್ ಮಾಡುವುದು ಎಂದು ಹೇಳಬಹುದು.

೨. ಸ್ಕ್ಯಾನರ್ ಯಂತ್ರದ ಮೂಲಕ ಸ್ಕ್ಯಾನ್ ಮಾಡುವುದು. ಅಥವಾ ಡಿಜಿಟಲ್ ಕ್ಯಾಮರಾ ಮೂಲಕ ಸೆರೆ ಹಿಡಿಯುವುದು.

೩. ಮೈಕ್ರೋಫೋನ್ ಮುಖಾಂತರ ಓದಿ ರೆಕಾರ್ಡ್ ಮಾಡುವುದು.

ಮೊದಲನೆಯ ವಿಧಾನವು ಹಸ್ತಪ್ರತಿಯಲ್ಲಿರುವ ಪಠ್ಯವನ್ನು ಕಂಪ್ಯೂಟರ್ ಕೀಬೋರ್ಡ್ ಮೂಲಕ ಬೆರಳಚ್ಚಿಸುವುದು. ಈ ವಿಧಾನದ ಕಾರ್ಯದಲ್ಲಿ ತುಂಬಾ ತಜ್ಞತೆ ಹೆಚ್ಚು ಸಮಯ ಮತ್ತು ಸಮಯ ಬೇಡುವಂಥದ್ದಾಗಿರುತತದೆ. ಆದರೆ ಹಸ್ತಪ್ರತಿಯ ಮೂಲರೂಪ ದೊರಕುವುದಿಲ್ಲ.

'ಎರಡನೆಯ ವಿಧಾನ ಹಸ್ತಪ್ರತಿಯ ಮೂಲರೂಪವನ್ನು ಯಥಾವತ್ತಾಗಿ ಹಿಡಿದಿಟ್ಟುಕೊಳ್ಳಲು ಸಹಾಯಕವಾಗುವಂಥದ್ದು. ಇದಕ್ಕೆ ಸ್ಕ್ಯಾನರ್ ಜೊತೆಗೆ ಡಿಜಿಟಲ್ ಕ್ಯಾಮರಾವನ್ನು ಬಳಸಿಕೊಳ್ಳಬಹುದು. ಹಸ್ತಪ್ರತಿಗಳ ಸ್ಥಿರ ಚಿತ್ರಣ ಪಡೆಯುವಲ್ಲಿ ಮತ್ತು ಅದನ್ನು ವಿವಿಧ ರೀತಿಯಲ್ಲಿ ಪರಿಷ್ಕರಿಸುವ ಮತ್ತು ಪುನ್ರರಚಿಸುವ ನಿಟ್ಟಿನಲ್ಲಿ ಈ ವಿಧಾನ ತುಂಬಾ ಉಪಯುಕ್ತವಾಗಿದೆ.'[೨೫]

ಮೂರನೆಯ ವಿಧಾನವು ಹಸ್ತಪ್ರತಿಗಳ ಸ್ಥಿರಚಿತ್ರಣಗಳ ಬದಲಾಗಿ ಆ ಪಠ್ಯದ ಧ್ವನಿ ರೂಪವನ್ನು ನಮಗೆ ಕೊಡುತ್ತದೆ. (ಮಾತಿನಿಂದ ಪಠ್ಯಕ್ಕೆ ಸಾಫ್ಟ್‌ವೇರ್‌ನ ಸಹಾಯದಿಂದ ಹಸ್ತಪ್ರತಿಗಳನ್ನು ಓದಿ ಅದನ್ನು ಸಂಕಲಿಸಬಹುದಾದ ಪಠ್ಯವನ್ನಾಗಿ ಪರಿವರ್ತಿಸಿಕೊಳ್ಳಬಹುದಾಗಿದೆ.

**ಸಂಕಲನ ಮತ್ತು ಪರಿಷ್ಕರಣಾ ಕಾರ್ಯದಲ್ಲಿ ಕಾರ್ಪಸ್ ತಂತ್ರಾಂಶ**

ಹಸ್ತಪ್ರತಿಯೊಂದರ ಸಂಕಲನ ಮತ್ತು ಪರಿಷ್ಕರಣಕ್ಕೆ ಟೈಪ್ ಟೋಕನ್(Type Token) ಹಾಗೂ ಮಾರ್ಫಾಲಾಜಿಕಲ್ ವಿಶ್ಲೇಷಕಗಳು ತುಂಬಾ ಸಹಕಾರಿಯಾಗಿವೆ. **ಕಾರ್ಪಸ್**ನಿಂದ ನಾವು ಎಲ್ಲಾ ನಿರ್ದಿಷ್ಟ ಪದರೂಪಗಳ ಸಹಾಯದಿಂದ ಶಬ್ದ ವಿಶ್ಲೇಷಕ ಬಳಸಿ ಒಂದು ಪದದ ಮೂಲ ರೂಪವನ್ನು ಅದರ ಆಂತರಿಕ ರಚನೆಯ ವಿನ್ಯಾಸಗಳನ್ನು ಮತ್ತು ಸಹೋದರ ಭಾಷೆಗಳಲ್ಲಿ ಅದು ಪಡೆದಿರುವ ಅರ್ಥಗಳನ್ನು ಹುಡುಕಿ ಪಡೆಯಬಹುದಾಗಿದೆ. Key-word-in context ಉಪಕರಣದ ಮೂಲಕ **ಕಾರ್ಪಸ್**ನಲ್ಲಿ ನಿರ್ದಿಷ್ಟ ಪದವು ಬಳಕೆಯಾಗಿರುವ ಎಲ್ಲಾ ವಾಕಯಗಳ ಪಟ್ಟಿಯನ್ನು ತಯಾರಿಸಬಹುದು. ಒಂದು ಪದವು ವಿಭಿನ್ನ ಸಂದರ್ಭದಲ್ಲಿ ಯಾವ ಯಾವ ಅರ್ಥದಲ್ಲಿ ಬಳಕೆಯಾಗಿದೆ. ಎಷ್ಟೆಷ್ಟು ಸಲ ಬಳಕೆಯಾಗಿದೆ ಎನ್ನುವುದನ್ನು ಕಂಡುಕೊಳ್ಳಬಹುದಾಗಿದೆ. ಇದು ಕೃತಿಕಾರನೊಬ್ಬನ ಜೀವನ ದೃಷ್ಟಿಯನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ಉದಾಹರಣೆಗೆ ಮುದ್ದಣ ತನ್ನ ಒಟ್ಟು ಕಾವ್ಯಗಳಲ್ಲಿ ಉಪಯೋಗಿಸಿದ ಸ್ತ್ರೀವಾಚಿ ಶಬ್ದಗಳನ್ನು ಪಟ್ಟಿ ಮಾಡಿದರೆ ಪಟ್ಟಿ ಸುಮಾರು ೯೦೦ ಬಾರಿ ಉಪಯೋಗಿಸಿದ್ದನ್ನು ಕಂಪ್ಯೂಟರ್ ಹೇಳುತತದೆ. ಗ್ರಂಥ ಸಂಪಾದಕನಾದವನು(ಅದ) ಒಂದು ಪದ ಪ್ರಯೋಗವನ್ನು ಅದರ ವೈವಿಧಯಮಯ ಅರ್ಥ ವಿನ್ಯಾಸಗಳನ್ನು ಕಾಣಲು ಹಾಳೆ-ಲೇಖನಿ ಹಿಡಿದು ಪ್ರತಿ ಕೃತಿಯನ್ನು ಓದು ಗುರುತಂ ಹಾಕಿಕೊಂಡು ವರ್ಗೀಕರಿಸಿ ಅಭ್ಯಸಿಸಬೇಕಾಗುತ್ತದೆ. ಇದು ಶ್ರಮ ಮತ್ತು ಸಮಯಗಳೆರಡನ್ನು ಹೆಚ್ಚು ಬೇಡುತ್ತದೆ. ಇಂತಹ ಕೆಲಸಗಳು ಕಂಪ್ಯೂಟರ್‌ನಿಂದ ಬೇಗ ಮಾಡಲು ಸಾಧ್ಯವಾಗುತ್ತದೆ.[೨೬]

ಒಂದು ಕಾವ್ಯದ ಸಂಪಾದನೆಯಲ್ಲಿ ಅಥವಾ ಪಠ್ಯವೊಂದರ ಸಂಕಲನದಲ್ಲಿ ಅದರಲ್ಲಿನ ಅಕ್ಷರ, ಮಾತ್ರೆ, ಪದ, ವಾಕ್ಯ ಸಾಲುಗಳ ಅಂಕಿ ಸಂಖ್ಯಾ ವಿಶ್ಲೇಷಣೆ ಕೂಡ ಬಹಳ ಮಹತ್ವದ ಪಾತ್ರವಹಿಸುತ್ತವೆ. ಇದಕ್ಕೆ Statistical Pastaggar ಸಾಫ್ಟ್‌ವೇರ್‌ಗಳು ಸಹಕಾರಿಯಾಗಿವೆ. ಉದಾಹರಣೆಗೆ ವಚನ ಸಾಹಿತ್ಯ ಸಂಪಾದನೆ ಮಾಡಲು ಹೊರಟಾಗ ವಚನ ಮಿಶ್ರಣ ಮತ್ತು

ಪಾಠ ಮಿಶ್ರಣದ ಹಾವಳಿ ಕಂಡುಬರುತ್ತದೆ. ಶರಣರಲ್ಲದವರ ವಚನಗಳು ಇಲ್ಲಿ ಕಾಣಿಸುತ್ತವೆ. ಖೋಟಾ ಕಟ್ಟುಗಳಾದ ಮುಕ್ತ ಕಂಠಾಭರಣದಂತಹ ವಚನಗಳು ಸಿಗುತ್ತವೆ.[೨] ಇವುಗಳನ್ನು ಬೇರ್ಪಡಿಸಿ ನೋಡುವುದು ಕಷ್ಟಸಾಧ್ಯ. ಕಂಪ್ಯೂಟರ್ ಭಾಷಾ ಸಂಸ್ಕರಣ ಘಟಕಗಳು. ಶಬ್ದ ವಿಶ್ಲೇಷಕಗಳು ಇಂದು ಇಂತಹ ಕಷ್ಟಸಾಧ್ಯದ ಕೆಲ ಸಾಧ್ಯವಾಗುವಂತೆ ಮಾಡುವ ಸಾಮರ್ಥ್ಯ ಪಡೆದಿವೆ.

ಪಠ್ಯವೊಂದರ ಗಣಕೀಕರಣದಿಂದಾಗಿ ಪದ ಮತ್ತು ವಾಕ್ಯಗಳಲ್ಲಿ ಸತತ ಬಳಕೆಯಾಗಲಿರುವ ವಿರಳ ಬಳಕೆಯಲ್ಲಿರುವ ವಿಶಿಷ್ಟವಾದ ಸಂದರ್ಭಕ್ಕೆ ಸೀಮಿತವಾದ ಭಾಷೆಯ ನಿಜಪ್ರತಿನಿಧಿಯಾದ ಮತ್ತು ಅಲ್ಲದ ವಿವರಗಳನ್ನು ಕಂಡುಕೊಳ್ಳಬಹುದಾಗಿದೆ. ನಮ್ಮ ಕಂಪ್ಯೂಟರ್‌ನಲ್ಲಿ ಒಳ್ಳೆಯ ಎಲೆಕ್ಟ್ರಾನಿಕ್ ನಿಘಂಟುಗಳ ಮಾರ್ಫಾಲಾಜಿಕಲ್ ವಿಶ್ಲೇಷಕಗಳು, ವಾಕ್ಯ ವಿಶ್ಲೇಷಕಗಳು (ಫೆಸಸ್) ಅರ್ಥವಿವೇಚಕಗಳು (ಸೆಮ್ಯಾಂಟಿಕ್ ಇಂಟರ್ ಪ್ರಿಟರ್) ಧ್ವನಿಲಿಪಿ ವಿಶ್ಲೇಷಕಗಳು (ಪೊನೆಟಿಕ್ ಸ್ಕ್ರಿಪ್ಟ್) ಮತ್ತು ಜನರೇಟರ್ (ಪದ ಉತ್ಪಾದಕಗಳು) ಇದ್ದರೆ ಅವುಗಳ ಸಹಾಯದಿಂದ ಕಾಗುಣಿತ ಪರಿಶೀಲಕ (Spell checker)ಗಳನ್ನು ರೂಢಿಸಿಕೊಳ್ಳಬಹುದು. ಸಂಕಲನನುಸಂಧಾನವನ್ನು ಸರಳ ಮಾಡಿಕೊಳ್ಳಬಹುದು.

'ಕಾಗುಣಿತ ಪರಿಶೀಲಕಗಳು ಗ್ರಂಥಸಂಪಾದನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇದರಲ್ಲಿ ಎರಡು ವಿಧ. ಒಂದು ಪತ್ತೆ ಹಚ್ಚುವ ಭಾಗ, ಎರಡನೆಯದು ತಿದ್ದುವ ಭಾಗ, ಕಂಪ್ಯೂಟರ್‌ಗೆ ಅಳವಡಿಸಿದ ಪಠ್ಯದಲ್ಲಿ ಎಲೆಕ್ಟ್ರಾನಿಕ್ ನಿಘಂಟುವಿನ ಸಹಾಯದಿಂದ ಸೂಕ್ತ ಸಂಜ್ಞೆಗಳೊಂದಿಗೆ ಇಂತಹ ತಪ್ಪುಗಳನ್ನು ಪತ್ತೆ ಮಾಡಬಹುದು. ತಿದ್ದುವ ಭಾಗವು ಪರಿಮಾಣಾತ್ಮಕ ಮತ್ತು ನಿರ್ದಿಷ್ಟ ವಾಕ್ಯಕ್ಕೆ ಕನಿಷ್ಠ ದೂರ(Minimum Edit Distance) ಮುಂತಾದವುಗಳನ್ನು ಬಳಸಲಾಗುತ್ತದೆ. Statical pos taggar. Hidden mature model ಆಧಾರಿತ ಒಂದು ಸಾಫ್ಟ್‌ವೇರ್ ಕೂಡ ಪದ್ಯದಲ್ಲಿನ ಪದ ಬಳಕೆಯ ಸಂದರ್ಭ ಅದರ ವ್ಯಾಕರಣ ಅಂಶಗಳನ್ನು ನೀಡುತ್ತದೆ. ಹೀಗೆ ಪಠ್ಯಗಳನ್ನು Tag ಮಾಡಲು ಸಂಸ್ಕರಿಸಲು ಮಾರ್ಫಲಾಜಿ ಆಧರಿಸಿದ ಭಾಷಾ ವಿಜ್ಞಾನದ ತಂತ್ರಗಳು ತುಂಬ ಉಪಯುಕ್ತವಾಗಿವೆ. ಇದೂ ಅಲ್ಲದೆ Speech corpus and Text corpusಗಳು ಮಾತಿನಿಂದ ಪಠ್ಯಕ್ಕೆ–ಪಠ್ಯದಿಂದ ಮಾತಿಗೆ ಪರಿವರ್ತಿತವಾಗುವ ವ್ಯವಸ್ಥೆಗಳಲ್ಲಿ ಭಾಷೆ ಉಪಭಾಷೆಗಳ ಗುರುತಿಸುವಿಕೆಯಲ್ಲಿ ತುಂಬಾ ಸಹಾಯಕವಾಗಿವೆ.[೨೮] ವಿಶೇಷವಾಗಿ ಕನ್ನಡ ಸಾಹಿತ್ಯದ ಅಧ್ಯಯನ ಮತ್ತು ಪರಿಷ್ಕರಣದಲ್ಲಿ ಈ ಸಾಫ್ಟ್‌ವೇರ್‌ಗಳು ಅತ್ಯುಪಯುಕ್ತವಾಗಿವೆ ಎಂದು ಹೇಳಬಹುದು.

ಈ ಎಲ್ಲಾ ಭಾಷಾ ಸಂಸ್ಕರಣೆಗೆ ಪ್ರಮುಖ ಆಧಾರವೇ ಕಾರ್ಪಸ್. ಉತ್ತಮ ಕಾರ್ಪಸ್‌ನ ಸೃಷ್ಟಿ ಕನ್ನಡ ಹಸ್ತಪ್ರತಿಗಳ ಸಂಕಲನ ಮತ್ತು ಅಧ್ಯಯನಕ್ಕೆ ಸಹಾಯಕಾರಿಯಾಗಿದೆ.

**ಓ.ಸಿ.ಆರ್. (OCR) ತಂತ್ರಾಂಶ:**

ಓ.ಸಿ.ಆರ್. ಅಂದರೆ ಆಪ್ಟಿಕಲ್ ಕ್ಯಾರೆಕ್ಟರ್ ರೀಡರ್. ಕನ್ನಡದ ಸಂದರ್ಭದಲ್ಲಿ ಇದರ ಅಗತ್ಯವಿದೆ. ಇದು ಟೈಪಿಂಗ್ ಮತ್ತು ಸ್ಕ್ಯಾನಿಂಗ್‌ನ ಲಕ್ಷಣಗಳಿಗಿಂತ ಭಿನ್ನವಾದುದು. ಅಪಾರ ಹಸ್ತವೈವಿಧ್ಯವಿರುವ ಕನ್ನಡದ ಹಸ್ತಪ್ರತಿಗಳ ಸಂದರ್ಭದಲ್ಲಿ ಈ ಘಟಕ ಬಹುಮುಖ್ಯವಾದುದಾಗಿದೆ. ಹಾಗೂ ಪತ್ರಿಕೆಗಳಿಗಂತೂ ಇದು ವರದಾನವಾಗಿದೆ.

ಸ್ಕ್ಯಾನರ್ ಮೂಲಕ ಯಾವುದೇ ತರಹದ ಕೈ ಬರಹವುಳ್ಳ ಕನ್ನಡದ ಹಸ್ತಪ್ರತಿಯನ್ನು ಕಂಪ್ಯೂಟರ್‌ಗೆ ಅಳವಡಿಸಿದಾಗ ಅದು ದರ್ಶಕದ ಮೇಲೆ ಮೂಡುವ ಹೊತ್ತಿಗೆ ಶುದ್ಧಪ್ರತಿಯಾಗಿ ಪ್ರಕಟವಾಗುತ್ತದೆ. ಅಂದರೆ ನಾವು ಬಳಸುವ ಹಲವಾರು ಫಾಂಟುಗಳಲ್ಲಿ ಕೈಬರಹವನ್ನು ಟೈಪಿಂಗ್ ಸಹಾಯವಿಲ್ಲದೆಯೇ ನೇರವಾಗಿ ಮುದ್ರಿಸಿಕೊಳ್ಳಬಹುದಾಗಿದೆ. ಹೀಗಾಗಬೇಕಾದರೆ ಕನ್ನಡದಲ್ಲಿ ಬಳಕೆಯಾಗುವ ಅಕ್ಷರಗಳ, ಅದರ ಎಲ್ಲ ಸಾಧ್ಯತೆಗಳ ಗುಣಲಕ್ಷಣಗಳನ್ನು ಗಣಕಕ್ಕೆ ಉಣಿಸಬೇಕಾಗುತ್ತದೆ. ಇದಕ್ಕೆ ಭಾಷಾಶಾಸ್ತ್ರಜ್ಞರ, ಕಂಪ್ಯೂಟರ್ ಮತ್ತು ಸಾಫ್ಟ್‌ವೇರ್ ತಂತ್ರಜ್ಞರ ಜಂಟಿ ಪ್ರಯತ್ನ ಅನಿವಾರ್ಯವಾಗುತ್ತದೆ. ಈ ಪ್ರಯತ್ನ ಕನ್ನಡಕ್ಕೆ ಜರೂರಾಗಿ ಬರಬೇಕಾಗಿದೆ. ಇದರಿಂದ ಮುದ್ರಿತ ಸಂದರ್ಭದ ವೇಳೆ ಹಣ ಶ್ರಮ ಎರಡೂ ಉಳಿತಾಯವಾಗುತ್ತದೆ.

"ಇದುವರೆಗೂ ಸ್ಕ್ಯಾನಿಂಗ್‌ನಲ್ಲಿ ಫೋಟೋಗ್ರಫಿಯಂತೆ ಮೂಲಪ್ರತಿಯ ಯಥಾವತ್ತಾದ ನಕಲನ್ನು ಮಾತ್ರ ನೋಡುವ ಸಾಧ್ಯತೆ ನಮಗಿತ್ತು. ಈ ಓ.ಸಿ.ಆರ್. ಸಹಾಯದಿಂದ ಹಸ್ತಪ್ರತಿಗಳಲ್ಲಿನ ಬರಹವನ್ನು ನಮಗೆ ಬೇಕಾದಲ್ಲಿ ಬೇಕಾದ ಹಾಗೆ ಬದಲಾಯಿಸಬಹುದಾಗಿದೆ. ಅಂದರೆ ಗಣಕೀಕೃತ ಪಠ್ಯದಲ್ಲಿನ ಅಕ್ಷರಗಳನ್ನು ಬೋಲ್ಡ್ ಮಾಡುವ, ಪ್ಯಾರಾ ಮಾಡಿಕೊಳ್ಳುವ, ಬೇಕಾದ ಅಳತೆಗೆ ಹಿಗ್ಗಿಸುವ ಮತ್ತು ಕುಗ್ಗಿಸಿಕೊಳ್ಳುವ ಪಠ್ಯವೊಂದಕ್ಕೆ ಬೇಕಾದ ತಲೆಬರಹ ಕೊಡುವ ಸೌಲಭ್ಯಾಕಾಂಕ್ಷೆಗಳು ಲಭ್ಯವಾಗಿವೆ."[೫೯] ಹೀಗೆ ಹಸ್ತಪ್ರತಿ ಸಂರಕ್ಷಣೆಯಲ್ಲಿ ಆಧುನಿಕ ಸಾಫ್ಟ್‌ವೇರ್‌ಗಳಾದ ಕಾರ್ಪಸ್ ಮತ್ತು ಓ.ಸಿ.ಆರ್.ನಿಂದ ತುಂಬಾ ಅನುಕೂಲವಿದೆ.

**ಮೈಕ್ರೋಫೋನ್**

ಹಸ್ತಪ್ರತಿಯಲ್ಲಿರುವ ಸಾಹಿತ್ಯವನ್ನು ಗಟ್ಟಿ ಧ್ವನಿಯಿಂದ ಓದುವುದರ ಮೂಲಕ ಅಕ್ಷರ ರೂಪಗಳನ್ನಾಗಿ ಮೈಕ್ರೊಫೋನ್ ಪರಿವರ್ತಿಸಿಕೊಳ್ಳುತ್ತದೆ. ಇದು ಹಸ್ತಪ್ರತಿಗಳ ಮೂಲರೂಪವನ್ನು ಕಟ್ಟಿಕೊಡಲಾರದು. ಹೀಗೆ ಕಂಪ್ಯೂಟರಿನಲ್ಲಿ ಏನೆಲ್ಲಾ ಮಾಡಿ ಹಸ್ತಪ್ರತಿಗಳಂಥ ಪ್ರಾಚೀನ ಗ್ರಂಥಭಂಡಾರವನ್ನೇ ತುಂಬಿಡುವಂಥ ಕೆಲಸ ಮಾಡುತ್ತದೆ. Pendrive, DVD, CD RAMಗಳಲ್ಲಿ ಇವುಗಳನ್ನು ಶೇಖರಿಸಿಕೊಂಡು ಎಲ್ಲಿ ಬೇಕಾದರೂ ಸಾಗಿಸಬಹುದು, ಎಲ್ಲಿ ಬೇಕಾದರೂ ಬಳಸಬಹುದು.

**ಎಲೆಕ್ಟ್ರಾನಿಕ್ ದಾಖಲೀಕರಣ:**

"ಹಸ್ತಪ್ರತಿಗಳ ಭೌತಿಕ ಸ್ವರೂಪವನ್ನೊಳಗೊಂಡಂತೆ ಕವಿಯ ನಾಮ/ಉಪನಾಮ, ಕೃತಿನಾಮ/ಉಪನಾಮ, ಕಾಲ, ಬರವಣಿಗೆಯ ಕಾಲ ಬರವಣಿಗೆಯ ವಿಷಯ (ಉದಾ: ಶಾಸ್ತ್ರ, ವೈದ್ಯ, ರಟ್ಟಮತ, ವೀರಶೈವ, ಜೈನ ಇತ್ಯಾದಿ ಸಮಗ್ರ, ಅಸಮಗ್ರ ಕಟ್ಟುಗಳ ಅನುಕ್ರಮ ಸಂಖ್ಯೆ, ಆ ಕಟ್ಟಿನಲ್ಲಿರುವ ಕೃತಿಗಳ ಸಂಖ್ಯೆ ಪುಟ ಗರಿಗಳ ಸಂಖ್ಯೆ, ಗರಿಗಳು ತೃಟಿತವೋ/ಉತ್ತಮವೋ, ಒಟ್ಟು ಹಸ್ತಪ್ರತಿ ಮತ್ತು ಲಿಪಿಗಳ ಶುದ್ಧತೆಯನ್ನು ನಮೂದಿಸಲಾಗಿರುವ ನಮೂನೆಯಲ್ಲಿ ಹಸ್ತಪ್ರತಿ ಕ್ಷೇತ್ರ ಸಂದರ್ಭದಲ್ಲಿ ದಾಖಲಿಸಿದ ಮಾಹಿತಿಯನ್ನು ಇದರ ಮೂಲಕ ಕಂಪ್ಯೂಟರಿಗೆ ದಾಖಲಿಸುವುದು. ಎಲ್ಲಾ ಸಂಘ-ಸಂಸ್ಥೆಗಳಲ್ಲಿ ಹಾಗೂ ವೈಯಕ್ತಿಕ ಒಡೆತನದಲ್ಲಿರುವ ಎಲ್ಲ ಹಸ್ತಪ್ರತಿಗಳನ್ನು ದಾಖಲಿಸುವುದು ಉದ್ದೇಶವಾಗಿದೆ."[೩೦] ಈ ನಿಟ್ಟಿನಲ್ಲಿ ಕೇಂದ್ರದ ನ್ಯಾಷನಲ್ ಮಿಶಿನ್ ಫಾರ್ ಮ್ಯಾನುಸ್ಕ್ರಿಪ್ಟ್ಸ್ ಸಂಸ್ಥೆಯು ಇಡೀ ದೇಶದಲ್ಲಿರುವ ಹಸ್ತಪ್ರತಿಗಳನ್ನು ದಾಖಲಿಸುವುದು ಉದ್ದೇಶವಾಗಿದೆ. ಈ ಸಂಸ್ಥೆಯ ಅನುದಾನದಡಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ಕರ್ನಾಟಕದ ೧೧ ಜಿಲ್ಲೆಗಳಲ್ಲಿ ಮನೆಯಿಂದ ಮನೆಗೆ ಎಂಬಂತೆ ಕ್ಷೇತ್ರಕಾರ್ಯ ಮಾಡಿ ಮಾಹಿತಿ ಸಂಗ್ರಹಿಸಿದೆ. ಇದುವರೆಗೂ ಸುಮಾರು ಒಂದು ಲಕ್ಷದ ಅರವತ್ತು ಸಾವಿರ ಕೃತಿಗಳನ್ನು ಗುರ್ತಿಸಿ ದಾಖಲಿಸಿದೆ ಎಂಬುದು ಹೆಮ್ಮೆಯ ಸಂಗತಿ. ಈ ಕಾರ್ಯಸ್ವರೂಪವು ಸಂಕ್ಷಿಪ್ತ ಸೂಚೀಕರಣದ ಮಾದರಿಯಲ್ಲಿದೆ. ಇದರಿಂದ ಹಸ್ತಪ್ರತಿಯಲ್ಲಿಯ ಸಂಪೂರ್ಣ ಪಠ್ಯ ಲಭ್ಯವಾಗುವುದಿಲ್ಲ. ಅಧ್ಯಯನಾಸಕ್ತರು ತಮಗೆ ಬೇಕಾದ ಹಸ್ತಪ್ರತಿಗಳನ್ನು ಇದರಿಂದ ವಿಳಾಸ ಪಡೆದು ಬೇಗನೆ ಹುಡುಕಿಕೊಂಡು ಅಧ್ಯಯನ ಮಾಡಬಹುದಾಗಿದೆ. "ಇಂತಹ ವ್ಯವಸ್ಥೆ ಜಗತ್ತಿನಲ್ಲಿ ತಮ್ಮದೇ ವೆಬ್‌ಗಳ ಮೂಲಕ ಪ್ರಸಾರ ಮಾಡುತ್ತಿವೆ. ಮತ್ತು ಸಂರಕ್ಷಿಸುತ್ತಿವೆ. ಅಂತರಾಷ್ಟ್ರೀಯ ಮಟ್ಟದಲ್ಲಿ International Federation of Library Association ಅಂತ ಮಾಡಿದ್ದಾರೆ. ಇದರ ಮುಖ್ಯ ಗುರಿ ನಮ್ಮ ವಿಶ್ವದಾದ್ಯಂತ ಈ ಪುಸ್ತಕ ಸಂಸ್ಕೃತಿ ಏನಿದೆಯಲ್ಲಾ ಅದನ್ನು ಒಂದು ಚೌಕಟ್ಟಿನಲ್ಲಿ ತರಬೇಕು. ೧೯೨೭ರಲ್ಲಿ ಥೈಲ್ಯಾಂಡಿನಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಇದರಲ್ಲಿ ೪೪ ವಿಭಾಗಗಳನ್ನು ಮಾಡಿದ್ದಾರೆ. ಈ ವಿಭಾಗದಲ್ಲಿ Rare books and manuscript ಅಂತ ಮಾಡಿ ಹಸ್ತಪ್ರತಿಗಳನ್ನು ಇದರ ಮುಖಾಂತರ ಮುಖ್ಯವಾಹಿನಿಗೆ ತರುವ ಆಲೋಚನೆಯಲ್ಲಿದೆ."[೩೧] ಹೀಗೆ ದಾಖಲಾದವುಗಳನ್ನು ಅಂತರ್ಜಾಲದ ಮೂಲಕ ಪ್ರಸರಣ ಮಾಡಬಹುದು.

**೫.೫. ತಂತ್ರಜ್ಞಾನ: ಸಾಹಿತ್ಯ ಅಧ್ಯಯನದ ಹೊಸ ಪ್ರಯೋಗಗಳು**

**೫.೫.೧. ಕಾವ್ಯಾಭ್ಯಾಸ**

"ಸಾಹಿತ್ಯ ರಂಗದಲ್ಲಿ ಕಂಪ್ಯೂಟರ್ ತಂತ್ರಜ್ಞಾಜದ ಬಳಕೆ ಮೊಟ್ಟಮೊದಲಿಗೆ ಕಾರ್ನೆಲ್ ವಿಶ್ವವಿದ್ಯಾಲಯದಲ್ಲಿ ೧೯೫೯ ರಲ್ಲಿ ಡಿಕಿನ್ಸಗಳ ಶಬ್ದ ಪ್ರಯೋಗ ಕೋಶದ ರಚನೆಯಿಂದ

ಆಯಿತು. ಕಂಪ್ಯೂಟರ್ ಈಗಾಗಲೇ ಭಾಷಾಭ್ಯಾಸ ಗ್ರಂಥಸಂಪದನಾ ಕಾರ್ಯ, ಗ್ರಂಥಕತೃತ್ವ ನಿರ್ಣಯ, ಶೈಲಿ,ಮುಂತಾದ ರಂಗಗಳಲ್ಲಿ ನೆರವಾಗಿದೆ.ಕಂಪ್ಯೂಟರ್ ಸ್ವಯಂ ಸಂಶೋಧನೆಯನ್ನೇನು ಮಾಡುವುದಿಲ್ಲ. ಸಾಹಿತ್ಯದ ಕೃತಿಗಳನ್ನು, ಶಬ್ದಗಳ ಪಟ್ಟಿ ಅಥವಾ ಪ್ರಯೋಗ ಸಹಿತವಾದವುಗಳನ್ನು ಕೊಟ್ಟು ಸಂಶೋಧನೆಗೆ ನೆರವಾಗುತ್ತದೆ."[೨]

ಸಾಹಿತ್ಯ ವಿಮರ್ಶಕ ಅಥವಾ ಸಾಹಿತ್ಯ ಸಂಶೋಧಕನಾದವನು ಸಾಹಿತ್ಯ ಕೃತಿಗಳಲ್ಲಿನ ಶಬ್ದಗಳ ಪಟ್ಟಿ, ಹಾಗೂ ಇರ ಪ್ರಯೋಗ ಸಹಿತವಾದ ಪದಗಳನ್ನು ಆಯ್ದು ಪದಕೋಶ ರಚನೆ ಮಾಡುವುದು ಕಷ್ಟದ ಕೆಲಸ ಹಾಗೂ ಸಮಯ ಹೆಚ್ಚು ತೆಗೆದುಕೊಳ್ಳುತ್ತದೆ. ಆದರೆ ಕವಿಯೂ ಕಾವ್ಯವನ್ನು ಗಣಕ ಯಂತ್ರಕ್ಕೆ ಅಳವಡಿಸಿದರೆ ಅದು ಒಂದೊಂದು ಶಬ್ದ ತಾನೇ ಆಯ್ದುಕೊಂಡು ಪ್ರಯೋಗ ವಾಕ್ಯವನ್ನು ಕೊಡುವುದಕ್ಕೆ ಅಕಾರಾದಿಯಾಗಿ ಜೋಡಿಸಿ ಮುದ್ರಿಸಿ ಬಿಡುತ್ತದೆ. ಮನುಷ್ಯರು ಸ್ವ-ಪರಿಶ್ರಮದಿಂದ ಈ ರೀತಿಯ ಕೆಲಸ ಮಾಡುವಾಗ ತಪ್ಪಾಗಬಹುದು. ಆದರೆ ಕಂಪ್ಯೂಟರ್ ತಪ್ಪು ಮಾಡುವುದಿಲ್ಲ. ಶಬ್ದ-ಪ್ರಯೋಗ ಕೋಶವು ಶ್ರಮ ಮತ್ತು ಸಮಯದ ಉಳಿತಾಯದದಿಂದ ರಚನೆಯಾಗುವುದು ಮುಖ್ಯ ಕಾರ್ಯವಾಗುತ್ತದೆ.

ಶಬ್ದ-ಪ್ರಯೋಗ ಕೋಶ ರಚನೆಗೆ ಸಂಬಂಧಿಸಿದಂತೆ ಆಗುವ ಶ್ರಮವು ತಗಲುವ ಸಮಯದ ಬಗ್ಗೆ ಕೆಲವೊಂದು ಕಾರ್ಯಗತವಾದ ಉದಾಹರಣೆಯನ್ನು ನೋಡುವುದಾದರೆ ಥಾಮಸ್ ಎಕ್ವಿನಾ ಎಂಬ ಮಹಾ ಭಾಷ್ಯಕಾರ ೧೩ ನೆಯ ಶತಮಾನದ ಸಂದರ್ಭದಲ್ಲಿ ಕ್ರೈಸ್ತ ತತ್ವಜ್ಞಾನವನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದನು. ಈ ಗ್ರಂಥದಲ್ಲಿತುವ ಶಬ್ದಗಳ ಪ್ರಯೋಗ ಕೋಶ ತಯಾರಿಸಲು ರಾಬರ್ಟ್ ಬೂಸಾ ಎಂಬ ಪಾದರಿ ಮುಂದಾದನು. ಹತ್ತು ಜನ ವಿದ್ವಾಂಸರು ಈ ಕೆಲಸಕ್ಕೆ ಪೂರ್ಣಾವಧಿ ತೊಡಗಿದರೆ ಅದನ್ನು ಮುಗಿಸಲು ೪೦ ವರ್ಷಗಳು ಬೇಕಾಗುವವೆಂದು ಅಂದಾಜು ಮಾಡಿ ೧೯೩೮ ರ ಸುಮಾರಿಗೆ ಆರಂಭಿಸಿದನು. ಅಷ್ಟರಲ್ಲಿ ಕಂಪ್ಯೂಟರಿನ ಸಹಾಯ ಈ ಕ್ಷೇತ್ರಕ್ಕೆ ಬಂದಿತ್ತು. ಆದ್ದರಿಂದ ರಾಬರ್ಟ್ ಬೂಸಾ ಕೈಯಿಂದ ಪಟ್ಟಿಕೆಗಳನ್ನು ಬರೆಯುವ ಕೆಲಸವನ್ನು ಬದಿಗಿರಿಸಿ ಕಂಪ್ಯೂಟರ್‌ಗೆ ಸಾಮಾಗ್ರಿಗಳನ್ನು ಪೂರೈಸತೊಡಗಿದ. ಇವನು ೧೯೪೮ ರಿಂದ ಈ ಕಾರ್ಯದಲ್ಲಿ ನಿರತನಾದ ಎಂದು ವರ್ಷಗಳಲ್ಲಿ ಈ ಕೆಲಸವನ್ನು ಪೂರೈಸಿದ. ಥಾಮಸ್ ಎರ್ಕ್ವಿನಾ (ಎಂಬ) ತನ್ನ ಗ್ರಂಥಗಳಲ್ಲಿ ಬಳಸಿದ ಒಟ್ಟು ಪದಗಲ ಸಂಖ್ಯೆ ಸುಮಾರು ೧ ಕೋಟಿಯಾಗಿತ್ತು. ಕಂಪ್ಯೂಟರ್‌ಗೆ ಪದ ಸಮೂಹವೊಂದು ಪೂರೈಸಿದ ಮೇಲೆ ಇನ್ನೂ ಹಲವಾರು ಪ್ರಯೋಜನ ಪಡೆಯಬಹುದಾಗಿದೆ. ಪದ ಸಮೂಹದಲ್ಲಿ ಅಕಾರಾದಿಯಾಗಿ ಹೊಂದಿಸಿಕೊಳ್ಳುತ್ತದೆ.

ಅಕಾರಾದಿಯಾಗಿ ಹೊಂದಿಸಿದ ಕೆಲವು ಶಬ್ದಗಳನ್ನು ಕಾಣುವಲ್ಲಿ ಶಬ್ದಗಳು ಹೆಣೆದುಕೊಂಡು ಸಾಲುಗಟ್ಟಲೆ ಮುಂದುವರೆಯುತ್ತವೆ. ಬಹುವ್ರೀಹಿಸಮಾಸ ಪದವಿದ್ದರಂತೂ ಆ ಎರಡು ಶಬ್ದಾರ್ಥಗಳನ್ನು ಬಿಟ್ಟು ಮೂರನೆಯ ಅರ್ಥವೇ ಹೊರಡುವುದು. ಆದ್ದರಿಂದ ಕನ್ನಡ

ಕಾವ್ಯವೊಂದರ ಶಬ್ದ ಪ್ರಯೋಗ ಕೋಶವನ್ನು ತಯಾರಿಸುವಾಗ ಕೂಡು ನುಡಿಗಳನ್ನು ಒಡೆಯ ಬೇಕಾಗುವುದು. ಮತ್ತು ಕೂಡು ನುಡಿಯಲ್ಲಿ ಬರುವ ಶಬ್ದಗಳನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳುವುದರ ಜೊತೆಗೆ ಇಡಿಯಾಗಿಯೂ ಅದನ್ನು ಗಮನಿಸುವುದೂ ಬೇಕಾಗುವುದು. ಕಂಪ್ಯೂಟರ್ ತಾನಾಗಿಯೇ ಈ ಕಾರ್ಯವನ್ನು ನಿರ್ವಹಿಸಬೇಕಾದರೆ, ಕೆಲವು ವಿಶಿಷ್ಟ ಚಿಹ್ನೆಗಳನ್ನು ಬಳಸಿ ಶಬ್ದಗಳನ್ನು ಬೇರ್ಪಡಿಸಲು ಸೂಚಿಸಬೇಕಾಗುವುದು. ಈ ದಿಸೆಯಲ್ಲಿ ಕೆಲವೊಂದು ವಿಧಾನಗಳು ಇಂತಿವೆ.

ಎರಡು ಶಬ್ದಗಳನ್ನು ಬೇರ್ಪಡಿಸುವುದರ ಸಂಕೇತವಾಗಿ/ ಈ ಚಿಹ್ನೆಯನ್ನು ಬಳಸಿದ್ದು ಶಬ್ದಗಳೆರಡೂ ಕೂಡಿ ಸಂಧಿಯಾಗುವಾಗ ಕೆಲ ಅಕ್ಷರ ಸಂಜ್ಞೆಗಳು ಲೋಪ ಇಲ್ಲವೆ ಆಗಮವಾಗುತ್ತವೆ. ಲೋಪವನ್ನು= = ಈ ಚಿಹ್ನೆಗಳಲ್ಲಿಯೂ, ಆಗಮವನ್ನು # # ಈ ಚಿಹ್ನೆಗಳಲ್ಲಿಯೂ, ಆಗಮವನ್ನು ಅಡಕಗೊಳಿಸುವುದು. ಉದಾ.ಗೆ ಮರೆತೇವದನ ->ಮರೆತೇವು = ಉ= / ಅದನ. 'ಹೂವರಳಿ' ->ಹೂ # ವ್ ಅರಳಿ ಆದೇಶಕ್ಕೆ ಬೆರೆ ಸಂಜ್ಞೆಯಿಲ್ಲ. ಏಕೆಂದರೆ ಅದರಲ್ಲಿ ಒಂದು ಲೋಪವಾಗಿ,ಇನ್ನೊಂದು ಆಗಮವಾಗಿ ಬಂದಿರುತ್ತದೆ. ಉದಾ. ಹಾಡುಗಬ್ಬ -> ಹಾಡು/ = ಕ #ಬ್ಬ ಈ ರೀತಿಯಾಗಿ ವಿಭಜಿಸಿ ಶಬ್ದಗಳನ್ನು ಬರೆದಾಗ ಕಂಪ್ಯೂಟರ್ ಕೂಡುನುಡಿಯನ್ನು ಕಟ್ಟಿಕೊಡುತ್ತದೆ. (ಹಾಡುಗಬ್ಬ, ಹಾಡು, ಕಬ್ಬ) ಈ ವಿಧಿಯಿಂದ ಬೇಂದ್ರೆ ಸಮಗ್ರ ಕಾವ್ಯ ಸಂಪದವನ್ನು ಕಂಪ್ಯೂಟರಿಗೆ ಪೂರೈಸಿದಾಗ ಅನೇಕಾನೇಕ ಅರ್ಥ ವಿಷಯಗಳು, ಮತ್ತು ನವೀನ ಕಾವ್ಯಾಂಗಳು ದ್ರಾಕ್ಷಾಪಾಕದಷ್ಟು ಸುಲಭವಾಗಿ ಕೈಗೆಟಕುವುದರಲ್ಲಿ ಸಂದೇಹ. ಒಂದು ಲಕ್ಷ ಶಬ್ದಗಳಿರುವ ಬೇಂದ್ರೆ ಕವನ ಸಂಗ್ರಹಗಳ ಪುಟ ಸಂಖ್ಯೆ ಸುಮಾರು ೧೩೦೦ (ಅಪ್ರಕಟಿತ ಕವನಗಳನ್ನು ಸೇರಿಸಿದರೆ, ಇದರ ಎರಡು ಪಟ್ಟು ಅದೀತು.!) ಅದರ ಶ.ಪ್ರ. ಕೋಶವು ಹತ್ತು ಸಾವಿರ ಪುಟಗಳನ್ನು ಮಿಕ್ಕಬಹುದು. ಅಷ್ಟನ್ನು ಮುದ್ರಿಸುವುದಕ್ಕೆ ತುಂಬಾ ಹಣ ತುಂಬಾ ಸಮಯಬೇಕು. ಅಲ್ಲದೆ ಹೆಚ್ಚಿಗೆ ಮಾರಾಟವಾಗುವ ಗ್ರಂಥವೂ ಅದಾಗದು. ಆದರೆ ಶ.ಪ್ರ. ಕೋಶವನ್ನು ಅಚ್ಚಿನ ಮೊಳೆಗಳಿಂದಲೇ ಮುದ್ರಿಸಬೇಕೆಂಬ ಅಗತ್ಯವಿಲ್ಲ. ಕಂಪ್ಯೂಟರಿನ ಟೆಲಪ್ರಿಂಟರ್ ಯಂತ್ರದಿಂದ, ಆಗಿಂದಾಗ ಶಬ್ದ ಪ್ರಯೋಗ ಕೋಶವನ್ನು ಮುದ್ರಿಸಿಕೊಳ್ಳಬಹುದು.

ಗಣಕಯಂತ್ರವು ಇದೆಲ್ಲ ಕೆಲಸವನ್ನು ಹೇಗೆ ನಿಭಾಯಿಸುತ್ತದೆಂಬ ಕುತೂಹಲ ಉಂಟಾಗು(ತ್ತದೆ)ವುದು ಸಹಜ. ಸ್ಥೂಲವಾಗಿ ಹೀಗೆ ಹೇಳಬಹುದು. ಕಂಪ್ಯೂಟರ್ ಕಾರ್ಯದಲ್ಲಿ ಮೂರು ಅಂಗಗಳಿರುತ್ತವೆ. ೧. ಮಾಹಿತಿಯನ್ನು ಪೂರೈಸುವುದು ೨. ಅದನ್ನು ಹಿಡಿದಿಟ್ಟುಕೊಳ್ಳುವುದು. ೩. ಅದನ್ನು ನಮಗೆ ಬೇಕಾದ ಸ್ವರೂಪದಲ್ಲಿ ಸಂಯೋಜಿಸುವುದು.

ಕಂಪ್ಯೂಟರಿಗೆ ಏನು ಮಾಹಿತಿಯನ್ನು ಪೂರೈಸಿದರೂ ಅದು ಅಂಕಿಗಳಿಗೆ ತಿರುಗಿಸಿಕೊಳ್ಳುತ್ತದೆ. B/E/N/D/R/E ಎಂಬುದು ಕಂಪ್ಯೂಟರಿನಲ್ಲಿ ೨/೫/೦೫/೪/೦೯/೫ ಆಗುತ್ತದೆ! ಒಂದು

ನಿರ್ದಿಷ್ಟವಾದ ಕಾರ್ಡಿನಲ್ಲಿ ಈ ಅಂಕಿಗಳನ್ನು ಮಾಡಬೇಕಾಗುವುದು. ಇಲ್ಲವೆ ಟೈಪರೈಟರ್ ಮಾದರಿಯ ಯಂತ್ರದಲ್ಲಿ ಮಾಹಿತಿಯನ್ನು ನೇರವಾಗಿ ಕಂಪ್ಯೂಟರಿಗೆ ಪೂರೈಸಬಹುದು. ಆಗ ನೀವು ಏನೇನು ಮಾಹಿತಿ ಒದಗಿಸುವಿರೋ, ಅದು ಟಿ.ವಿ.ಗೆ ಇರುವಂತಹ ಸ್ಕ್ರೀನ್ ಮೇಲೆ ಆ ಕ್ಷಣಕ್ಕೆ ಮೂಡಿಸುತ್ತದೆ. ಅದರಿಂದ ತಪ್ಪುಗಳೇನಾದರೂ ಇದ್ದರೆ ತಿದ್ದಿಕೊಳ್ಳುವುದು ಸಾಧ್ಯ.[೩೩]

ಹೀಗೆ ಹಿಡಿದಿಟ್ಟ ಮಾಹಿತಿಯ ವಿಶ್ಲೇಷಣೆಯನ್ನು ಯಾವ ರೀತಿಯಾಗಿ ಮಾಡಬೇಕೆಂಬುದನ್ನು ಅದಕ್ಕೆ ವಿಧಿಸಬೇಕಾಗುವುದು. ಇದಕ್ಕೆ ಎನ್ನುವರು. ಈ ವಿಧಿನಿಯಮಗಳ ಪ್ರಕಾರ ಕಂಪ್ಯೂಟರ್ ಅತ್ಯಂತ ವೇಗದಿಂದ ಕೆಲಸ ಮುಗಿಸಿ ಟೆಲಿಪ್ರಿಂಟರ್ ನಿಂದ, ಪಟಪಟನೆ ಆಕಾರಾದಿ ಮೂಡಿಸುತ್ತದೆ. ಆಮೇಲೆ ಬೇಕೆಂದರೆ ಅದನ್ನೇ ಪೋಟೋ ಕಂಪೋಸಿಂಗ್‌ನಿಂದ ಮುದ್ರಿಸಿ ನೂರಾರು ಪ್ರತಿಗಳನ್ನು ಹೊರತರಲೂಬಹುದು.

ಕಂಪ್ಯೂಟರ್ ಅತ್ಯಂತ ವೇಗವಾಗಿ ಕೆಲಸವನ್ನು ಮಾಡಬಲ್ಲದು ನಮಗೆ ಒಂದು ತಾಸು ತಗಲುವ ಕೆಲಸವನ್ನು ಅದು ಒಂದು ಸೆಕೆಂಡಿನಲ್ಲಿ (೧/೨೯೦೦) ಮುಗಿಸಬಲ್ಲುದು! ಇನ್ನೊಂದು ಮಾತೆಂದರೆ ನಾವು ಕೈಯಿಂದ ಬರೆಯತೊಡಗಿದಾಗ ತಪ್ಪುಗಳು ಆಗುವ ಸಂಭವವಿದ್ದರೆ, ಕಂಪ್ಯೂಟರ್ ಅಣುಮಾತ್ರವೂ ತಪ್ಪಿಲ್ಲದೆ ಶ.ಪ್ರ. ಕೋಶವನ್ನು ಅಣಿಗೊಳಿಸುತ್ತದೆ.

ಸಾಹಿತ್ಯ(ವನ್ನು) ಕಾರ್ಯಕ್ಕೆ ಕಂಪ್ಯೂಟರನ್ನು ಬಳಸುವ ಕಾರ್ಯಭಾರತದಲ್ಲಿಯೇ ಕನ್ನಡ ಕವಿಗಳಿಂದ ಪ್ರಾರಂಭವಾಗಿದೆ. (ಭಾರತದ ಇತರ ಯಾವುದೇ ಸಾಹಿತ್ಯ ಕ್ಷೇತ್ರದಲ್ಲಿ ಇಂಥ ಕೆಲಸ ನಡೆದಿಲ್ಲ). ಪ್ರಯೋಗಾರ್ಥವಾಗಿ ಈಗಾಗಲೇ ಮುದ್ದಣನ ವಿಶಿಷ್ಟ ಶಬ್ದಗಳನ್ನು ದಾಸರ ಕೆಲವು ಉಗಾಭೋಗಗಳನ್ನು ಹಾಗೂ ಬೇಂದ್ರೆಯವರ ಕೆಲವು ಕವನಗಳನ್ನು ಗಣಕ ಯಂತ್ರಕ್ಕೆ ಅಳವಡಿಸಲಾಗಿದೆ. ಅಲ್ಲದೆ ದೇವರ ದಾಸಿಮಯ್ಯನ ಸಮಗ್ರ ವಚನಗಳನ್ನು ಮತ್ತು ಕಾಳಿದಾಸನ ಮೇಘದೂತವನ್ನು ಕಂಪ್ಯೂಟರಿನಲ್ಲಿ ಶೇಖರಿಸಿ ಇಡಲಾಗಿದೆ. ಅದರಿಂದ ಶ.ಪ್ರ. ಕೋಶವನ್ನು ಇಲ್ಲವೆ ನಿರ್ದಿಷ್ಟ ಶಬ್ದ ಪ್ರತ್ಯಯಗಳನಷ್ಟೇ ಪಡೆಯಬಹುದು. ಉದಾಹರಣೆಗೆ, ಹಳಗನ್ನಡ ಕಾವ್ಯಗಳು ದೇವರ ದಾಸಿಮಯ್ಯನ ವಚನಗಳನ್ನು ಕಾಣಬಹುದಾಗಿದೆ. ಅಬ್ರಹಾಮ, ಇಮಾಮ, ಸಿದ್ಧರಾಮ, ಸೀತಾರಾಮ ಇಲ್ಲಿಯ ಅನುಕ್ರಮ ಅ,ಇ, ಸಿ,ಸೀ ಎಂಬುದಾಗಿ ಇದೇಯಷ್ಟೆ ಕಂಪ್ಯೂಟರ್ ವಿರುದ್ಧ ದಿಕ್ಕಿನ ಅನುಕ್ರಮವನ್ನು (Reveruindexing) ಮಾಡಿ ಕೊಡಬಲ್ಲದು. 'ಮ' ಎಂದ ಆರಂಭಿಸಿ 'ಮ' ಅಕ್ಷರ ನಾಲ್ಕರಲ್ಲಿಯೂ ಇದೆಯಾದ್ದರಿಂದ ಅದನ್ನು ಬಿಡೋಣ. ಅದರ ಹಿಂದಿನ ಅಕ್ಷರಗಳೆಂದರೆ.ಹಾ.ಮ.ರಾ(ದ್ಧ) ಮತ್ತು (ತಾ) ವಿರುದ್ಧಾನುಕ್ರಮದಲ್ಲಿ ಈ ಶಬ್ದಗಳು ಹೊಂದಿಕೊಳ್ಳುತ್ತವೆ.

ಇಮಾಮ (ಮ ಮಾ ಇ)

ಸೀತಾರಾಮ (ಮರಾದ್ಧಸಿ)

ಅಬ್ರಹಾಮ (ಮಹಾಬ್ರಅ)

ಈ ಬಗೆಯ ಅನುಕ್ರಮದಿಂದ ಕಾವ್ಯಾಭ್ಯಾಸಕ್ಕೆ ಏನು ಪ್ರಯೋಜನವೆಂದು ಕೇಳಬಹುದು. ಆದರೆ ಕನ್ನಡ ಮತ್ತು ಇತರ ಭಾರತೀಯ ಸಾಹಿತ್ಯಗಳಲ್ಲಿ ಇದರಿಂದ ವಿಶೇಷ ಪ್ರಯೋಜನವಿದೆ. ಇಂಗ್ಲಿಶ್‌ಗಿಂತ ನಮ್ಮಲ್ಲಿ ಕೂಡು ನುಡಿಗಳು ಬಹು ದೊಡ್ಡ ಸಂಖ್ಯೆಯಲ್ಲಿರುತ್ತವೆ. ಅನೇಕ ಸಲ, ಉತ್ತರ ಪದಕ್ಕೆ ವಿಶೇಷ ಮಹತ್ವದಿರುವುದರಿಂದ, ಉತ್ತರ ಪದಗಳಲ್ಲಿ ಪ್ರತ್ಯೇಕವಾಗಿ ಒಂದೆಡೆ ಸಿಕ್ಕುತ್ತವೆ. ಆಗ ಅದರ ಪ್ರಯೋಜನವನ್ನು ಪಡೆಯವ ಅವಕಾಶ ದೊರೆಯುತ್ತದೆ.

ಕಾವ್ಯಾಭ್ಯಾಸದಲ್ಲಿ ಕಂಪ್ಯೂಟರ್ ಸಹಾಯದ ವಿಚಾರ ತೀರ ಹೊಸತಾದ್ದರಿಂದ ಕಂಪ್ಯೂಟರ್ ಸಿದ್ಧಪಡಿಸುವ ಶಬ್ದ ಪ್ರಯೋಗ ಕೋಶದ ಪ್ರಯೋಜನ ಮನದಟ್ಟಾಗಿದೆಯೆಂದು ಭಾವಿಸಿ ಕನ್ನಡ ಕಾವ್ಯದ ದೃಷ್ಟಿಯಿಂದ ವಿಚಾರ ಮಾಡಿದಾಗ ಅದಕ್ಕಾಗಿ ಸುಸಂಘಟಿತ ಯೋಜನೆ ರೂಪುಗೊಳ್ಳಬೇಕಾಗಿದೆ. ಮೊದಲು ಪಂಪ, ರನ್ನ, ಹರಿಹರ, ಕುಮಾರವ್ಯಾಸ, ರತ್ನಾಕರವರ್ಣಿ, ಸರ್ವಜ್ಞ, ಮುಂತಾದ ಮುದ್ದಣ, ಗೋವಿಂದ ಪೈ ಮುಂತಾದ ಪ್ರಮುಖ ಕವಿಗಳ ಶಬ್ದ ಪ್ರಯೋಗ ಕೋಶ ಸಿದ್ಧವಾಗಬೇಕು. ನಂತರ ಆಯ್ದ ಶಾಸನಗಳು,ವಚನ, ದಾಸವಾಙ್ಮಯಗಳನ್ನು ಕೈಗೆತ್ತಿಕೊಳ್ಳಬೇಕಾಗಿದೆ.

ಹಳಗನ್ನಡದ ಸಾಹಿತ್ಯದಷ್ಟೇ ಆಧುನಿಕ ಕಾವ್ಯಗಳಿಗೂ ಇಂಥ ಕೋಶಗಳ ರಚನೆ ಹೆಚ್ಚು ಅಗತ್ಯದ್ದಾಗಿದೆ. ಸ್ವಲ್ಪಮಟ್ಟಿಗೆ ಅನಿವಾರ್ಯವು ಇದೆ. ಏಕೆಂದರೆ ಇಂದಿನ ಕವಿಗಳ ವಿಮರ್ಶೆ ಮಾಡುವಾಗ, ತಮ್ಮವರೆನ್ನುವವರನ್ನು ಅತಿಯಾಗಿ ಹೊಗಳುವುದುಂಟು. ಇನ್ನು ತಮಗೆ ಬೇಡವದರೂ ಅಥವಾ ಎರುದು ಗುಂಪು ಜಾತಿಯವರಿದ್ದರೆ ಅತಿಯಾಗಿ ತೆಗಳುವುದು ಅಷ್ಟೇ ದೊಡ್ಡ ಪ್ರಮಾಣದಲ್ಲಿ ಕಂಡುಬರುತ್ತದೆ. ಇದರಿಂದಾಗಿ ವಿಮರ್ಶೆ ಅತಿರೇಕದ ಅಂಚನ್ನು ಮುಟ್ಟುತ್ತದೆ. ಇಂತಹುದನ್ನು ತಡೆಯಲು ಶಬ್ದಕೋಶಗಳ ರಚನೆ ಸಹಕಾರಿಯಾಗಿದೆ.

ಶಬ್ದಪ್ರಯೋಗ ಕೋಶ ರಚನೆಗೆ ಸಂಬಂಧಿಸಿದಂತೆ ಅದರ ಪ್ರಯೋಜನ ವಿಷಯಕ್ಕೆ ಸಂಬಂಧಿಸಿದಂತೆ ಬೇಂದ್ರೆಯವರ ಕಾವ್ಯಗಳಲ್ಲಿ ಬಳಕೆಯಾಗಿರುವ ಶಬ್ದಗಳನ್ನು ಮತ್ತು ಅದರ ಅರ್ಥಗಳನ್ನು ತಿಳಿಯಲು ಈ ಒಂದು ಪ್ರಯೋಗ ಅನುಕೂಲವೆನಿಸುತ್ತದೆ. ಬೇಂದ್ರಯವರು ಶಬ್ದಗಳಿಗೆ ಹೊಸ ಅರ್ಥಗಳನ್ನು ಕಲ್ಪಿಸುತ್ತಾರೆ. ಒಂದು ಶಬ್ದವು ವಾಚ್ಯಾರ್ಥ ಮಾತ್ರವಲ್ಲದೆ, ವ್ಯಂಗ್ಯಾರ್ಥ, ವಿರೋದಾರ್ಥ, ಗೂಢಾರ್ಥ, ಮಂತ್ರಾರ್ಥ ಏನೆಲ್ಲವನ್ನೂ ಹೊರಡಿಸಬಹುದು. ಮೇಲುನೋಟಕ್ಕೆ ಬಳಕೆಯ ನುಡಿಯೆಂದು ಕಂಡರೂ, ಮಹೋನ್ನತವಾದ ತಾತ್ವಿಕ ದರ್ಶನವು ಆ ಶಬ್ದದಲ್ಲಿ ವ್ಯಕ್ತವಾಗಬಹುದು. ಅವರ ಕಾವ್ಯದಲ್ಲಿ ರಮ್ಯ ಸಂಸ್ಕೃತ ಪದಗಳಿವೆ. ಉತ್ತರ ಕರ್ನಾಟಕದ ದೇಶಿ ಇದೆ. ಹಳಗನ್ನಡ ಶಬ್ದಗಳಿಗೆ ಹೊಸ ಅರ್ಥ ಬಂದಿದೆ. ನಿಸರ್ಗ ವರ್ಣಿಸಿ ಇರಲಿ, ಸಾಮಾಜಿಕ ಸನ್ನಿವೇಶಗಳಿರಲಿ ಅಂತರಂಗದ ಭಾವೋನ್ಮಾದವಿರಲಿ, ಬೇಂದ್ರೆಯವರು ಅದಕ್ಕೆ ಸೂಕ್ತವಾದ ಶಬ್ದ ಶರೀರವನ್ನು ಉಸಿರಾಡುವಷ್ಟು ಸಹಜ ರೀತಿಯಲ್ಲಿ ಒದಗಿಸುತ್ತಾರೆ. ಈ ಅಭಿವ್ಯಕ್ತಿಯಲ್ಲಿ ರೂಪಕಶಕ್ತಿಯದೇ ಮೇಲುಗೈ. ಗಿಡಗಂಟಿಯಾ ಕೊರಳು, ಕಣ್ಣ ಕಡೆಗೋಲು,

ತುಳುಕ್ಯಾಡತಾವ, ತೂಕಡಿಕಿ, ನೀರೊಡೆದುವೆಲ್ಲ ಕಲ್ಲಿಗೆ, ಎಂಬಂಥ ಪದಗುಂಪುಗಳ ಲೀಲಾಜಾಲವಾದ ಸೃಷ್ಟಿ ಬೇಂದ್ರೆಯವರಿಗೆ ಮಾತ್ರ ಮೀಸಲು. ಶಬ್ದಗಳನ್ನು ಅವರಷ್ಟು ಮೈಮುರಿದು ದುಡಿಸಿಕೊಂಡವರು ಹೊಸಗನ್ನಡದಲ್ಲಿ ಬೇರೊಬ್ಬರು ಕಂಡು ಬರಲಾರರು. ಆದ ಕಾರಣ ಬೇಂದ್ರೆ ಕಾವ್ಯದಲ್ಲಿ ಬರುವ ಶಬ್ದಗಳ ಅರ್ಥ ವಿಶೇಷಗಳಲ್ಲಿ ಕಂಡುಕೊಳ್ಳುವುದು ಉಚ್ಚಮಟ್ಟದ ಕಾವ್ಯಾಭ್ಯಾಸವೆನಿಸುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಇದನ್ನು ತೋರ್ಪಡಿಸಲು ಅದರ ಸಮಗ್ರ ಕಾವ್ಯದ ಶಬ್ದ ಪ್ರಯೋಗ ಕೋಶ ಸಿದ್ಧವಾಗಬೇಕಿದೆ ಕಂಪ್ಯೂಟರ್ ಸಹಾಯದಿಂದ.

ಕಂಪ್ಯೂಟರ್‌ನಲ್ಲಿ ಸಾಹಿತ್ಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಬ್ದ ಪ್ರಯೋಗ ಕೋಶ ರಚನೆ ಮಾಡುವಂತಹ ಕೆಲಸ ಮಾಡುವಾಗ ಕಂಪ್ಯೂಟರ್‌ಗೆ ಕನ್ನಡ ದತ್ತಾಂಶವನ್ನು ತುಂಬದೆ ಇರುವುದರಿಂದ ಅಥವಾ ಕನ್ನಡದ ತಿಳಿಯುವುದಿಲ್ಲವಾದ್ದರಿಂದ ಮೂಲ ಕೃತಿಯನ್ನು ನಾವು ರೋಮನ್ ಲಿಪಿಯಲ್ಲಿ ಬರೆಯಬೇಕು. ರೋಮನ್ ಲಿಪಿಗೆ ಪಿಪ್ಯಂತರ ಮಾಡಲು ಕೆಲವು ಉಚ್ಚಾರಣ ಚಿಹ್ನೆಗಳು (diacritical Marks) ಇರುತ್ತವಷ್ಟೇ, ಮೇಲೆ ಮತ್ತು ಕೆಳಗಿರುವ(–) ಇಂಥ ಚಿಹ್ನೆಗಳು ಭಾರತದಲ್ಲಿರುವ ಇಂದಿನ ಅನೇಕ ಗಣಕಯಂತ್ರಗಳಲ್ಲಿ ಮೂಡಿಸಬರುವುದಿಲ್ಲ. ಆದ್ದರಿಂದ ಕೆಲವು ವ್ಯತ್ಯಾಸಗಳನ್ನು ಮಾಡಬೇಕಾಗುತ್ತದೆ. ಉದಾ:ಹರಣೆಗೆ A=AA: S= S ಇತ್ಯಾದಿ. ಇಂಗ್ಲಿಶ್‌ನಲ್ಲಿ ಶಬ್ದಗಳು, ಪ್ರತ್ಯಯಗಳನ್ನು ಬಿಡಿ ಬಿಡಿಯಾಗಿರುತ್ತವೆ. ಆಗ ಒಂದೊಂದು ಶಬ್ದವನ್ನೆತ್ತಿಕೊಂಡು concordance ಸುಲಭ.[೩೪] ಭಾರತೀಯ ಭಾಷೆಗಳಲ್ಲಿ ಹಾಗೆಲ್ಲಿವೆ. ತದ್ಧಿತ, ಕೃದಂತ ಶಬ್ದಗಳು ಪ್ರತ್ಯಯಗಳನ್ನು ಒಳಗೊಂಡಿರುತ್ತವೆ. (ಹೋಲಿಸಿರಿ: -In calcutta ಕಲಕತ್ತೆಯಲ್ಲಿ) ಅಲ್ಲದೆ ಎರಡು ಮೂರು ನಾಮಪದಗಳು,ನಿಯಮಾನುಸಾರ ಕೂಡುನುಡಿಯಾಗಿ ಬರುತ್ತವೆ. ಬಾಣನ ಗದ್ಯದಲ್ಲಿ ಶಬ್ದಗಳು ಒಂದಕ್ಕೊಂದು ಹೆಣೆದುಕೊಂಡು ಸಾಲುಗಟ್ಟಲೆ ಮುಂದುವರೆಯುತ್ತವೆ. ಬಹುವ್ರೀಹಿ ಸಮಾಸ ಪದವಿದ್ದಂತೂ ಆ ಎರಡು ಶಬ್ದಾರ್ಥ ಬಿಟ್ಟು ಮೂರನೆಯ ಅರ್ಥವೇ ಹೊರಡುವುದು. ಆದ್ದರಿಂದ ಕನ್ನಡ ಕಾವ್ಯವೊಂದರ ಶಬ್ದ ಪ್ರಯೋಗ ಕೋಶವನ್ನು ತಯಾರಿಸುವಾಗ ಕೂಡು ನುಡಿಗಳನ್ನು ಒಡೆಯಬೇಕಾಗುವುದು ಮತ್ತು ಕೂಡು ನುಡಿಯಲ್ಲಿ ಇಬರುವ ಶಬ್ದಗಳನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳುವುದರ ಜೊತೆಗೆ ಇಡಿಯಾಗಿಯೂ ಅದನ್ನು ಗಮನಿಸುವುದೂ ಬೇಕಾಗುವುದು. ಕಂಪ್ಯೂಟರ್ ಚಿಹ್ನೆಗಳನ್ನು ಬಳಸಿ, ಶಬ್ದಗಳನ್ನು ಬೇರ್ಪಡಿಸಲು ಸೂಚಿಸಬೇಕಾಗುವುದು. ಈ ದಿಸೆಯಲ್ಲಿ ಕೆಲವೊಂದು ವಿಧಾನಗಳು ಇಂತಿವೆ.

"ಎರಡು ಶಬ್ದಗಳನ್ನು ಬೇರ್ಪಡಿಸುವುದರ ಸಂಕೇತವಾಗಿ / ಈ ಚಿಹ್ನೆಯನ್ನು ಬಳಸಿದುದ್ದು ಶಬ್ದಗಳೆರಡೂ ಕೂಡಿ ಸಂಧಿಯಾಗುವಾಗ ಕೆಲ ಅಕ್ಷರ ಸಂಜ್ಞೆಗಳು ಲೋಪ ಇಲ್ಲವೆ ಆಗಮವಾಗುತ್ತವೆ. ಲೋಪವನ್ನು = = ಈ ಚಿಹ್ನೆಗಳಲಣ್ಣಯೂ, ಆಗಮವನ್ನು # # ಈ ಚಿಹ್ನೆಗಳಲ್ಲಿಯೂ, ಆಗಮವನ್ನು ಅಡಕಗೊಳಿಸುವುದು. ಉದಾ. ಮರೆತೇವದನ> ಮರೆತೇವು = ಉ= / ಅದನ 'ಹೂವರಳಿ'>ಹೂ # ವ್ ಅರಳಿ ಆದೇಶಕ್ಕೆ ಬೇರೆ ಸಂಜ್ಞೆಯಿಲ್ಲ. ಏಕೆಂದರೆ ಅದರಲ್ಲಿ ಒಂದು ಲೋಪವಾಗಿ, ಇನ್ನೊಂದು ಆಗಮವಾಗಿ ಬಂದಿರುತ್ತದೆ. ಉದಾ.

ಹಾಡುಗಬ್ಬ> ಹಾಡು / =ಕ # ಬ್ಬ. ಈ ರೀತಿಯಾಗಿ ವಿಭಜಿಸಿ ಶಬ್ದಗಳನ್ನು ಬರೆದಾಗ ಕಂಪ್ಯೂಟರ್ ಕೂಡು ನುಡಿಯನ್ನಂತೂ ಕೊಟ್ಟೇ ಕೊಡುತ್ತದೆ. (ಹಾಡುಗಬ್ಬ, ಹಾಡು, ಕಬ್ಬ) ಈ ವಿಧಿಯಿಂದ ಬೇಂದ್ರೆ ಸಮಗ್ರ ಕಾವ್ಯ ಸಂಪದವನ್ನು ಕಂಪ್ಯೂಟರಿಗೆ ಪೂರೈಸಿದಾಗ ಅನೇಕಾನೇಕ ಅರ್ಥ ವಿಷಯಗಳು ಮತ್ತು ನವೀನ ಕಾವ್ಯಗಳು ದ್ರಾಕ್ಷಾಪಾಕದಷ್ಟು ಸುಲಭವಾಗಿ ಕೈಗೆಟುಕುವುದರಲ್ಲಿ ಸಂದೇಹವಿಲ್ಲ. ಎಷ್ಟರ ಮಟ್ಟಿಗೆ ಬಂದವೆಯೆಂದು ತಿಳಿಯುವ ದೃಷ್ಟಿಯಿಂದ ಅವಷ್ಟನ್ನೇ ಪಟ್ಟಿ ಮಾಡಲು ಹೇಳಿದಾಗ ಕಂಪ್ಯೂಟರ್ ಕ್ಷಣಾರ್ಧದಲ್ಲಿ ಹಾಗೆ ಮಾಡಿಕೊಟ್ಟಿತು.[೩೫]

ಕಂಪೂಟರ್ ಸಹಾಯದಿಂದ ಕನ್ನಡದ ಅಭ್ಯಾಸಕ್ಕೆ ತುಂಬಾ ಪ್ರಯೋಜನವಿದೆ. ಕಾವ್ಯವೊಂದೆ ಅಲ್ಲದೆ, ಭಾಷಾ ಪ್ರಕ್ರಿಯೆ, ಜಾನಪದ, ಸಾಹಿತ್ಯ, ಶಾಸನಗಳೂ, ಇವುಗಳ ವ್ಯಾಸಂಗಕ್ಕೂ ಬಳಸಬಹುದು.

### ೫.೫.೨. ಭಾಷಾಂತರ

Translation ಎಂಬ ಪದಕ್ಕೆ ಸಂಪಾದಿಯಾಗಿ 'ಭಾಷಾಂತರ, ಎಂದು ಕನ್ನಡದಲ್ಲಿ ಬಳಕೆಯಾಗುತ್ತಿದೆ. ಅನುಗುಣವಾಗಿ ವಾದಿಸುವುದು ಅಥವಾ ಅನುಸರಿಸಿ ಹೇಳುವುದು ಎಂಬರ್ಥದಲ್ಲಿ 'ಅನುವಾದ' ಎಂಬ ಪದವನ್ನು ಭಾಷಾಂತರಕ್ಕೆ ಸಮನಾಗಿಯೇ ಬಳಸಲಾಗುತ್ತಿದೆ. ಭಾಷಾಂತರ ಎಂಬುದೊಂದು ಪ್ರಕ್ರಿಯೆ. ಇದಕ್ಕೆ ಯಾವುದೇ ಭಾಷೆ, ವಿಷಯಗಳ ಗಡಿಗಳಲ್ಲಿ. ಎಲ್ಲಾ ಭಾಷೆ ಹಾಗೂ ವಿಷಯಗಳನ್ನು ಒಂದಕ್ಕೊಂದು ಜೋಡಿಸುತ್ತಾ ಹರಿಯುವ ನದಿಯಂತೆ ಎಲ್ಲಾ ಕಾಲಗಳಲ್ಲಿಯೂ ಭಾಷಾಂತರದ ಕಾರ್ಯ ಸಾಗುತ್ತಿದೆ. ಟ್ರಾನ್ಸ್‌ಲೇಷನ್‌ಗೆ ಹಿಂದಿಯಲ್ಲಿ 'ಅನುವಾದ್' ತಮಿಳನಲ್ಲಿ ಮೊಟಿಪೆಯ ರಪ್ಪು', 'ಮೊ ಮೊಟ್ಟಂ' ತೆಲುಗಿನಲ್ಲಿ 'ಅನುವಾದಂ' 'ತರ್ಜುಮಾ' ಮಲೆಯಾಳಂಗಿನಲ್ಲಿ 'ಪರಿಭಾಷ' 'ವಿವರ್ತನಂ' ತುಳುವಿನಲ್ಲಿ 'ಅನುವಾದೊ' ಎಂಬಿತ್ಯಾದಿ ಪದಗಳು ಬಳಕೆಯಲ್ಲಿವೆ.[೩೬] ಈ ಎಲ್ಲಾ ಪದಗಳು ಕನ್ನಡದ ಭಾಷಾಂತರದ ಪದದ ಅರ್ಥವನ್ನೇ ಆ ಭಾಷೆಯ ಭಾಷೆಯಲ್ಲಿ ಹೇಳುವ ಕ್ರಿಯೆಯನ್ನೇ ಈ ಎಲ್ಲಾ ಪದಗಳು ಸೂಚಿಸುತ್ತವೆ. ಭಾಷಾಂತರವನ್ನು ಕುರಿತಂತೆ ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಕೀರ್ತಿನಾಥ ಕುರ್ತಕೋಟಿ ಯವರು "ಭಾಷಾಂತರವೆಂದರೆ ಮುಖ್ಯವಾಗಿ ಒಂದು ಸಾಂಸ್ಕೃತಿಕ ವಿನಿಮಯ" ಮುಂದುವರೆದು ಎರಡು ಭಾಷೆಗಳ ನಡುವೆ ನಡೆಯುವ ವ್ಯವಹಾರ ಎಂದಿದ್ದಾರೆ. ಸಿ.ಎನ್. ರಾಮಚಂದ್ರನ್ ಅವರು "ಭಾಷಾಂತರವೆಂದರೆ ಎರಡು ಭಾಷೆಗಳನ್ನು ಎರಡು ಭಾಷಿಕ ಸಮೂಹಗಳನ್ನು ಎರಡು ಸಾಂಸ್ಕೃತಿಕ ಕ್ರಿಯೆ" ಎಂದಿದ್ದಾರೆ.

ಅನ್ಯ ಭಾಷೆಯಿಂದ ತಿಳಿದುಕೊಳ್ಳುವ ಮತ್ತು ಉದ್ದೇಶಿತ ಓದುಗರ ಅಥವಾ ಕೇಳುಗರ ಭಾಷೆಯಲ್ಲಿ ಹೇಳುವ ಎರಡು ಕ್ರಿಯೆಗಳು ಇರುತ್ತವೆ. ಸಂವಹನಕ್ಕೆ ಇವು ಅಗತ್ಯ. ಇಲ್ಲಿ ಸಂವಹನ ಅಥವಾ ತಿಳಿಯುವಂತೆ ಹೇಳುವುದು ಗಮನಾರ್ಹ. ಗೊತ್ತಿಲ್ಲದೆ ಇರುವ ಭಾಷೆಯೊಂದರಿಂದ ಗೊತ್ತಿರುವ ಭಾಷೆಯ ಓದುಗರಿಗೆ ಅಥವಾ ಕೇಳುಗರಿಗೆ ಗೊತ್ತಿರುವವರು ತಿಳಿಯುವಂತೆ ಹೇಳುವ ಕೆಲಸವೇ ಭಾಷಾಂತರ.

ಭಾಷಾಂತರ ಎಲ್ಲರಿಗೂ ಬೇಕು. ಭಾಷಾಂತರ ಇಲ್ಲವಾದರೆ ಜನಗಳ ನಡುವೆ ಸಂಬಂಧ ಅಸಾಧ್ಯವಾಗುತ್ತದೆ. ಜಾಗತೀಕರಣವಾದ ಇಂದಿನ ದಿಗನಗಳಲ್ಲಿ ಜಗತ್ತಿನ ಎಲ್ಲಾ ಭಾಷೆಗಳಲ್ಲಿರುವ ವಿಷಯಗಳು ಜಗತ್ತಿನ ಎಲ್ಲಾ ಭಾಷಿಕರಿಗೂ ತಲುಪುವುದು ಭಾಷಾಂತರದ ಮೂಲಕವೇ ಒಂದು ಭಾಷೆ ಇನ್ನೊಂದು ಭಾಷೆಯ ಸಂಸರ್ಗಕ್ಕೆ ಬರುವುದು ಭಾಷಾಂತರದ ಮೂಲಕ. ಇಂತಹ ಸಂಸರ್ಗದ ಕಾರಣದಿಂದ ಭಾಷೆಗಳು ತಮ್ಮ ಪದಕೋಶಗಳನ್ನು ವಿಸ್ತರಿಸಿಕೊಳ್ಳುತ್ತವೆ. ಭಾಷಾ ಸಾಹಿತ್ಯಗಳು ಅನ್ಯಭಾಷಾ ಸಂಪರ್ಕದಿಂದ ಪ್ರೇರಣೆ ಪ್ರಭಾವಗಳನ್ನು ಪಡೆದು ಸಬಲಗೊಳ್ಳುತ್ತವೆ.

ಕನ್ನಡ ಸಾಹಿತ್ಯ ಬೆಳವಣಿಗೆಯಲ್ಲಿ 'ಭಾಷಾಂತರದ ಸ್ಥಾನವು ಇದೆ. ಭಾಷಾಂತರ ಕಾರ್ಯದಿಂದ ಕನ್ನಡ ಸಾಹಿತ್ಯ ಸಂಪತ್ತು ವೃದ್ಧಿಸಿದೆ. ಪ್ರಾಚೀನ ಕಾಲದಲ್ಲಿಯೇ ಭಾಷಾಂತರ ಕಾರ್ಯ ಆರಂಭಗೊಂಡಿದೆ. ಭಾರತದಲ್ಲಿ ಬಳಕೆಯಲ್ಲಿದ್ದ ಸಂಸ್ಕೃತ, ಪ್ರಾಕೃತ, ಪಾಳಿ, ಮುಂತಾದ ಭಾಷೆಗಳಿದ್ದು ಸಾಹಿತ್ಯವನ್ನು ಕನ್ನಡಕ್ಕೆ ಭಾಷಾಂತರಿಸಿದ ಇತಿಹಾಸದ ದಾಖಲೆಗಳಿವೆ. ಅನ್ಯಭಾಷೆಗಳಲ್ಲಿ ರಚಿತವಾದ ಸಾಹಿತ್ಯವನ್ನು ಕನ್ನಡದ ಸಂದರ್ಭಕ್ಕೆ ವಗ್ಗಿಸಿಕೊಂಡು ನಮ್ಮ ಭಾಷೆಯಲ್ಲಿ ಸಾಹಿತ್ಯ ಮಾದ್ಯವನ್ನು ಬದಲಾಯಿಸಿ ಸಾಹಿತ್ಯ ರಚನೆಯನ್ನು ನಮ್ಮ ನಾಡಿನ ಕವಿಗಳು ಮಾಡಿದ್ದಾರೆ. ಈ 'ಭಾಷಾಂತರ' ಕ್ರಿಯೆಗೆ ಸಾವಿರ ವರ್ಷಗಳ ಇತಿಹಾಸವಿದೆ. ಕ್ರಿ.ಶ. ೬೦೦ ಸಂದರ್ಭದಲ್ಲಿದ್ದ ಕನ್ನಡ ಗದ್ಯಕಾರನೆಂದು ಹೆಸರಾದ ದುರ್ವಿನೀತನು 'ಪೈಶಾಚಿ' ಭಾಷೆಯಲ್ಲಿ ರಚಿತವಾದ ಗುಣಾಢ್ಯನ 'ಬೃಹತ್ಕತೆ'ಯನ್ನು 'ವಡ್ಡಕಥಾ' ಎಂಬ ಹೆಸರಿನಲ್ಲಿ ಕನ್ನಡಿಸಿರಬೇಕೆಂದು ಪಂಚತಂತ್ರ ಕಥೆಗಳ ಮೂಲ ಪರಂಪರೆ ದಕ್ಷಿಣದಲ್ಲಿಯೇ ಪ್ರಾರಂಭವಾಯಿತೆಂದೂ ಎಂಬ ಒಂದು ಊಹೆ ವ್ಯಕ್ತವಾಗಿದೆ. ಆದರೆ ಇದಕ್ಕೆ ಪ್ರಬಲವಾದ ಆಧಾರವೇನೂ ಇಲ್ಲ. ಆದರೆ ದುರ್ವಿನೀತನ ನಂತರ ಕಾಲಘಟ್ಟದಲ್ಲಿ ಬಂದಂತಹ ಕವಿಗಳು ಮಾಡಿದ ಭಾಷಾಂತರ ಕಾರ್ಯದ ಉಲ್ಲೇಖಗಳು ಹಾಗೂ ಅವರ ಸಾಹಿತ್ಯ ಕೃತಿಗಳು ಲಭ್ಯವಾಗಿವೆ.

ಬಾಣನು ಸಂಸ್ಕೃತ ಭಾಷೆಯಲ್ಲಿ 'ಗದ್ಯ' ಸಾಹಿತ್ಯ ಪ್ರಕಾರದಲ್ಲಿ ರಚಿಸಿರುವ 'ಕಾದಂಬರಿ' ಕೃತಿಯನ್ನು ೧ ನೇ ನಾಗವರ್ಮನು ಕನ್ನಡ ಭಾಷೆಯಲ್ಲಿ 'ಚಂಪೂ' ಪ್ರಕಾರದಲ್ಲಿ 'ಕರ್ನಾಟಕ ಕಾದಂಬರಿ ಎಂಬ ಕಾವ್ಯದಲ್ಲಿ ರಚಿಸಿದನು. ಸಂಸ್ಕೃತ ಕಾವ್ಯದ ಪ್ರಥಮ ಕನ್ನಡ ಅನುವಾದ

ಕರ್ನಾಟಕ ಕಾದಂಬರಿ' ಹಾಗೂ 'ನಾಗವರ್ಮನೇ ಮೊದಲ ಅನುವಾದಕನಾಗಿ ಕಂಡುಬರುತ್ತಾನೆ. ನಾಗವರ್ಮನ ನಂತರ ದುರ್ಗಸಿಂಹ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರವ್ಯಾಸ, ಮುಂತಾದವರು ಭಾಷಾಂತರ ಪ್ರಕ್ರಿಯೆಯೊಳಗೆ ಸಾಹಿತ್ಯ ರಚಿಸಿದ್ದಾರೆ. ೧೮ ನೇ ಶತಮಾನದ ಬಸವಪ್ಪಶಾಸ್ತ್ರಿಗಳವರೆಗೂ ಅನುವಾದ ಅಥವಾ ಭಾಷಾಂತರ ಕಾರ್ಯಗಳು ನಡೆದವು. ಹೆಚ್ಚಿಗೆ ಸಂಸ್ಕೃತ ಭಾಷೆಯ ವಸ್ತು ವಿಷಯಗಳು ಬಂದವು.

ನಂತರ ಹೊಸಗನ್ನಡ ಅಥವಾ ನವೋದಯ ಸಾಹಿತ್ಯ ಪ್ರಾರಂಭವಾಗುವುದೇ ಅನುವಾದ ಸಾಹಿತ್ಯದಿಂದ ೧೮ನೇ ಶತಮಾನದವರೆಗೂ ಸಂಸ್ಕೃತ ಭಾಷೆಯಿಂದ ಕನ್ನಡಕ್ಕೆ ಅನುವಾದ ಕಾರ್ಯ ಪ್ರಾರಂಭಗೊಂಡಿತು. ಕಾರಣ ದೇಸಿ ಅರಸುಗಳ ಆಡಳಿತ. ಕೊನೆಗೊಂಡು ಪಾಶ್ಚಿಮಾತ್ಯರಾದ ಬ್ರಿಟಿಷರ ಭಾಷೆ, ಸಂಸ್ಕೃತಿ, ಧರ್ಮ ಇವೆಲ್ಲವೂ ದೇಶಿಯರ ಮೇಲೆ ಪ್ರಭಾವ ಬೀರಿದವು. ದೇಶಿಯರು ಇವುಗಳ ಪ್ರಭಾವಕ್ಕೆ ಒಳಗಾಗಲೇ ಬ್ರಿಟಿಷರು ಭಾರತದಲ್ಲಿ ಆಳ್ವಿಕೆ ಮಾಡುವ ಸಂದರ್ಭಕ್ಕಾಗಲೇ ಜಗತ್ತಿನಲ್ಲೆಡೆ ಕೆಲವೊಂದು ದೇಶಗಳನ್ನು ತಮ್ಮ ನಿಯಂತ್ರಣಕ್ಕೆ ಅಥವಾ ಹತೋಟಿಯಲ್ಲಿಟ್ಟು ಕೊಂಡಿದ್ದರು. ಇವರು ತಮ್ಮ ಅಸ್ತಿತ್ವ ಎಲ್ಲಿ ಸ್ಥಾಪಿಸಿದ್ದರೋ ಅಲ್ಲಿ ಭಾಷೆ, ಸಂಸ್ಕೃತಿ, ದರ್ಮ, ಈ ಅಂಶಗಳನ್ನು ಅನುಸರಿಸಲು ಪ್ರೇರೇಪಿಸುತಿದ್ದರು. ಅದರಲ್ಲಿಯೂ ಆಡಳಿತ ಅನುಕೂಲಕ್ಕಾಗಿ ಸಂವಹನ ಮಾಧ್ಯಮವಾಗಿ ಅವರ ಭಾಷೆಯಾದ ಇಂಗ್ಲೀಷ್‌ನ್ನು ಬಳಸಿದರು. ಇದರಿಂದ ಸ್ಥಳೀಯ ಭಾಷೆಗಳ ಪಾರಮ್ಯತೆ ಕಡಿಮೆಯಾಗುತ್ತಾ ಸಾಗಿತು. ಈ ಸಂದರ್ಭದಲ್ಲಿಯೇ ಕೈಗಾರಿಕೀಕರಣದ ಕ್ರಾಂತಿ ಉಂಟಾಯಿತು. ಇವರು ತಮ್ಮ ಉಪಯೋಗಕ್ಕಾಗಿ ಕೆಲವೊಂದು ತಂತ್ರಜ್ಞಾನವನ್ನು ಕಂಡುಹಿಡಿದರು. ತಂತ್ರಜ್ಞಾನದ ಆವಿಷ್ಕಾರದ ಜೊತೆಗೆ ಕಲೆ, ಸಾಹಿತ್ಯ, ಮುಂತಾದ ವಿಷಯಗಳ ಸಂಬಂಧಿ ಕಾರ್ಯ ನಿರ್ವಹಿಸತೊಡಗಿದರು. ಹಾಗೆಯೇ ಮುಖ್ಯವಾಗಿ ತಮ್ಮದೇ ಆದ ರೀತಿಯಲ್ಲಿ ಶಿಕ್ಷಣ ಪದ್ಧತಿಯನ್ನು ತಂದರು. ಇಷ್ಟೆಲ್ಲಾ ಕಾರ್ಯಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಬಳಸತೊಡಗಿದರು. ಇದರಿಂದ ತಮ್ಮ ವಸಾಹತುಶಾಹಿ ದೇಶಗಳಲ್ಲಿ ಆಂಗ್ಲಭಾಷೆ ಅಥವಾ ಇಂಗ್ಲಿಷ್ ಭಾಷೆ ಎಲ್ಲಾ ಸ್ತರಗಳಲ್ಲಿಯೂ ಬಳಕೆಗೊಳ್ಳುತ್ತಾ ದಿನೇ ದಿನೇ ತನ್ನ ಪಾರಮ್ಯತೆ ಹೆಚ್ಚಿಸಿಕೊಳ್ಳುತ್ತಾ ಬಂದಿತು. ಇದರಿಂದ ಕೆಲವೊಂದು ರಾಷ್ಟ್ರಗಳು ಈ ಇಂಗ್ಲೀಷ್ ಭಾಷೆಯ ಬಂಧನದಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅಂತಹ ರಾಷ್ಟ್ರಗಳಲ್ಲಿ ಭಾರತವು ಒಂದು. ಹಲವಾರು ಭಾಷೆಗಳನ್ನಾಡುವಂತಹ ಜನರನ್ನು ಹೊಂದಿರುವಂತಹ ಭಾರತವು ಇಂಗ್ಲೀಷ್ ನಂತೆ ತನ್ನ ಒಡಲ ಭಾಷೆಗಳನ್ನು ಬೆಳೆಸಲು ಸಾಧ್ಯವಾಗದೇ ಹೋಯಿತು. ಇಂಗ್ಲೀಷರು ಬಳಸಿದ ಇಂಗ್ಲೀಷ್ ಭಾಷೆ ಮತ್ತು ಅವರು ಆವಿಷ್ಕರಿಸಿದ ತಂತ್ರಜ್ಞಾನ ಜಗತ್ತಿನಾದ್ಯಂತ ಹೆಚ್ಚು ಪ್ರಭಾವಿತವಾದವು. ಈ ಪ್ರಭಾವದಿಂದ ಸ್ಥಳೀಯ ಭಾಷೆ, ಸಂಸ್ಕೃತಿ, ಕುಂದುವಿಕೆಗೆ ಕಾರಣವಾಯಿತು. ಇಂಗ್ಲೀಷ್ ಭಾಷೆಯ ಪಾರಮ್ಯತೆಯಿಂದಲೇ ಭಾಷಾ ಪೈಪೋಟಿಯ ಯುಗ ಪ್ರಾರಂಭವಾಯಿತು. ಈ ಭಾಷಾ ಪೈಪೋಟಿಯಲ್ಲಿ ಎಚ್ಚೆತ್ತುಕೊಂಡ ಸ್ಥಳೀಯ ಭಾಷೆಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮುಂದಾದವು. ತಮ್ಮ ಅಸ್ತಿತ್ವ ಉಳಿಸಿಕೊಳ್ಳುವ ವಿಷಯಕ್ಕೆ ಸಂಬಂಧಿಸಿದಂತೆ ಇಂಗ್ಲೀಷ್ ಭಾಷೆಯು ಹೇಗೆ ಸಾಹಿತ್ಯಿಕವಾಗಿ ಬೆಳವಣಿಗೆಯಾಗೊದಿಯೋ ಅದರಂತೆ ಸ್ಥಳೀಯ ಭಾಷೆಗಳು ಆ ಮಾದರಿಯಲ್ಲಿ ಸಾಹಿತ್ಯ ರಚನೆಗೆ ತೊಡಗಿದವು. ಇಂತಹ ಕಾರ್ಯದಲ್ಲಿ ತೊಡಗಿದುದರಲ್ಲಿ ಕನ್ನಡವೂ ಒಂದು. ಹಾಗೆಯೇ ಇಂದಿನ ಅತ್ಯುನ್ನತ ತಂತ್ರಜ್ಞಾನವೆಂದು ಹೆಸರಾದ ಕಂಪ್ಯೂಟರ್ ತಂತ್ರಜ್ಞಾನವನ್ನೊಳಗೊಂಡತೆ ಇತರ ತಂತ್ರಜ್ಞಾನದಲ್ಲಿ ತಮ್ಮ ಸ್ಥಳೀಯ ಭಾಷೆಯನ್ನು ಬಳಕೆ ಮಾಡುವಂತಹ ಸಾಧನೆಯ ಪ್ರಯತ್ನದಲ್ಲಿ ತೊಡಗಿರುವುದು.

ಬ್ರಿಟಿಷರ ರಾಜಕೀಯ ಆಡಳಿತ ದೇಸಿಯರ ಸ್ವಾತಂತ್ರಕ್ಕೆ ಸಂಪೂರ್ಣ ದಕ್ಕೆಯಾದರೂ, ಅವರ ಕಾಲದಲ್ಲಿ ಕೆಲವೊಂದು ಉಪಯುಕ್ತವಾದ ಅಂಶಗಳು ಕಂಡುಬಂದವು. ಅವರಿಂದ ಬಂದಿಂಗ್ಲೀಷ್ ಭಾಷೆ, ಅವರು ಜಾರಿಗೆ ತಂದ ಶಿಕ್ಷಣ ಪದಧ್ತಿ, ಹಾಘೂ ಆಡಳಿತ ನಿರ್ವಹಣೆಗೆ (ಗೆ) ಒಂದಂತಹ ಅಧಿಕಾರಿಗಲು ಮತ್ತು ಮತ ಪ್ರಚಾರಕರು ಕುತೂಹಲಕ್ಕಾಗಿ ಮಾಡಿದ ಸಾಹಿತ್ಯದ ಕಾರ್ಯ. ಸಾಹಿತ್ಯದ ಕಾರ್ಯವೆಂದರೆ ನೂರಾರು ವರ್ಷಗಳಿಂದ ಬೆಳಕಿಗೆ ಬಾರದೆ ಮೂಲೆ ಗುಂಪಾಗಿ ಇದ್ದಂತಹ ಶಾಸನಗಳು, ಹಸ್ತಪ್ರತಿಗಳು,ಕಡತಗಳು, ಮುಂತಾದವುಗಳನ್ನು ಸಂಗ್ರಹ ಮಾಡಿದುದು. ಸಂಗ್ರಹ ಮಾಡಿದುದಲ್ಲದೆ ಅವುಗಳನ್ನು ಕೃತಿಯ ರೂಪದಲ್ಲಿ ಪ್ರಕಟ ಮಾಡಿದುದ. ಹಾಗೂ ಸ್ಥಳೀಯ ವಿದ್ವಾಂಸರಿಂದ ಇಲ್ಲಿನ ಭಾಷೆಯನ್ನು ಪಡೆದರು. ಇಲ್ಲಿನ ಭಾಷೆಯ್ನನು ಕಲಿತ್ತದ್ದರಿಂದ ಸ್ಥಳೀಯ ಭಾಷೆಯ ಸಾಹಿತ್ಯವನ್ನು ತಮ್ಮ ಭಾಷೆಗೆ ಭಾಷಾಂತರಿಸತೊಡಗಿದರು. ಈ ಸಂದರ್ಭದಲ್ಲಿ ಹಲವಾರು ಕನ್ನಡ ಕೃತಿಗಳು ಇಂಗ್ಲೀಷ್ ಗೆ ಭಾಷಾಂತಗೊಂಡವು. ಭಾಷಾಂತರ ಗೊಂಡಿದ್ದರಿಂದ ಕೃತಿಗಳು ಪ್ರಕಟವಾದವು. ಈ ಭಾಷಾಂತರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ಹೊರ ಜಗತ್ತಿಗೆ ಕಾಲಿಡುವಂತಾಯಿತು. ಇದೇ ಸಂದರ್ಭದಲ್ಲಿ ಬ್ರಿಟಿಷರ ಶಿಕ್ಷನ ಪದ್ಧತಿಯ ರೂಢಿಯಿಂದಾಗಿ ಸ್ಥಳೀಯ ಭಾಷಿಕರು ಇಂಗ್ಲೀಷನ್ನು ಚೆನ್ನಾಗಿ ಕಲಿತರು. ಅವರಲ್ಲಿ ಕೆಲವು ವಿದ್ವಾಂಸರು ವಿದೇಶದಲ್ಲಿ ಶಿಕ್ಷಣ ಪಡೆದರು. ಇಂಗ್ಲೀಷ್ ಬಾಷೆಯ ಸಾಹಿತ್ಯವನ್ನು ಅಭ್ಯಾಸ ಮಾಡಿದರು. ಹಾಗೆಯೇ ಇಂಗ್ಲೀಷ್ ಸಾಹಿತ್ಯ ಕೃತಿಗಳನ್ನು ಭಾಷಾಂತರ ಮಾಡಲು ಮುಂದಾದರು. ಕವನ, ಕಥೆ, ನಾಟಕ, ಮುಂತಾದ ಸಾಹಿತ್ಯ ಪ್ರಕಾರಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ಒಂದೇ ಸಂದರ್ಭದಲ್ಲಿ ಭಾಷಾ ವಿನಿಮಯ. ಭಾಷಾ ಕೊಡುಕೊಳುವಿಕೆಯ ಕಾರ್ಯ ನಡೆಯಿತು. ಇದು ಎರಡು ಭಾಷೆಗಳು ತಮ್ಮ ನೆಲೆಯಿಂದ ಬೆಳವಣಿಗೆಯ ರೆಂಬೆ-ಕೊಂಬೆಗಳಾಗಿ ಮತ್ತೊಂದು ವಲಯವನ್ನು ಪ್ರವೇಶಿಸಿದ ಕಾರ್ಯ್. ಇದಕ್ಕೆ ಕಾರಣ ಭಾಷಾಂತರ. ಈ ಸಂದರ್ಭದಲ್ಲಾಗಳೇ ಕನ್ನಡ ಸಾಹಿತ್ಯ ಭಾಷಾಂತರಗೊಂಡು ಹೊರ ಜಗತ್ತಿನಲ್ಲಿ ಆಕಷಣೀಯ ಕಂಪನ್ನು ಬೀರಿತ್ತು. ನಮ್ಮ ಕನ್ನಡ ವಿದ್ವಾಂಸರು ಸ್ವದೇಶಿ ವಿದೇಶಿ ಭಾಷೆ ಎಂಬ ಭೇದವೆಣಿಸಿದದೆ ಭಾಷಾಂತರ ಕಾರ್ಯದಲ್ಲಿ ತೊಡಗಿದುದು ಒಂದು ಉತ್ತಮ ಸಾಹಿಯ್ಯದ ಸಾಂಸ್ಕೃತಿಕ ವಾತಾವರಣ ಸೃಷ್ಟಿಮಾಡಿದುದು ಅವರ ದೊಡ್ಡಗಣವೆಂದೆ ಹೇಳಬಹುದು.

ರಾಜಪ್ರಭುತ್ವದ ನಂತರ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಸಾಹಿತ್ತಯ ಪ್ರಕಾರ ಹುಟ್ಟಿಕೊಂಡಿದ್ದೆ ಬಾಷಾಂತರದಿಂದ. ಭಾಷಾಂತರದ ಮೂಲಕ ಹೊಸಗನ್ನಡ ಕವಿತೆಗೆ ವಿನೂತನ ತಿರುವನ್ನು ನೀಡಿದವರಲ್ಲಿ ಹಟ್ಟಿಂಯಂಗಡಿ ನಾರಾಯಣರಾಯರು ಮೊದಲಿಗರು. ಅವರ 'ಆಂಗ್ಲ ಕವಿತಾವಳಿ'ಎಂಬ ಚಿಕ್ಕ ಕೃತಿಯಲ್ಲಿ (೧೯೧೯) ಷೇಕ್ಸಡಿಯರ್ ಶೆಲ್ಲಿ, ವರ್ಡ್ಸ್ ವರ್ತ್ ಮೊದಲಾದವರ ಆಯ್ದ ಕವಿತೆಗಳ ಅನುವಾದವಿದೆ. ನಂತರ ಬಿ.ಎಂ.ಶ್ರೀಯವರು ಇಂಗ್ಲೀಷ್ ಗೀತೆಗಳನ್ನು ಕನ್ನಡಕ್ಕೆ ತರುವುದರ ಮೂಲಕ ಕನ್ನಡ ನವೋದಯ ಸಾಹಿತ್ಯಕ್ಕೆ ನಾಂದಿ

ಹಾಡಿದರು. ಶೆಲ್ಲಿ, ವರ್ಡ್ಸ್‌ವರ್ತ್, ಬರ್ನ್ಸ್, ಬ್ರೌನಿಂಗ್, ಟೆನ್ನಿಸನ್, ಕೋಲ್ ರಿಜ್, ಕೀಟ್ಸ್ ಬೈರನ್ ಮೊದಲಾದ ಕವಿಗಳ ಕವಿತೆಗಳನ್ನು ಕೊಡುವುದರ ಮೂಲಕ ಕನ್ನಡದಲ್ಲಿ ರೋಮ್ಯಾಂಟಿಕ್ ಕಾವ್ಯಕ್ಕೆ ಪ್ರೇರಕ ಶಕ್ತಿಯಾದರು. ಈ ಆಂಗ್ಲ ರೋಮ್ಯಾಂಟಿಕ್ ಕಾವ್ಯದ ಪ್ರಭಾವದಿಂದ ನವೋದಯ ಕಾವ್ ರೂಪು ಪಡೆಯಿತು. ಬಿ.ಎಂ ಶ್ರೀ ಯವರಲ್ಲದೆ ಎಲ್. ಗುಂಡಪ್ಪನವರು ಡಿ.ವಿ. ಗುಂಡಪ್ಪ ಶ್ರೀ ೀಕಂಠೇಗೌಡರು ಎಚ್ ಎಸ್ ಶ್ರೀ ಶಿವಪ್ರಕಾಶ್ ಮುಂತಾದವರು ಅನುವಾದ ಕಾರ್ಯದಲ್ಲಿ ಕೆಲಸ ಮಾಡಿದ್ದಾರೆ.

ನವೋದಯದ ನಂತರ ಬಂದ ಪ್ರಗತಿಶೀಲ ಚಳುವಳಿಗೂ ಸಹ ಮ್ಯಾಕ್ಸಿಂಗಾರ್ಕಿಯವರ ಕತೆಗಳ ಪ್ರಭಾವವಿದೆ. ಈ ಸಂದರ್ಭದಲ್ಲಿ ಎಸ್. ಸುಬ್ರಮಣ್ಯರವರು ಗೋಗೋಲ್‌ನ ನಿಲ್ಲತೆ The clock – ನಿಲುವಂಗಿ (೧೯೪೯)ಯೆಂಬ ಹೆಸರಿನಲ್ಲಿ ಅನುವಾದವಾಗಿದೆ. ನವ್ಯ ಕಾವ್ಯವು ಕೂಡ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವಿದೆ. ಟಿ.ಖ. ಎಲಿಯೆಟ್ ರಂತಹ ಕವಿಗಳ ಕವಿತೆಗಳ ಅನುವಾದಗಳು ಅನುವಾದಗೊಂಡಿವೆ. ಕನ್ನಡದಲ್ಲಿ ಸಣ್ಣಕತೆ, ಪ್ರಬಂದ, ವಿಮರ್ಶೆ ಎಲ್ಲಾ ಪ್ರಕಾರಗಳು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಲೇ ಬಂದುದು. ಇಂಗ್ಲೀಷ್ ಭಾಷೆಯಲ್ಲದೆ ಬೇರೆ ಭಾಷೆಗಳ ಕೃತಿಗಳು ಸಹ ಕನ್ನಡಕ್ಕೆ ಅನುವಾದಗೊಂಡಿವೆ. ಕೆ.ಎಸ್. ಶಿವರಾಂ ಮತ್ತು ಎಚ್. ಎಸ್. ಹರಿಶಂಕರ್ ರವರು ರಷ್ಯಾನ್ ಭಾಷೆಯ ಚೆಕಾಫ್ ನ ಕತೆಗಳನ್ನು ಕಪ್ತಾಂಕ ಮತ್ತು ಇತರ ಕತೆಗಳು ಎಂಬ ಹೆಸರಿನಲ್ಲಿ ಅನುವಾದಗೊಂಡಿವೆ. ದೇಜಗೌ ಅವರು (Resurrection) ಕೃತಿಗಳನ್ನು ಇಂಗ್ಲೀಷ್ ನ ಮೂಲಕ ಅನುವಾದಿಸಿದ್ದಾರೆ. ರಷ್ಯನ್ ದೇಶದ ರಾಜಕೀಯ, ಕ್ರಾಂತಿಗಾರಿ ಮನೋಭಾವ ಕಮ್ಯುನಿಸಂ ತತ್ವ ಸಿದ್ಧಾಂತಗಳಿಗೆ ಆಕರ್ಷಿತರಾದ ಅನೇಕರು ಕನ್ನಡಕ್ಕೆ ರಷ್ಯನ್ ಕೃತಿಗಳ ಭಾಷಾಂತರ ಮಾಡಿದರು. ಶ್ರೀಯವರು ಗ್ರೀಕ್ ರುದ್ರನಾಟಕವನ್ನು ಕನ್ನಡದಲ್ಲಿ ಮೊದಲಬಾರಿಗೆ ಪರಿಚಯಿಸುವ ಕಾರಣಕ್ಕೆ 'ಗದ್ದಾಯುದ್ಧ' ಎಂಬ ಗದ್ಯ ನಾಟಕವನ್ನು ಪರಿಚಯಿಸಿದರು. ಜಿ.ಎ. ರೆಡ್ಡಿಯವರು ಗ್ರೀಕ್ ಪುರಾಣಗಳನ್ನು ಪರಿಚಯಿಸುವ ದೃಷ್ಟಿಯಿಂದ ಹೋಮರಸ ಓಡಿಸ್ಸಿಯನ್ನು (೧೯೬೧) ಹಾಗೂ ಇಲಿಯಡ್ ಕಾವ್ಯವನ್ನು (೧೯೬೮) ಕನ್ನಡಕ್ಕೆ ಅನುವಾದಿಸಿದ್ದರು. ಪರ್ಶಿಯನ್ ಭಾಷೆಯಿಂದ ಅನೇಕ ಕಾವ್ಯಗಳು ಅನುವಾದಗೊಂಡಿದೆ. ಸಾದಿ, ಹಫಿಜ್, ಫೀರ್ ದೌಸಿ ಇವರ ಕಾವ್ಯ ಭಾಗಗಳು ೨೦ನೇ ಶತಮಾನದ ಪೂರ್ವದಲ್ಲಿಯೇ ಕನ್ನಡದಲ್ಲಿ ಪ್ರಕಟವಾಗಿವೆ. ಹನಾಮದಲ್ಲಿ ಬರುವ ಸೋಹ್ರಾಬ್ ರುಸ್ತುಂ ಕತೆಗಳು ಕನ್ನಡದಲ್ಲಿ ಪ್ರಕಟವಾಗಿವೆ. ಆಫ್ರಿಕನ್ ತಪ್ಪು ಸಾಹಿತ್ಯದ ಅನುವಾದಗಳು ಇಪ್ಪತನೆಯ ಶತಮಾನದ ಕೊನೆಯ ದಶಕದ ಬರಹಗಾರರ ಮೇಲೆ ಪ್ರಭಾವ ಬೀರಿವೆ. ಅಮೇರಿಕನ್, ಇಟಾಲಿಯನ್, ಜರ್ಮನ್, ಫ್ರೆಂಚ್ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ಬಂದುದು ಬಹುತೇಕ ಇಂಗ್ಲೀಷನ್ ಮೂಲಕವೇ ಆಗಿದೆ. ನಿರಂಜನರು ಸಂಪಾದಿಸಿದ ವಿಶ್ವಕಥಾ ಸಾಹಿತ್ಯ ಮಾಲಿಕೆಯ ಕೃತಿಗಳು, ಜಗತ್ತಿನ ಪ್ರಮುಖ ಜನಪದ ಕತೆಗಳು, ಬುದ್ಧನ ಜಾತಕ

ಕತೆಗಳು ಭಾಷಾಂತರಗಳ ಮೂಲಕ ಕನ್ನಡಕ್ಕೆ ಬಂದಿವೆ. ಹೀಗೆ ಆಧುನಿಕ ಕನ್ನಡ ಸಾಹಿತ್ಯವು ಭಾಷಾಂತರಿಸಿದ ಬೆಳವಣಿಗೆಯ ಎಲ್ಲೆಯನ್ನು ವಿಸ್ತರಿಸಿದೆ ಎನ್ನಬಹುದು.

ಪ್ರಾಚೀನ ಕಾಲದಿಂದ ಪ್ರಸ್ತುತ ಇಂದಿನವರೆಗೆ ಸಾಹಿತ್ಯದಲ್ಲಿ ಭಾಷಾಂತರ ಕಾರ್ಯ ನಡೆಯುತ್ತಲೇ ಬಂದಿದೆ. ಭಾಷಾಂತರದಿಂದ ಹಲವಾರು ಪ್ರಯೋಜನಗಳುಂಟು. ಬ್ರಿಟಿಷರು ಭಾರತಕ್ಕೆ ಬರುವ ಮುಂಚೆ ಸಂಸ್ಕೃತದಿಂದ ಕನ್ನಡಕ್ಕೆ ಹಾಗೂ ಕನ್ನಡದಿಂದ ಸಂಸ್ಕೃತಕ್ಕೆ ಹೆಚ್ಚಾಗಿ ಭಾಷಾಂತರ ಕಾರ್ಯಗಳು ನಡೆಯುತಿದ್ದವು. ಎರಡು ಭಾಷೆಗಳ ಭಾಷಾ ವಿನಿಮಯ ನಡೆಯುತ್ತದೆ. ಸಂಸ್ಕೃತ ಶಬ್ದಗಳ ಪದಗಳು ಕನ್ನಡದಲ್ಲಿ ಬಳಕೆಯಾದವು. ಸಂಸ್ಕೃತಸ ಛಂದೋರೂಪಗಳು ಕನ್ನಡಿಗರಿಗೆ ಪರಿಚಯವಾದವು. ಸಂಸ್ಕೃತದ ಕಾವ್ಯದಲ್ಲಿ ಬಳಕೆಗೊಂಡ ಅಷ್ಟಾದಶ ವರ್ಣನೆ, ರಸಗಳು, ಅಲಂಕಾರಗಳು, ಮುಂತಾದ ವಿಚಾರಗಳು ಪರಿಚಯವಾದವು. ಮುಖ್ಯವಾಗಿ ಸಂಸ್ಕೃತದಲ್ಲಿ ಕಾವ್ಯ ರಚನೆ ಮಾಡಿದ ಕವಿಗಳ ಪರಿಚಯ, ಸಂಸ್ಕೃತದ ಸಾಹಿತ್ಯವನ್ನು ಭಾಷಾಂತರ ಮಾಡುವಾಗ ಕನ್ನಡ ಭಾಷೆ ಮತ್ತು ಸಂಸ್ಕೃತ ಭಾಷೆಯಲ್ಲಿನ ಸಾಹಿತ್ಯವನ್ನು ತೌಲನಿಕವಾಗಿ ಅಭ್ಯಾಸ ಮಾಡುವ ಅವಕಾಶ ದೊರೆಯಿತು. ಕನ್ನಡದಲ್ಲಿ ನಾಟಕ ಪರಂಪರೆ ಅಥವಾ ಪ್ರಕಾರವಿರಲಿಲ್ಲ. ಸಂಸ್ಕೃತದಲ್ಲಿದ್ದ ಹರ್ಷನ ರತ್ನಾವಳಿ ನಾಟಕವು ಸಿಂಗಾರಾರ್ಯನ ಮಿತ್ರವಿಂದಾ ಗೋವಿಂದ ಎಂಬ ಕನ್ನಡ ಅನುವಾದದ ಮೂಲಕ ನಾಟಕ ಪ್ರಕಾರ ಪರಿಚಯವಾಯಿತು. ಒಟ್ಟಾರೆಯಾಗಿ ಸಂಸ್ಕೃತದ ಪ್ರಭಾವ ಕನ್ನಡದಲ್ಲಿ ಸ್ಪಷ್ಟವಾಗಿದೆ. ಇಂಗ್ಲೀಷರು ಬಂದ ನಂತರ ಇಂಗ್ಲೀಷಿನ ಪ್ರಭಾವದಿಂದಾಗಿ ಇಂಗ್ಲೀಷ್ ಸಾಹಿತ್ಯದಿಂದ ಕನ್ನಡದಲ್ಲಿ ಅನುವಾದ ಕಾರ್ಯ ಪ್ರಾರಂಭವಾಯಿತು. ಪಾಶ್ಚಾತ್ಯ ಧಾಟಿಯ ರಚನೆಗಳಲ್ಲಿ ಹೊಸ ಛಂದಸ್ಸಿನ ಬಳಕೆಯನ್ನು ಕಾಣಬಹುದು. ಇಂಗ್ಲೀಷ್ ಕಾವ್ಯದ ವೈಶಿಷ್ಟಗಳಲ್ಲೊಂದಾದ ಅಂತ್ಯ ಪ್ರಾಸವು ಈ ಸಂದರ್ಭದಲ್ಲಿ ಕನ್ನಡಕ್ಕೆ ಬಂದಿತು. ಸಾನೆಟ್ ಪ್ರಗಾಥ ಮೊದಲಾದ ಭಾವಗೀತೆಯ ಪ್ರಕಾರಗಳು, ತಾತ್ವಿಕ ಕಾವ್ಯ, ಕಥನ ಕಾವ್ಯ ವಿಡಂಬನ ಕಾವ್ಯಗಳೂ ಕನ್ನಡಕ್ಕೆ ಬಂದುವು. ಆಧುನಿಕ ಕನ್ನಡ ಸಾಹಿತ್ಯ ರಚನೆಯಲ್ಲಿ ಬಳಕೆಗೊಂಡಿರುವ ಸರಳರಗಳೆ ಮುಕ್ತಛಂದಗಳಂತಹವು ಇಂಗ್ಲೀಷಿನಿಂದ ಪ್ರಭಾವಿತವಾದವು. ಸಣ್ಣಕತೆ, ಪ್ರಬಂಧ, ವಿಮರ್ಶೆ ಈ ಸಾಹಿತ್ಯ ಪ್ರಕಾರಗಳು ಕನ್ನಡಕ್ಕೇ ಬಂದವು. ಕನ್ನಡದ ಹನಿಗವನಗಳು ಜಪಾನಿನ ಹಾಯ್ಕುಗಳನ್ನು ಹಾಗೂ ಝೆನ್ ಕಾವ್ಯಗಳ ಮಾದರಿಯನ್ನು ಹೋಲುತ್ತದೆ. ಹಗೆ ಭಾಷಾಂತರದಿಂದ ತುಂಬಾ ಪ್ರಯೋಜನಗಳು (ಇವೆ) ಆಗಿವೆ. ಒಟ್ಟಾರೆಯಾಗಿ ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರದಿಂದ ಇಂಗ್ಲೀಷಿನ ಸಾಂಸ್ಕೃತಿಕ ಪರಿಚಯ ಆಗಿದೆ. ಅಲ್ಲಿನ ಜನಜೀವನ ಪರಿಚಯ, ಅಲ್ಲಿನ ವೀರರ ತ್ಯಾಗ ಸಾಹಸ ಪ್ರಾಚೀನ ಕಾವ್ಯಗಳಿಂದ ತಿಳಿದು ಬಂದರೆ ಆಧುನಿಕ ಇಂಗ್ಲೀಷ್ ಸಾಹಿತ್ಯ ಹಾಗೂ ಇತರ ಸಾಹಿತ್ಯಗಳಿಂದ ಕೆಲವೊಂದು ತತ್ವ ಸಿದ್ಧಾಂತಗಳು ಪರಿಚಯವಾಗಿವೆ. ಇದರಿಂದ ಹೆಚ್ಚು ಹೆಚ್ಚು ಇಂಗ್ಲೀಸಾಹಿತ್ಯ ಅಭ್ಯಾಸ ಮಾಡುವ ಮತ್ತೆ ಮತ್ತೆ ಆ ಸಾಹಿತ್ಯವನ್ನು ಭಾಷಾಂತರಿಸುವಂತಹ ಪ್ರಕ್ರಿಯೆಗಳು ಉಂಟಾಗುತ್ತವೆ. ಹೀಗೆ ಭಾಷಾಂತರದಿಂದ ಅನ್ಯ ಭಾಷೆಯ ಸಾಹಿತ್ಯದಿಂದ ಅಭ್ಯಾಸದಿಂದ ಆ ಸಾಹಿತ್ಯದ

ವಿಷಯ ವಸ್ತು ಹಾಗೂ ಆ ಸಾಹಿತ್ಯದ ಜ್ಞಾನ ಬೆಳೆಯುತ್ತದೆ. ಇತರ ಭಾಷೆಗಳಿಗಿಂತ ಇಂಗ್ಲೀಷ್ ಭಾಷೆಯು ಜಗತ್ತಿನಾದ್ಯಂತ ಎಲ್ಲಾ ರೀತಿಯಲ್ಲೂ ಬೆಳೆದಿದೆ. ತಂತ್ರಜ್ಞಾನದಲ್ಲೂ ಸಹ ಬೆಳೆದಿದೆ.

ಭಾಷಾಂತರದಿಂದ ಏನೆಲ್ಲಾ ಉಪಯೋಗಗಳು ಇವೆ ಎಂಬುದನ್ನು ಅರಿತಿದ್ದೇವೆ. ಅದರಂತೆ ಆಧುನಿಕ ತಾಂತ್ರಿಕ ಯುಗದಲ್ಲಿ ನಮ್ಮ ಭಾಷೆಯ ಈ ಭಾಷಾ ಪೈಪೋಟಿಯಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಸಾಹಿತ್ಯದ ಬೆಳವಣಿಗೆ ವಿಸ್ತರಿಸ ಬೇಕಾದರೆ ತಂತ್ರಜ್ಞಾನ ಬಹಳ ಅವಶ್ಯಕವಾಗಿ ಬೇಕಾಗಿದೆ. ಈ ತಂತ್ರಜ್ಞಾನದ ವ್ಯವಹಾರಿಕ ಕೆಲಸ ಕಾರ್ಯಗಳಿಗೆ ಅಷ್ಟೇ ಅಲ್ಲದೆ ಸಾಹಿತ್ಯದ ಅಧ್ಯಯನ ತಂತ್ರಜ್ಞಾನದ ಮೂಲಕ ಮಾಡುವಷ್ಟರ ಮಟ್ಟಿಗೆ ಸುಧಾರಣೆ ಮಾಡಬೇಕಾಗಿದೆ. ಇದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ಬೆಳವಣಿಗೆಯಾಗುತ್ತದೆ.

ಈಗಾಗಲೇ ಭಾಷೆಯ ಬೆಳವಣಿಗೆಯ ದೃಷಿಯಿಂದ ಕಂಪ್ಯೂಟರಿನಲ್ಲಿ ಕೆಲವೊಂದು ತಂತ್ರಾಂಶಗಳನ್ನು ತಯಾರಿಸಲಾಗಿದೆ. ಇದರಿಂದ ಅನೇಕ ವ್ಯವಹಾರಿಕ ಕಾರ್ಯಗಳು ನಡೆಯುತ್ತಿವೆ. ಹಾಗೆಯೇ ಕನ್ನಡ ಸಾಹಿತ್ಯ ಜಾಗತಿಕ ಮಟ್ಟದಲ್ಲಿ ಎಲ್ಲಾರಿಗೂ ತಲುಪಲು ಕೆಲವೊಂದು ತಾಂತ್ರಿಕ್ರಿಯೆಗಳನ್ನು ರೂಪಿಸಲಾಗಿದೆ. ಕನ್ನಡ ಸಾಹಿತ್ಯದ ಸವಿಯನ್ನು ಸ್ಥಳೀಯರಲ್ಲದೆ ಬೇರೆ ಬೇರೆ ಭಾಷಿಕರು ಸವಿಯಲಿಕ್ಕೆ ತಂತ್ರಜ್ಞಾನ ರೂಪಿಸಲಾಗಿದೆ.

ಕಂಪ್ಯೂಟರಿನಲ್ಲಿ ಕನ್ನಡದ ಮಾಹಿತಿಯನ್ನು ಪಡೆಯಲು ಹಲವು ತಾಂತ್ರಕವಾದ ವಿಳಾಸಗಳನ್ನು ಸೃಷ್ಟಿಮಾಡಲಾಗಿದೆ. ಅದೇ ರೀತಿ ಕನ್ನಡ ಭಾಷಾಂತರಕ್ಕೆ ಸಂಬಂಧಿಸಿದಂತೆ ಅಂತರಜಾಲದಲ್ಲಿ ಕನ್ನಡ ಭಾಷೆಯಿಂದ ಆಂಗ್ಲಭಾಷೆಗೆ ಹಾಗೂ ಇತರ ಭಾಷೆಗೆ ಹಾಗೂ ಇತರ ಭಾಷೆಯಿಂದ ಕನ್ನಡಕ್ಕೆ ಭಾಷಾಂತವಾಗಲು ೨೦೧೧ ನೇ ಇಸವಿಯಲ್ಲಿ 'ಗೂಗಲ್ ಆನ್ ಲೈನ್ ಟ್ರಾನ್ಸ್‌ಲೇಶನ್' ಸೌಲಭ್ಯ ಬಂದಿದೆ. ಇದರಿಂದ ಅನ್ಯಭಾಷಿಕರು ಸಹ ಕನ್ನಡ ಸಾಹಿತ್ಯವನ್ನು ತಮ್ಮ ಭಾಷೆಗೆ ಅನುವಾದ ಮಾಡಿಕೊಂಡು ಕನ್ನಡ ಸಾಹಿತ್ಯದ ಸವಿಯನ್ನು ನೋಡಬಹುದಾಗಿದೆ.

ಯಾವುದೇ ವಿಷಯದ ಬಗ್ಗೆ ಮಾಹಿತಿಯನ್ನು ಒದಗಿಸುವ ಪ್ರಂಪಚದ ಅತ್ಯಂತ ಪ್ರಸಿದ್ಧವಾದ 'ಸರ್ಚ್ ಇಂಜಿನ್' ಗೂಗಲ್. ಈ ಗೂಗಲ್ ಸರ್ಚ್‌ನಲ್ಲಿ ಪ್ರಪಂಚದ ಇತರ ಭಾಷೆಗಳು ಹೊಂದಿರುವ ಭಾಷಾಂತರದ ಸೌಲಭ್ಯವು ಇಂಟರ್‌ನೆಟ್ ಸೌಲಭ್ಯ ಪಡೆದುಕೊಂಡು ಜಗತ್ತಿನ ಯಾವ ಮೂಲೆಯಲ್ಲಾದರೂ ಈ ಸೌಲಭ್ಯಪಡೆಯಬಹುದು. ಕಂಪ್ಯೂಟರಿನಲ್ಲಿ ಗೂಗಲ್ ಸರ್ಚ್‌ನಲ್ಲಿ http://transte.google.com ಎಂಬ ವಿಳಾಸಕ್ಕೆ ಹೋಗಬೇಕು. ಆಗ ಬರುವ ಪರದೆಯ ಮೇಲೆನ from ಕೆಳಗಿನ ಚೌಕದೊಳಗೆ ಅನುವಾದವಾಗ ಬೇಕಾದ ಕತೆಯನ್ನು ಪೇಸ್ಟ್‌ಮಾಡಬೇಕು. ಮುಂದೆ ಅನುವಾದವಾಗ ಬೇಕಾದ ಭಾಷೆಯ ಮೇಲೆ ಕ್ಲಿಕ್ ಮಾಡಿರಿ. ಅನಂತರ translate ಮೇಲೆ ಕ್ಲಿಕ್ ಮಾಡಬೇಕು. ಕೂಡಲೇ ಬಲಬದಿಯಲ್ಲಿ ಯಾವ ಭಾಷೆಗೆ ಅನುವಾದಕ್ಕೆ ಕ್ಲಿಕ್ ಮಾಡಿದಿರೋ ಆ ಭಾಷೆಯಲ್ಲಿ ಅನುವಾದವಾಗಿ ಕಾಣುತ್ತದೆ. ಉದಾ: ಕನ್ನಡದಲ್ಲಿ "ಕನ್ನಡ

ಸಾಹಿತ್ಯದ ಬೆಳವಣಿಗೆಯಲ್ಲಿ ತಂತ್ರಜ್ಞಾನದ ಪಾತ್ರ" ಎಂದು ಪಠ್ಯವನ್ನು ಟೈಪ್ ಮಾಡಿದಾಗ ನಂತರ ಯಾವ ಭಾಷೆಗೆ ಅನುವಾದ ಮಾಡಿಕೊಳ್ಳಬೇಕೋ ಆ ಭಾಷೆಯನ್ನು ಕ್ಲಿಕ್ ಮಾಡಿದಾಗ ಇದನ್ನು English ಭಾಷೆಯ ಮೇಲೆ ಕ್ಲಿಕ್ ಮಾಡಿದಾಗ The role of technology in the development of Kannada liteture. ಎಂದು ಸ್ಕ್ರೀನ್ ಮೇಲೆ ವಿಷಯ ಮೂಡುತ್ತದೆ. ಇದರಂತೆ ನಾನು ಕೂಡ ಒಂದು ಪ್ರಯೋಗವನ್ನು ಮಾಡಿದೆ. ನನ್ನ ಗುರುಗಳಾದ ಡಾ.ವೀರೇಶ್ ಬಡಗೇರ ಅವರು ರಚಿಸಿರುವ ನನ್ನೊಡಲ ಏಕದಾರಿ ಕವನ ಸಂಕಲನದಲ್ಲಿನ ಅಂದು ಇಂದು ಎಂಬ ಕವನವನ್ನು Google translate ಮಾಡಿದೆನು. ಈ ಕವನದ ಪಠ್ಯವನ್ನು ಪೂರ್ತಿಯಾಗಿ ಟೈಪ್ ಮಾಡಿ ನಂತರ English ಭಾಷೆಯ ಮೇಲೆ ಕ್ಲಿಕ್ ಮಾಡಿದಾಗ ಕನ್ನಡದಿಂದ ಇಂಗ್ಲೀಷ್‌ಗೆ ಭಾಷಾಂತರವಾಯಿತು.

| ಕವನದ ಪಠ್ಯ | ಅನುವಾದಗೊಂಡ ಪಠ್ಯ |
|---|---|
| ಅಂದು ಬೆ | The girl who shook |
| ಬೆಚ್ಚಿ ಬೀಳಿಸಿದ | That day |
| ಹುಡುಗಿ | Whife who unraveled |
| ಇಂದು | Today |
| ಬೀಳಿಸಿದ | |
| ಹೆಂಡತಿ | |

ಈ ರೀತಿಯಾಗಿ ಇಂಟರ್‌ನೆಟ್ ಗೂಗಲ್ ಟ್ರಾನ್ಸಲೇಟ್‌ನಲ್ಲಿ ಭಾಷಾಂತರದ ಸೌಲಭ್ಯ ಜಾಗತಿಕ ಮಟ್ಟದಲ್ಲಿ ಇದೆ. ಇದರಿಂದ ನಮ್ಮ ಸಾಹಿತ್ಯದಲ್ಲಿನ ಅರ್ಥವನ್ನು ಮೊದಲ (ಅವರ) ಅನ್ಯಭಾಷಿಕರು ಅವರ ಭಾಷೆಯಲ್ಲಿ ತಿಳಿದುಕೊಂಡು ಗ್ರಹಿಸಿ ನಮ್ಮ ಭಾಷೆಯನ್ನು ಕಲಿತು ಸಾಹಿತ್ಯ ಅಭ್ಯಾಸ ಮಾಡುತ್ತಾರೆ. ಕವನ, ನಾಟಕ, ಮುಂತಾದ ಸಾಹಿತ್ಯ ಪ್ರಕಾರಗಳನ್ನು ಕನ್ನಡ ಭಾಷೆಯಿಂದ ಇಂಗ್ಲೀಷ್ ಒಳಗೊಂಡಂಕೆ ಇತರ ಭಾಷೆಗಳಿಗೆ ಅನುವಾದಗೊಳ್ಳುವಂತ ಅವಕಾಶ ಅಥವಾ ಸೌಲಭ್ಯವಿದೆ. ಈ ರೀತಿಯ ಸೌಲಭ್ಯ ಸದಾ ಕಾಲ ಇರುವಂತಹದು. ಯಾವುದೇ ಪ್ರದೇಶದಲ್ಲಿ ಯಾವುದೇ ವ್ಯಕ್ತಿ ಯಾವುದೇ ಸಮಯದಲ್ಲಿ ಇದರ ಉಪಯೋಗ ಪಡೆಯಬಹುದು. ಇಂತಹ ಸಾಮೂಹಿಕವಾದ ತಾಂತ್ರಿಕ ಸೌಲಭ್ಯ ಇರುವುದರಿಂದ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ತುಂಬಾ ಅನುಕೂಲಕಾರಿಯಾದುದಾಗಿದೆ. ಈ ರೀತಿಯ ಸೌಲಭ್ಯದಿಂದ ಜಾಗತಿಕಮಟ್ಟದಲ್ಲಿ ಹೊರ ಜಗತ್ತಿನ ಜನತೆಯಾಕೂಡ ಕನ್ನಡ ಭಾಷೆಯ ಮತ್ತು ಭಾಷೆಯ ಸಾಹಿತ್ಯವನ್ನು ಸುಲಭವಾಗಿ ಅರ್ಥಮಾಡಿಕೊಳ್ಳುವಂತಹ ಸರಳ ವಿಧಾನ, ಕಂಪ್ಯೂಟರ್ ತಂತ್ರಜ್ಞಾನದ ಮೂಲಕ ಸಾಹಿತ್ಯದ ಅಧ್ಯಯನದ ಹೊಸ ಪ್ರಯೋಗದಲ್ಲಿ 'ಭಾಷಾಂತರದ' ಸೌಲಭ್ಯ ಜಾಗತಿಕ

ಮಟ್ಟದಲ್ಲಿ ಉಪಯೋಗಿಸಿ ತಂತ್ರಾಂಶ ಅಳವಡಿಕೆಯಾಗಿರುವುದು ಬಹಳ ಸಂತೋಷದ ಸಂಗತಿ.

ಕನ್ನಡಿಗರು ತಂತ್ರಜ್ಞಾನದ ಚಟುವಟಿಕೆಗಳಲ್ಲಿ ಜಗತ್ತಿನಾದ್ಯಂತ ಹೆಸರನ್ನು ಪ್ರಸ್ತುತ ಸಂದರ್ಭದಲ್ಲಿ ಪಡೆಯುತ್ತಿರುವಂತವರು. ಆದುದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಕುರಿತಂತೆ ಇಂತಹ ಕಾರ್ಯಚಟುವಟಿಕೆಗಳನ್ನು ರೂಪಿಸುವುದು ಒಂದು ಭಾಷೆಯ ಆಸ್ತಿತ್ವವನ್ನು ಉಳಿಸುವ ಆ ಭಾಷೆಯ ಸಾಹಿತ್ಯವನ್ನು ಜಗತ್ತಿನಾದ್ಯಂತ ಪ್ರಸರಿಸುವಂತಹ ಕಾರ್ಯವಾಗಿರುತ್ತದೆ. ಇದಕ್ಕಾಗಿ ಕಾಲಕ್ಕೆ ಅನುಗುಣವಾಗಿ ಭಾಷೆ ಮತ್ತು ಸಾಹಿತ್ಯವನ್ನು ಉಳಿಸುವಲ್ಲಿ ಬೆಳೆಸುದಲ್ಲಿ ಅತ್ಯಂತ ಜಾಗರೂಕತೆಯಿಂದ ಕಾರ್ಯನಿರ್ವಹಿಸಬೇಕಾಗುತ್ತದೆ. ಇದಕ್ಕಾಗಿ ಕರ್ನಾಟಕ ಸರ್ಕಾರ ಆರ್ಥಿಕ ನೆರವು ನೀಡಬೇಕಾಗುತ್ತದೆ.

ಇಷ್ಟು ತಾಂತ್ರಿಕವಾಗಿ ಕನ್ನಡ ಭಾಷೆ ಮುಂದುವರೆದರೂ ಇನ್ನೂ ಸಾಕಷ್ಟು ಕೆಲಸ ಮಾಡಬೇಕಾಗಿದೆ. ಸಾಹಿತ್ಯವನ್ನು ಭಾಷಾಂತರ ಸರಳವಾದ ಅರ್ಥವನ್ನು ತಂತ್ರಜ್ಞಾನಕ್ಕೆ ಅಳವಡಿಸಲಾಗಿದೆ ಕೆಲವೊಂದು ಪದಗಳಿಗೆ ಆಂಗ್ಲ ಭಾಷೆಯಲ್ಲಿನ ಯಾವುದೇ ಒಂದು ಭಾಷೆಯಲ್ಲಿ ರಚಿತವಾದಂತಹ ಸಾಹಿತ್ಯದನ್ನು ಅರ್ಥ ನಮಗೆ ತಿಳಿಯದೇ ಹೋದಾಗ ಆ ಸಾಹಿತ್ಯ ಗ್ರಹಿಕೆ ಅಸ್ವಾದನೆಯ ತೃಪ್ತಿ ಪಡೆಯಲಾಗುವುದಿಲ್ಲ. ತೃಪ್ತಿ ಪಡೆಯಲಾಗದೆ ಹೋದರೆ ಆ ಸಾಹಿತ್ಯದ (ಆಸಕ್ತಿ) ಬಗೆಗಿನೆ ಆಸಕ್ತಿ ಕುಂಠಿತವಾಗುತ್ತದೆ. ಆಸಕ್ತಿ ಕುಂಠಿತಗೊಂಡಾಗ ಬಗೆಗಿನ ದುರು ಓದು ಕುಂಠಿತವಾಗುತ್ತದೆ. ಓದು ಕುಂಠಿತಗೊಂಡಾಗ ಆ ಭಾಷೆಯ ಬಗೆಗಿನ ನಿರ್ಲಕ್ಷತೆದೋರುತ್ತದೆ.

ಇವತ್ತಿನ ತಾಂತ್ರಿಕ ಲೋಕದಲ್ಲಿ ಒಂದು ಭಾಷೆಯು ಒಳಗೊಂಡಿರುವ ಪದಸಂಪತ್ತು. ಆ ಪದಸಂಪತ್ತು ತಂತ್ರಜ್ಞಾನದಲ್ಲಿ ಅಳವಡಿಕೆಗೊಂಡಿರುವಂತಹ ವಿಷಯ ಆ ಭಾಷೆಯ ಸಾಹಿತ್ಯ ತಾತ್ವಿಕತೆಯ ಬಗ್ಗೆ ಚರ್ಚೆಗಳು ವೇಗವಾಗಿಯೇ ನಡೆಯುತ್ತಿರುತ್ತವೆ. ಇದರಿಂದ ಸಾಕಷ್ಟು ಮಟ್ಟಿಗೆ ತಂತ್ರಜ್ಞಾನದಲ್ಲಿ ಸುಧಾರಣೆ ಅತ್ಯಗತ್ಯವಾಗಿರುತ್ತದೆ. ಹಾಗಾಗಿ ನಮ್ಮ ಕನ್ನಡದ ಸಂದರ್ಭದಲದಲ್ಲಿ ತಂತ್ರಜ್ಞಾನದಲ್ಲಿ ಸಾಕಷ್ಟು ಕಲಸ ಆಗ ಬೇಕಾಗಿದೆ. ಭಾಷಾಂತರಕ್ಕೆ ಸಂಬಂಧಿಸಿದಂತೆ ಇಂದು ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡಿರುವ ಆಂಗ್ಲ ಭಾಷೆಯಂತೆ ಗುರುತಿಸಿಕೊಳ್ಳವ ನಿಟ್ಟಿನಲ್ಲಿ ಕೆಲಸಮಾಡಬೇಕಾಗಿದೆ. ಈಗಾಗಲೇ ನಮ್ಮ ಕನ್ನಡ ವಿದ್ವಾಂಸರು ಕನ್ನಡಸಾಹಿತ್ಯವನ್ನು ಆಂಗ್ಲಭಾಷೆಗೆ ಭಾಷಾಂತರಿಸುವ ಕಾರ್ಯಮಾಡಿದ್ದಾರೆ. ಹಾಗೂ ಮಾಡುತ್ತಾಲ್ಲಿದ್ದಾರೆ. ವಿಶ್ವ ಸಾಹಿತ್ಯಕ್ಕೆ ಕೊಡುಗೆಯನ್ನು ನೀಡಿರುವ ವಚನ ಸಾಹಿತ್ಯದ ಕೆಲವುವಚನಗಳನ್ನು ಭಾಷಾಂತರಿಸಿದ್ದಾರೆ. ಹೊಸಗನ್ನಡ ಸಾಹಿತ್ಯದ ಕಥೆ, ಕಾದಂಬರಿ, ನಾಟಕ, ಕವನ, ಮುಂತಾದ ಸಾಹಿತ್ಯದ ಪ್ರಕಾರಗಳನ್ನು ಭಾಷಾಂತರಿಸಿದ್ದಾರೆ. ಇನ್ನೂಪಂಪನ ಕಾವ್ಯಗಳ ಭಾಷಾಂತರದ ಪ್ರಕ್ರಿಯ ನಡೆಯುತ್ತಿದೆ. ಇದರಿಂದ ಇಂಗ್ಲೀಷ್ ಬಲ್ಲವರು ಕನ್ನಡ ಸಾಹಿತ್ಯದ ಅರ್ಥವನ್ನು ಸುಲಭವಾಗಿ ತಿಳಿಯಬಹುದಾಗಿದೆ.

ಕನ್ನಡದಿಂದ ಇಂಗ್ಲೀಷಿಗೆ ಭಾಷಾಂತರಿಸುವಾಗ ಕೆಲವೊಂದು ಕನ್ನಡದ ಪದಗಳಿಗೆ ಅರ್ಥವು ಸರಿಹೊಂದಿಕೆಯಾಗುವುದಿಲ್ಲ. ಆದುದರಿಂದ ಯಾವುದೇ ಒಂದು ಸಾಹಿತ್ಯದ ಪ್ರಕಾರ ಕಥೆ ಕವನದ ಪದಗಳಿಗೆ ಆ ಸಾಹಿತ್ಯ ಹೊಂದಿರುವ ಭಾವನಾತ್ಮಕ ಅರ್ಥ, ಆಧ್ಯಾತಿಕ ಅರ್ಥ, ಲಿಂಗ ಸಂಬಂಧಿ ಅರ್ಥ, ಮೌಲ್ಯ ಸಂಬಂಧಿ ಅರ್ಥ, ಮೌಲ್ಯ ಸಂಬಂಧಿ ಅರ್ಥ, ಸಾಂಸ್ಕೃತಿಕ ಅರ್ಥಗಳು ಇಂಗ್ಲೀಷಿನಲ್ಲಿ ದೊರೆಯಬೇಕಾಗಿದೆ. ಪ್ರಾಯೋಗಿಕವಾಗಿ ಸಾಹಿತ್ಯ ಭಾಷಾಂತರ ಮಾಡುವಾಗ ನನಗೆ ಕಂಡುಬಂದಂತಹ ಸಮಸ್ಯೆಗಳು. ಆದುದರಿಂದ ಈಗಗಾಲೇ ಗೂಗಲ್‌ನಲ್ಲಿ ಅಳವಡಿಕೆಯಾಗಿರುವ ಕನ್ನಡ ಮತ್ತು ಇಂಗ್ಲೀಷ್ ಭಾಷಾಂತರ ತಂತ್ರಾಂಶ ಒಂದು ಮಟ್ಟಿಗೆ ಸುಧಾರಣೆ. ಆದರೆ ಇನ್ನೂ ಆ ತಂತ್ರಾಂಶಕ್ಕೆ ಮೇಲೆ ತಿಳಿಸಿದ ವಿಷವನ್ನು ತುಂಬ ಬೇಕಾಗಿದೆ. ಇದರಿಂದ ಕನ್ನಡದ ಅಪಾರ ಶಬ್ದಭಂಡಾರ ಪದಸಂಪತ್ತು. ಜಗತ್ತಿನಾದ್ಯಂತ ಪ್ರಸರಿಸಲು ಸಾದ್ಯವಾಗುತ್ತದೆ.

**೫.೬. ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆ ಕುರಿತಂತೆ ಅನಿವಾರ್ಯವಾಗಿ ಬೇಕಾದ ತಂತ್ರಾಂಶಗಳು**

ಪ್ರಸ್ತುತ ಸಂದರ್ಭದಲ್ಲಿ ಕನ್ನಡ ಎಲ್ಲಾ ಕ್ಷೇತ್ರಗಳಲ್ಲೂ ಬಳಕೆಯಾಗುತ್ತಿದೆ. ದಿನಪತ್ರಿಕೆ, ರೇಡಿಯೋ, ಟಿ.ವಿ. ವಾಹಿನಿ, ಸಿನಿಮಾ ಹಾಗೂ ಕಂಪ್ಯೂಟರ್‌ನಲ್ಲಿಯೂ ಸಹ ಹಂತ ಹಂತವಾಗಿ ಕನ್ನಡ ಭಾಷೆಯ ತಂತ್ರಜ್ಞಾನಕ್ಕೆ ಅಳವಡಿಕೆಯಾಗುತ್ತಾ, ಹೊಂದಿಕೊಳ್ಳುತ್ತಾ ಸಾಗುತ್ತಿದೆ. ಆಧುನೀಕರಣದ ಜಗತ್ತಿನಲ್ಲಿ ಇಂಟರ್‌ನೆಟ್‌ನಂತಹ ತಾಂತ್ರಿಕ ಆವಿಷ್ಕಾರದಲ್ಲಿಯೂ ಕನ್ನಡ ಭಾಷೆ ಇತರ ಭಾಷೆಗಳಂತೆ ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಯತ್ನಿಸುತ್ತಿದೆ. ಕನ್ನಡ ಬಳಕೆ ಕುರಿತಂತೆ ಅಥವಾ ಕನ್ನಡ ಪರ ಕಾಳಜಿ ವಹಿಸಲು ಅನೇಕ ಸಂಘ–ಸಂಸ್ಥೆಗಳು ಇವೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಚಳುವಳಿಗಾರರು ಇದ್ದಾರೆ. ಈ ಎಲ್ಲಾ ಕನ್ನಡ ಪರ ಕಾಳಜಿಯಿಂದಾಗಿ ಇಂದು ಕನ್ನಡಕ್ಕೆ ಎಲ್ಲಾ ರಂಗಗಳಲ್ಲೂ ಪ್ರಾಶಸ್ತ್ಯ ಸಿಗುತ್ತಿರುವುದನ್ನು ಕಾಣಬಹುದಾಗಿದೆ.

ಆದರೆ ಕನ್ನಡ ಮಾಹಿತಿ ತಂತ್ರಜ್ಞಾನದ ಪ್ರಗತಿ ಅಷ್ಟಾಗಿ ಇಲ್ಲ. ಪರಿಸ್ಥಿತಿಗೆ ಅನುಗುಣವಾಗಿ ಬದಲಾಗುತ್ತಿರುವ ಇಂದಿನ ವ್ಯವಸ್ಥೆಯಲ್ಲಿ ಆಧುನೀಕರಣದ ಪಾತ್ರ ಹಿರಿದು. ಎಲ್ಲಾ ಕಡೆಯೂ ಸ್ವಯಂ ಚಾಲಿತ ವ್ಯವಸ್ಥೆ ಕಂಪ್ಯೂಟರ್ ಬಳಕೆ. ಹೀಗೆ ಆಧುನಿಕ ಪ್ರಕ್ರಿಯೆಗಳಿಗೆ ಒಳಗಾಗುತ್ತ ಜನರ ನಿರೀಕ್ಷೆಯೆ ಬದಲಾಗುತ್ತಿದೆ. ಎಲ್ಲೆಡೆಯೂ ದಿಢೀರ್ ಬೆಳವಣಿಗೆ ಕಾಣುವ ತವಕವಿದೆ. ಇಂತಹ ಸಂದರ್ಭದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ರಚನೆಯಾಗಿರುವ ಸಾವಿರಾರು ಹಸ್ತಪ್ರತಿಗಳು ನಮಗೆ ಲಭ್ಯವಿದೆ. ಆದರೆ ಅವುಗಳ ಪಠ್ಯವು ನಮಗೆ ಅರ್ಥವಾಗುತ್ತಿಲ್ಲ. ಕಾರಣ ಆಯಾ ಕಾಲದಲ್ಲಿ ಬಳಸಿದ ಭಾಷೆಯ ಸ್ವರೂಪ ವಿಭಿನ್ನವಾಗಿರುವಂತಹದ್ದು. ಆದ್ದರಿಂದ ಹಸ್ತಪ್ರತಿಗಳನ್ನು, ಗಣಕೀಕರಣಕ್ಕೆ ಅಳವಡಿಸಿ ಪ್ರಾಚೀನ ಹಸ್ತಪ್ರತಿಯ ಪಠ್ಯ ಮತ್ತು ಪಠ್ಯದ

ಅರ್ಥವನ್ನು ತಿಳಿಯಬೇಕಾಗಿದೆ. ಇಂತಹ ಕಾರ್ಯನುಕೂಲತೆಗೆ ಕನ್ನಡದ ಸಂದರ್ಭಕ್ಕೆ 'ಕಾರ್ಪಸ್' ಮತ್ತು 'ಓ.ಸಿ.ಆರ್.' ತಂತ್ರಾಂಶ ಬೇಕಾಗಿದೆ.

**೫.೬.೧. ಕಾರ್ಪಸ್ ತಂತ್ರಾಂಶ**

"ಕಾರ್ಪಸ್ ಎಂದರೆ ಸೂಕ್ಷ್ಮವಾಗಿ ಎಚ್ಚರಿಕೆಯಿಂದ ಆಯ್ದ ಪ್ರಾತಿನಿಧಿಕ ಪಠ್ಯಗಳ ಎಲೆಕ್ಟ್ರಾನಿಕ್ ರೂಪದ ಸಂಗ್ರಹ."[೩೭]

ಗಣಕ ಪರದೆಯ ಮೇಲೆ ಊನಗೊಂಡ ಹಸ್ತಪ್ರತಿಯೊಂದನ್ನು ಪುನಾರಚಿಸಲು ಮತ್ತು ಪರಿಷ್ಕರಿಸಲು ಬಹುಮುಖ್ಯವಾಗಿ ಬೇಕಾಗಿರುವುದು ಕಾರ್ಪಸ್. ಹಸ್ತಪ್ರತಿಗಳಂತಹ ಭಾಷಾ ಸಾಮಗ್ರಿಗಳ ಸಂಸ್ಕರಣೆಯ ಎಲ್ಲಾ ಕಾರ್ಯಗಳಿಗೆ ಆಧಾರವಾಗಿರುವುದೇ ಕಾರ್ಪಸ್. ಹಲವಾರು ವರ್ಷಗಳ ಹಿಂದೆ ರಚಿತವಾದ ಹಸ್ತಪ್ರತಿಗಳು ಕಾಲಗರ್ಭದಲ್ಲಿ ಪೀಳಿಗೆಯಿಂದ ಪೀಳಿಗೆಗೆ ಸಾಗುವಾಗ ನೀರು ಎಣ್ಣೆ, ಬೆಂಕಿ, ದೂಳು ಕೀಟಗಳಿಂದ ಪಾರಾಗಿ ರಕ್ಷಣೆ ಹೊಂದಬೇಕಾಗಿರುತ್ತದೆ. ಆದರೆ ಕೆಲವೊಂದು ಹಸ್ತಪ್ರತಿಗಳು ಮೇಲಿನ ನಾಶಕಾರಿ ಅಂಶಗಳಿಗೆ ತುತ್ತಾಗುತ್ತವೆ. ಕೆಲವೊಂದು ಹಸ್ತಪ್ರತಿಗಳು ಸಂಪೂರ್ಣವಾಗಿ ನಾಶವಾದರೆ ಇನ್ನೂ ಕೆಲವೊಂದು ಹಸ್ತಪ್ರತಿಗಳು ಅರ್ಧನಾಶವಾಗಿರುತ್ತದೆ. ಇನ್ನೂ ಕೆಲವೊಂದರಲ್ಲಿ ಅಕ್ಷರ ಅಸ್ಪಷ್ಟವಾಗಿ ಕಾಣುತ್ತವೆ. ಆದ್ದರಿಂದ ಇಂತಹ ಹಸ್ತಪ್ರತಿಗಳನ್ನು ಗಣಕೀಕರಣ ಮಾಡುವುದರಿಂದ ಹಸ್ತಪ್ರತಿಗಳನ್ನು ಸಂರಕ್ಷಿಸಬಹುದಾಗಿದೆ. ಈ ರೀತಿಯ ಹಸ್ತಪ್ರತಿ ಸಂರಕ್ಷಣೆಯ ಕಾರ್ಯವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ೧೯೯೯ರಿಂದ ಮೊಟ್ಟಮೊದಲ ಬಾರಿಗೆ ಕಂಪ್ಯೂಟರ್‌ನ್ನು ಬಳಸಿ ಹಸ್ತಪ್ರತಿಗಳನ್ನು ಸಂರಕ್ಷಿಸುವ, ಸಂಗ್ರಹಿಸಿಡುವ, ಅಧ್ಯಯನಿಸುವ ಕೆಲಸವನ್ನು ಮಾಡುತ್ತಿದೆ. ಭೂತಗನ್ನಡಿ ಹಿಡಿದು ಕೆಲವರು ಮಾತ್ರ ಓದಲು ಸಾಧ್ಯವಾಗುತ್ತಿದ್ದ ಹಸ್ತಪ್ರತಿಗಳನ್ನು ಗಣಕೀಕರಣಕ್ಕೆ ಅಳವಡಿಸುವ ಮೂಲಕ ಅದನ್ನು ಸಾರ್ವತ್ರಿಕ ಓದಿಗೆ ಅಳವಡಿಸಲಾಗುತ್ತದೆ. ಹಾಗೆಯೇ ತ್ರುಟಿತಗೊಂಡ ಹಸ್ತಪ್ರತಿಯನ್ನು ರಿಪೇರಿ ಮಾಡುವ ಲುಪ್ತಗೊಂಡ ಮತ್ತು ಅಕ್ಷರಗಳಿಲ್ಲದ ಭಾಗಗಳನ್ನು ಪುನಾರಚಿಸುವ ಸಾಧನಗಳನ್ನು ಕಂಪ್ಯೂಟರಿನಿಂದ ಪ್ರಾಪ್ತವಾಗಿದೆ. ಹೀಗೆ ಇಲ್ಲವಾದ ಅಕ್ಷರಗಳನ್ನು ಗಣಕೀಕೃತ ಪಠ್ಯದಲ್ಲಿಯೇ ಹುಡುಕಿ ತೆಗೆಯುವುದು ಒಂದು ರೀತಿಯಾದರೆ, 'ಸ್ಟೈಲೆಸ್' ಎನ್ನುವ ಪೆನ್ನಿನಂತಹ ಉಪಕರಣದಿಂದ ಬರೆದು ಸೇರಿಸುವುದು ಮತ್ತೊಂದು ರೀತಿಯ ಸಾಧ್ಯತೆಯಾಗಿದೆ. ಗಣಕ ಪರದೆಯ ಮೇಲೆ ಊನಗೊಂಡ ಹಸ್ತಪ್ರತಿಯನ್ನು ಹೀಗೆ ಹಲವು ಉಪಾಯಗಳಿಂದ ಪುನಾರಚಿಸಿಕೊಳ್ಳಬಹುದಾಗಿದೆ. ಗಣಕ ಪರದೆಯ ಮೇಲೆ ಹೀಗೆ ಊನಗೊಂಡ ಹಸ್ತಪ್ರತಿಯೊಂದನ್ನು ಪುನಾರಚಿಸಲು ಮತ್ತು ಪರಿಷ್ಕರಿಸಲು ಬಹುಮುಖ್ಯವಾಗಿದೆ. ಹಸ್ತಪ್ರತಿಗಳು ಪ್ರಧಾನವಾದ ಕಾರ್ಪಸ್ಸನ್ನು ಮೂರು ರೀತಿಯಲ್ಲಿ ಸೃಷ್ಟಿಸಬಹುದಾಗಿದೆ. ಅಂದರೆ ಹಸ್ತಪ್ರತಿಯೊಂದನ್ನು ಗಣಕೀಕರಣಕ್ಕೆ ಅಳವಡಿಸಲು ಮೂರು ರೀತಿಯ ವಿಧಾನಗಳನ್ನು ಬಳಸಬಹುದು.

೧. ಡಿ.ಟಿ.ಪಿ. ಸಾಫ್ಟ್‌ವೇರ್ ಅಥವಾ ಪದಸಂಸ್ಕರಣ ಅಥವಾ ಸಂಕಲನ ಬಳಸಿಕೊಂಡು ಕೀಬೋರ್ಡ್ ಸಹಾಯದಿಂದ ಕಂಪ್ಯೂಟರ್‌ಗೆ ಅಳವಡಿಸುವುದು. ಇದನ್ನು ಕೀ ಇನ್ ಮಾಡುವುದು ಎಂದು ಹೇಳಬಹುದು.

೨. ಸ್ಕ್ಯಾನರ್ ಯಂತ್ರದ ಮೂಲಕ ಸ್ಕ್ಯಾನ್ ಮಾಡುವುದು ಅಥವಾ ಡಿಜಿಟಲ್ ಕ್ಯಾಮರಾ ಮೂಲಕ ಸೆರೆ ಹಿಡಿಯುವುದು.

೩. ಮೈಕ್ರೋಫೋನ್ ಮುಖಾಂತರ ಓದಿ ರೆಕಾರ್ಡ್ ಮಾಡುವುದು.

ಮೊದಲನೆಯ ವಿಧಾನವು ಹಸ್ತಪ್ರತಿಯಲ್ಲಿರುವ ಪಠ್ಯವನ್ನು ಕಂಪ್ಯೂಟರ್ ಕೀಬೋರ್ಡ್ ಮೂಲಕ ಬೆರಳಚ್ಚಿಸುವುದು. ಹಳಗನ್ನಡದಲ್ಲಿರುವ ಇಂಥ ಪಠ್ಯವನ್ನು ಬೆರಳಚ್ಚಿಸಲು ತಜ್ಞತೆ ಬೇಕು. ಇಲ್ಲವೇ ತಜ್ಞರಿದ್ದವರು ಬರೆದು ಕೊಡಬೇಕು. ಇದು ಶ್ರಮ ಮತ್ತು ಹೆಚ್ಚು ಸಮಯವನ್ನು ಬೇಡುವಂತದ್ದು. ಹಸ್ತಪ್ರತಿಯ ಮೂಲರೂಪ ನಮಗಿಲ್ಲಿ ದೊರಕದು.

ಎರಡನೆಯ ವಿಧಾನವೂ ಹಸ್ತಪ್ರತಿಯ ಮೂಲರೂಪವನ್ನು ಯಥಾವತ್ತಾಗಿ ಹಿಡಿದಿಟ್ಟುಕೊಳ್ಳಲು ಸಹಾಯಕವಾಗುವಂತಹದು. ಇದಕ್ಕೆ ಸ್ಕ್ಯಾನರ್ ಜೊತೆಗೆ ಡಿಜಿಟಲ್ ಕ್ಯಾಮರಾವನ್ನು ಬಳಸಿಕೊಳ್ಳಬಹುದಾಗಿದೆ. ಹಸ್ತಪ್ರತಿಗಳ ಸ್ಥಿರ ಚಿತ್ರಣ ಪಡೆಯುವಲ್ಲಿ ಮತ್ತು ಅದನ್ನು ವಿವಿಧ ರೀತಿಯಲ್ಲಿ ಪರಿಷ್ಕರಿಸುವ ಮತ್ತು ಪುನಾರಚಿಸುವ ನಿಟ್ಟಿನಲ್ಲಿ ಈ ವಿಧಾನ ತುಂಬಾ ಉಪಯುಕ್ತವಾಗಿದೆ. ಹೀಗೆ ಸ್ಥಿರ ರೂಪದಲ್ಲಿ ಮತ್ತು ಸ್ವಸ್ಥ ಸ್ಥಿತಿಯಲ್ಲಿ ಇಮೇಜ್ ರೂಪದಲ್ಲಿ ಸಿಗುವ ಹಸ್ತಪ್ರತಿಯಲ್ಲಿ ICR [Intelligent Character Recognition] ಮತ್ತು OCR[Optical Character Recogniser]ಗಳ ಸಹಾಯದಿಂದ ಟೈಪಿನ ಅಗತ್ಯವಿದೆ. ನೇರವಾಗಿ ನಮಗೆ ಬೇಕಾದ ಭಾಷೆಗೆ ಪರಿವರ್ತಿಸಿಕೊಳ್ಳಬಹುದಾಗಿದೆ.[೩೮]

ಹಸ್ತಪ್ರತಿಯೊಂದರ ಸಂಕಲನ ಮತ್ತು ಪರಿಷ್ಕರಣಕ್ಕೆ ಟೈಪ್‌ಟೋಕನ್ [Type Token] ಹಾಗೂ ಮಾರ್ಫಾಲಾಜಿಕಲ್ ವಿಶ್ಲೇಷಕಗಳು ತುಂಬಾ ಸಹಕಾರಿಯಾಗಿವೆ. 'ಕಾರ್ಪಸ್'ನಿಂದ ನಾವು ಎಲ್ಲ ನಿರ್ದಿಷ್ಟ ಪದ[ಗಳ] ರೂಪಗಳ ಮತ್ತು ಅವುಗಳ ಪುನರಾವರ್ತನೆಯ ಸಂಖ್ಯೆಯನ್ನು ಪಡೆಯಬಹುದಾಗಿದೆ. ಟೈಪ್ ಟೋಕನ್ ವಿಶ್ಲೇಷಕಕವು ನೀಡುವ ಸಂಪೂರ್ಣ ಪದರೂಪಗಳ ಮತ್ತು ನಿಷ್ಪತ್ತಿ ರೂಪಗಳ ಸಹಾಯದಿಂದ ಶಬ್ದ ವಿಶ್ಲೇಷಕ ಬಳಸಿ ಒಂದು೧೨ ಪದದ ಮೂಲರೂಪವನ್ನು ಅದರ ಆಂತರಿಕ ರಚನೆಯ ವಿನ್ಯಾಸಗಳನ್ನು ಮತ್ತು ಸಹೋದರ ಭಾಷೆಗಳಲ್ಲಿ ಅದು ಪಡೆದಿರುವ ಅರ್ಥಗಳನ್ನು ಹುಡುಕಿ ಪಡೆಯಬಹುದಾಗಿದೆ. Key-word-in context ಉಪಕರಣದ ಮೂಲಕ ಕಾರ್ಪಸ್‌ನಲ್ಲಿ ನಿರ್ದಿಷ್ಟ ಪದವು ಬಳಕೆಯಾಗಿರುವ ಎಲ್ಲಾ ವಾಕ್ಯಗಳ ಪಟ್ಟಿಯನ್ನು ತಯಾರಿಸಬಹುದು. **ಒಂದು ಪದವು ವಿಭಿನ್ನ ಸಂದರ್ಭದಲ್ಲಿ ಯಾವ ಯಾವ ಅರ್ಥದಲ್ಲಿ ಬಳಕೆಯಾಗಿದೆ. ಎಷ್ಟೆಷ್ಟು ಸಲ ಬಳಕೆಯಾಗಿದೆ ಎನ್ನುವುದನ್ನು ಕಂಡುಕೊಳ್ಳಬಹುದಾಗಿದೆ.** ಇದು ಕೃತಿಕಾರನೊಬ್ಬನ ಜೀವನ ದೃಷ್ಟಿಯನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ಉದಾಹರಣೆಗೆ ಮುದ್ದಣ ತನ್ನ ಒಟ್ಟು ಕಾವ್ಯಗಳಲ್ಲಿ ಉಪಯೋಗಿಸಿದ್ದನ್ನು ಕಂಪ್ಯೂಟರ್ ಶಬ್ದಗಳನ್ನು ಪಟ್ಟಿ ಮಾಡಿದರೆ ಸುಮಾರು ೬೦೦ ಬಾರಿ ಉಪಯೋಗಿಸಿದನ್ನು ಕಂಪ್ಯೂಟರ್ ಹೇಳುತ್ತದೆ. ಇದರಲ್ಲಿ ಮತ್ತೆ ಕಮಲ, ಚಂದ್ರ ಮುಂತಾದ ಹಳೆಯ ಕ್ರಮದ ಹೇಳಿಕೆಗಳಿರುವುದನ್ನು ಬೇರೆ ಮಾಡಬಹುದು. ಹೆಣ್ಣಿನ ಕೇಶ, ಕಣ್ಣು, ಮುಖ ಮೊದಲಾದ ಅಂಗಾಂಗಗಳನ್ನು ಹೇಳುವ ಶಬ್ದಗಳನ್ನು ಬೇರೆ ಪಟ್ಟಿ ಮಾಡಬಹುದು. ಅದರಂತೆ ಸ್ತ್ರೀಯ ಸ್ವಭಾವ ಹೇಳುವಂತಹ ಗಡುಸುಗಾತಿ, ಚಂಚಲೆ ಇತ್ಯಾದಿ ಪದಗಳನ್ನು ಪ್ರತ್ಯೇಕಿಸಿ ನೋಡಬಹುದು. ಇದರಿಂದ ಮುದ್ದಣ ಸ್ತ್ರೀಯನ್ನು ಎಷ್ಟೊಂದ ಆಳವಾಗಿ ಪರಿಭಾವಿಸಬಲ್ಲ ಎಂಬುದು ಗೋಚರವಾಗುತ್ತದೆ.

ಹಾಗೆ ಯೀಟ್ಸ್ ಕವಿ ತನ್ನ ಕಾವ್ಯದಲ್ಲಿ ತಂದಿರುವ ಪ್ರಾಣಿ ರೂಪಗಳು ಯಾವುವು ಎಷ್ಟು ಸಲ ಯಾವ ಸಂದರ್ಭದಲ್ಲಿ ಬಳಸುತ್ತಾರೆ ಎನ್ನವುದರ ಪಟ್ಟಿ ಮಾಡಬಹುದು. ಕುದುರೆ ೭೯ ಸಲ, ಮೊಲ ೨೩ ಸಲ, ಸಿಂಹ ೨೦ ಸಲ, ತೋಳ ೯ ಸಲ, ಬೆರ್ಚ ೯ ಸಲ, ಕರಡಿ ೩ ಸಲ, ಚಿರತೆ ೩ ಸಲ, ಕತ್ತೆ ೨ ಸಲ ಬಳಕೆಯಾಗಿದ್ದು ಕಂಡುಬರುತ್ತದೆ. ಮೊತ್ತದ ಮೂಲಕವಾದ ಈ ಬಗೆಯ ಅಭ್ಯಾಸವು ಕವಿಯ ಒಟ್ಟಿನ ಶಬ್ದ ಸಂಪತ್ತನ್ನು ಒಂದೆಡೆ ದೊರಕಿಸುವುದರಿಂದ ಅವರ ಭಾಷಾ ಸಂಪತ್ತನ್ನು ಭಾಷಾ ಪ್ರಭುತ್ವವನ್ನು ಆತನ ಒಲವಿನ ವಿಶಿಷ್ಟ ಶಬ್ದ ಪ್ರಯೋಗಗಳನ್ನು ಕಂಡುಕೊಳ್ಳಬಹುದಾಗಿದೆ. ಗ್ರಂಥ ಸಂಪಾದನೆಗೆ ಈ ವಿಧಾನ ತುಂಬಾ ಉಪಯುಕ್ತವಾದುದಾಗಿದೆ.[೫೯] ಗ್ರಂಥ ಸಂಪಾದಕನಾದವನು ಒಂದು ಪದಪ್ರಯೋಗವನ್ನು ಅದರ ವೈವಿಧ್ಯಮಯ ಅರ್ಥವಿನ್ಯಾಸಗಳನ್ನು ಕಾಣಲು ಹಾಳೆ-ಲೇಖನಿ ಹಿಡಿದು ಪ್ರತಿಕೃತಿಯನ್ನು ಓದಿ ಗುರುತು ಹಾಕಿಕೊಂಡು ವರ್ಗೀಕರಿಸಿ ಅಭ್ಯಸಿಸಬೇಕಾಗುತ್ತದೆ. ಇದು ಶ್ರಮ ಮತ್ತು ಸಮಯಗಳೆರಡನ್ನು ಹೆಚ್ಚು ಬೇಡುತ್ತದೆ. ಕಂಪ್ಯೂಟರ್‌ನಿಂದಾಗಿ ಒಂದು ಪದದ ವೈವಿಧ್ಯಮಯ ಪ್ರಯೋಗಗಳು ವಿವಿಧಾರ್ಥ ಸಾಧ್ಯತೆಗಳು ಅದರ ಮೂಲರೂಪದ ಸ್ವರೂಪಗಳು ಒತ್ತಟ್ಟಿಗೇ ಸಿಕ್ಕು ಬಿಡುತ್ತವೆ. ಕನ್ನಡದಂತಹ ಸಂಕೀರ್ಣವಾದ ಆಂತರಿಕ ಪದರಚನಾ ವಿನ್ಯಾಸ ಹೊಂದಿರುವ ಭಾಷೆಗಳ ಸಂಸ್ಕರಣೆಯಲ್ಲಿ ಪದ ಸಂಸ್ಕರಣದ ಮಹತ್ವ ಇನ್ನು ಹೆಚ್ಚಿನದ್ದಾಗಿದೆ.

ಒಂದು ಕಾವ್ಯದ ಸಂಪಾದನೆಯಲ್ಲಿ ಅಥವಾ ಪಠ್ಯವೊಂದರ ಸಂಕಲನದಲ್ಲಿ ಅದರಲ್ಲಿನ ಅಕ್ಷರ, ಮಾತ್ರೆ, ಪದ, ವಾಕ್ಯ, ಸಾಲುಗಳ ಅಂಕಿ ಸಂಖ್ಯಾ ವಿಶ್ಲೇಷಣೆ ಕೂಡ ಬಹಳ ಮಹತ್ವದ ಪಾತ್ರ ವಹಿಸುತ್ತದೆ. ಇದಕ್ಕೆ Statistical pos Taggerನಂತಹ ಸಾಫ್ಟ್‌ವೇರ್‌ಗಳು ಸಹಕಾರಿಯಾಗಿವೆ. ಕುಮಾರವ್ಯಾಸನ ಪಠ್ಯವೊಂದನ್ನು ಸಂಕಲಿಸಬೇಕಾದರೆ ಭಾಮಿನಿ ಷಟ್ಪದಿಯ ಎಲ್ಲ ಲಕ್ಷಣಗಳನ್ನು ಸಂಕಲನಕಾರ ತಿಳಿದಿರಬೇಕಾಗುತ್ತದೆ. ವಚನಗಳಲ್ಲಿ ಬಳಕೆಯಾಗುವ ಪದ ಬಳಕೆಯ ಬಗ್ಗೆ ಅರಿತಿರಬೇಕಾಗುತ್ತದೆ. ಇಲ್ಲದೆ ಹೋದರೆ ಸಂಕಲನಕಾರ ಅಂತಹ ಪಠ್ಯವೊಂದನ್ನು ಮರು ರಚನೆ ಮಾಡಲು ಸಾಧ್ಯವಿಲ್ಲ. ಉದಾಹರಣೆಗೆ, ವಚನ ಸಾಹಿತ್ಯ ಸಂಪಾದನೆ ಮಾಡ ಹೊರಟಾಗ ವಚನ ಮಿಶ್ರಣ ಮತ್ತು ಪಾಠ ಮಿಶ್ರಣದ ಹಾವಳಿ ಕಣ್ಣಿಗೆ ಹೊಡೆಯುತ್ತದೆ. ಶರಣರಲ್ಲದವರ ವಚನಗಳು ಇಲ್ಲಿ ಕಾಣಿಸುತ್ತವೆ. ಖೋಟಾ ಕಟ್ಟುಗಳಾದ ಮುಕ್ತಕಂಠಾಭರಣದಂತಹ ವಚನಗಳು

ಸಿಗುತ್ತವೆ. ಇವುಗಳನ್ನು ಬೇರ್ಪಡಿಸಿ ನೋಡುವುದು ಕಷ್ಟಸಾಧ್ಯ. ಕಂಪ್ಯೂಟರ್ ಭಾಷಾ ಸಂಸ್ಕರಣ ಘಟಕಗಳು, ಶಬ್ದ ವಿಶ್ಲೇಷಕಗಳು ಇಂದು ಇಂತಹ ಕಷ್ಟಸಾಧ್ಯದ ಕೆಲಸವನ್ನು ಸಾಧ್ಯವಾಗುವಂತೆ ಮಾಡುವ ಸಾಮರ್ಥ್ಯ ಪಡೆದಿವೆ.

ಪಂಪನ ಒಂದು ಪದ್ಯದ ಸಾಲಿನಲ್ಲಿ ಬರುವ ಸುಪುಷ್ಪವೃಷ್ಟಿ ಎನ್ನುವ ಪದ ತುಂಬ ಚರ್ಚೆಗೆ ಒಳಗಾದದ್ದಿದೆ. ಡಿ.ಎಲ್.ನರಸಿಂಹಚಾರ್ಯರಿಂದ ಹಿಡಿದು ಟಿ.ವಿ. ವೆಂಕಟಚಲಾಶಾಸ್ತ್ರಿಗಳವರೆಗಿನ ಹಿರಿಯ ವಿದ್ವಾಂಸರು ಸುಪುಷ್ಪವೃಷ್ಟಿಯೋ ಅಥವಾ ಸುಪುಷ್ಪದೃಷ್ಟಿಯೋ ಎಂದು ಆಳವಾದ ವಿವೇಚನೆಗೆ ಒಳಪಡಿಸಿದ್ದಿದೆ. ಪಾಠ ನಿರ್ಣಯದ ಈ ವಿಧಾನ ತುಂಬಾ ಶ್ರಮದಾಯಕವಾದದ್ದು. ಪಾಠ ನಿರ್ಣಯಿಸುವುದೆಂದರ್ಥ. ಶಬ್ದದ ರೂಪ ನಿರ್ಣಯವಾದರೆ ಅದರ ಅರ್ಥಗುಣ ತಾನಾಗೇ ಸರಿಯಾಗುತ್ತದೆ. ಶಬ್ದದ ಆಕೃತಿ ನಿರ್ಣಯ ಮಾಡುವುದರಿಂದ ಆಶಯದ ನಿರ್ಣಯವಾಗುತ್ತದೆ.

ಪಠ್ಯವೊಂದರ ಗಣಕೀಕರಣದಿಂದಾಗಿ ಪದ ಮತ್ತು ವಾಕ್ಯಗಳಲ್ಲಿ ಸತತ ಬಳಕೆಯಾಗಲಿರುವ ವಿರಳ ಬಳಕೆಯಲ್ಲಿರುವ ವಿಶಿಷ್ಟವಾದ ಸಂದರ್ಭಕ್ಕೆ ಸೀಮಿತವಾದ ಭಾಷೆಯ ನಿಜಪ್ರತಿನಿಧಿಯಾದ ಮತ್ತು ಅಲ್ಲದ ವಿವರಗಳನ್ನು ಕಂಡುಕೊಳ್ಳಬಹುದಾಗಿದೆ. ನಮ್ಮ ಕಂಪ್ಯೂಟರ್‌ನಲ್ಲಿ ಒಳ್ಳೆಯ ಎಲೆಕ್ಟ್ರಾನಿಕ್ ನಿಘಂಟುಗಳ ಮಾರ್ಫಾಲಾಜಿಕಲ್ ವಿಶ್ಲೇಷಕಗಳು, ವಾಕ್ಯ ವಿಶ್ಲೇಷಕಗಳು [ಫೆಸಸ್] ಅರ್ಥ ವಿವೇಚಕಗಳು [ಸೆಮ್ಯಾಂಟಿಕ್ ಇಂಟರ್ ಪ್ರಿಟರ್] ಧ್ವನಿಲಿಪಿ ವಿಶ್ಲೇಷಕಗಳು (ಪೊನೆಟಿಕ್ ಸ್ಕ್ರಿಪ್ಟ್) ಮತ್ತು ಜನರೇಟರ್‌ಗಳು (ಪದ ಉತ್ಪಾದಕಗಳು) ಇದ್ದರೆ ಅವುಗಳ ಸಹಾಯದಿಂದ ಕಾಗುಣಿತ ಪರಿಶೀಲಕ (Spell checker)ಗಳನ್ನು ರೂಪಿಸಿಕೊಳ್ಳಬಹುದು. ಸಂಕಲನನುಸಂಧಾನವನ್ನು ಸರಳ ಮಾಡಿಕೊಳ್ಳಬಹುದು.

ಕಾಗುಣಿತ ಪರಿಶೀಲಕಗಳು ಗ್ರಂಥಸಂಪಾದನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇದರಲ್ಲಿ ಎರಡು ವಿಧ. ಒಂದು ಪತ್ತೆ ಹಚ್ಚುವ ಭಾಗ, ಎರಡನೆಯದು ತಿದ್ದುವ ಭಾಗ, ಕಂಪ್ಯೂಟರ್‌ಗೆ ಅಳವಡಿಸಿದ ಪಠ್ಯದಲ್ಲಿ ಎಲೆಕ್ಟ್ರಾನಿಕ್ ನಿಘಂಟುವಿನ ಸಹಾಯದಿಂದ ಸೂಕ್ತ ಸಂಜ್ಞೆಗಳೊಂದಿಗೆ ಇಂತಹ ತಪ್ಪುಗಳನ್ನು ಪತ್ತೆ ಮಾಡಬಹುದು. ತಿದ್ದುವ ಭಾಗವು ಪರಿಮಾಣಾತ್ಮಕ ಮತ್ತು ನಿರ್ದಿಷ್ಟ ವಾಕ್ಯಕ್ಕೆ ಕನಿಷ್ಠ ದೂರ (Minimum Edit Distance) ಮುಂತಾದವುಗಳನ್ನು ಬಳಸಲಾಗುತ್ತದೆ. Statistical pos Taggar. Hidden motur Model ಆಧಾರಿತ ಒಂದು ಸಾಫ್ಟ್‌ವೇರ್ ಕೂಡ ಪದ್ಯದಲ್ಲಿನ ಪದ ಬಳಕೆಯ ಸಂದರ್ಭಗಳು ಅದರ ವ್ಯಾಕರಣ ಅಂಶಗಳನ್ನು ನೀಡುತ್ತದೆ. ಹೀಗೆ ಪಠ್ಯಗಳನ್ನು ಮಾಡಲು Tag ಸಂಸ್ಕರಿಸಲು ಮಾರ್ಫಾಲಾಜಿ ಆಧರಿಸಿದ ಭಾಷಾ ವಿಜ್ಞಾನದ ತಂತ್ರಗಳು ತುಂಬ ಉಪಯುಕ್ತವಾಗಿವೆ. ಇದೂ ಅಲ್ಲದೆ Speech Corpus & Text Corpusಗಳು ಮಾತಿನಿಂದ ಪಠ್ಯಕ್ಕೆ–ಪಠ್ಯದಿಂದ ಮಾತಿಗೆ ಪರಿವರ್ತಿತವಾಗುವ ವ್ಯವಸ್ಥೆಗಳಲ್ಲಿ ಭಾಷೆ ಉಪಭಾಷೆಗಳ ಗುರುತಿಸುವಿಕೆಯಲ್ಲಿ ತುಂಬಾ ಸಹಾಯಕವಾಗಿವೆ. ವಿಶೇಷವಾಗಿ

ಕನ್ನಡ ಸಾಹಿತ್ಯದ ಅಧ್ಯಯನ ಮತ್ತು ಪರಿಷ್ಕರಣದಲ್ಲಿ ಈ ಸಾಫ್ಟ್‌ವೇರ್‌ಗಳು ಅತ್ಯುಪಯುಕ್ತವಾಗಿವೆ ಎಂದು ಹೇಳಬಹುದು.[೪೦]

ಈ ಎಲ್ಲ ಭಾಷಾ ಸಂಸ್ಕರಣೆಗೆ ಪ್ರಮುಖ ಆಧಾರವೇ ಕಾರ್ಪಸ್. ಉತ್ತಮ ಕಾರ್ಪಸ್‌ನ ಸೃಷ್ಟಿ ಕನ್ನಡ ಹಸ್ತಪ್ರತಿಗಳ ಸಂಕಲನ ಮತ್ತು ಅಧ್ಯಯನಕ್ಕೆ ಸಹಾಯಕಾರಿಯಾಗಿವೆ. ಕಂಪ್ಯೂಟರ್ ತಂತ್ರಜ್ಞಾನ ನನ್ನ ದೃಷ್ಟಿಯಲ್ಲಿ ಅದೊಂದು ಟೆಕ್ನಿಕಲ್ ಏಡ್ [ತಾಂತ್ರಿಕ ಉಪಕರಣ] ಮಾತ್ರವಲ್ಲ. ಅದನ್ನು ಮೀರಿದ ಗುಣ ಅದಕ್ಕಿದೆ. ಇಂದು ದೇಶ ವಿದೇಶಗಳ ಮಧ್ಯೆ ಅದೊಂದು ಸಾಂಸ್ಕೃತಿಕ ರಾಯಭಾರಿಯಂತೆ ಆರ್ಥಿಕ, ರಾಜಕೀಯ, ಸಾಮಾಜಿಕವಾದಂತಹ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಕಂಪ್ಯೂಟರ್‌ಗಿರುವ ಇಂತಹ ಅನನ್ವಯ ಸಾಮರ್ಥ್ಯ ಸಾಹಿತ್ಯ ಮತ್ತು ಭಾಷಿಕವಾದ ಸಂಸ್ಕರಣದ ಕೆಲಸವನ್ನು ನಿರ್ವಹಿಸಲು ಪ್ರೇರಣೆಯಾಗಿದೆ.

**೫.೬.೨. ಓ.ಸಿ.ಆರ್. ತಂತ್ರಾಂಶ**

ಓ.ಸಿ.ಆರ್. ಅಂದರೆ ಆಪ್ಟಿಕಲ್ ಕ್ಯಾರಕ್ಟರ್ ರೀಡರ್. ಕನ್ನಡದ ಸಂದರ್ಭದಲ್ಲಿ ಇದರ ಅಗತ್ಯ ಅತ್ಯವಶ್ಯಕವಿದೆ. ಇಂಗ್ಲಿಷಿನಲ್ಲಿ ಮಾತ್ರ ಸಾಧ್ಯವಿರುವ ಇದು ಟೈಪಿಂಗ್ ಮತ್ತು ಸ್ಕ್ಯಾನಿಂಗ್‌ನ ಲಕ್ಷಣಗಳಿಗಿಂತ ಭಿನ್ನವಾದುದು. ಅಪಾರ ಹಸ್ತಪ್ರತಿಗಳ ಸಂದರ್ಭದಲ್ಲಿ ಈ ಘಟಕ ಬಹುಮುಖ್ಯವಾದುದಾಗಿದೆ. ಪತ್ರಿಕೆಗಳಿಗಂತೂ ಇದು ವರದಾನವಾಗಿದೆ.

ಸ್ಕ್ಯಾನರ್ ಮೂಲಕ ಯಾವುದೇ ತರಹದ ಕೈ ಬರಹವುಳ್ಳ ಕನ್ನಡದ ಹಸ್ತಪ್ರತಿಯನ್ನು ಕಂಪ್ಯೂಟರ್‌ಗೆ ಅಳವಡಿಸಿದಾಗ ಅದು ದರ್ಶಕದ ಮೇಲೆ ಮೂಡುವ ಹೊತ್ತಿಗೆ ಶುದ್ಧ ಪ್ರತಿಯಾಗಿ ಪ್ರಕಟವಾಗುತ್ತದೆ. ಅಂದರೆ ನಾವು ಬಳಸುವ ಹಲವಾರು ಫಾಂಟುಗಳಲ್ಲಿ ಕೈ ಬರಹವನ್ನು ಟೈಪಿಂಗ್ ಸಹಾಯವಿಲ್ಲದೆಯೇ ನೇರವಾಗಿ ಮುದ್ರಿಸಿಕೊಳ್ಳಬಹುದಾಗಿದೆ. ಹೀಗಾಗಬೇಕಾದರೆ ಕನ್ನಡದಲ್ಲಿ ಬಳಕೆಯಾಗುವ ಅಕ್ಷರಗಳ, ಅದರ ಎಲ್ಲ ಸಾಧ್ಯತೆಗಳ ಗುಣಲಕ್ಷಣಗಳನ್ನು ಗಣಕಕ್ಕೆ ಉಣಿಸಬೇಕಾಗುತ್ತದೆ. ಇದಕ್ಕೆ ಭಾಷಾ ಶಾಸ್ತ್ರಜ್ಞರ, ಕಂಪ್ಯೂಟರ್ ಮತ್ತು ಸಾಫ್ಟ್‌ವೇರ್ ತಂತ್ರಜ್ಞರ ಜಂಟಿ ಪ್ರಯತ್ನ ಅನಿವಾರ್ಯವಾಗುತ್ತದೆ. ಈ ಪ್ರಯತ್ನ ಅನಿವಾರ್ಯವಾಗುತ್ತದೆ. ಈ ಪ್ರಯತ್ನ ಕನ್ನಡಕ್ಕೆ ಜರೂರಾಗಿ ಬರಬೇಕಾಗಿದೆ. ಇದರಿಂದ ಮುದ್ರಿತ ಸಂದರ್ಭದ ವೇಳೆ, ಹಣ, ಶ್ರಮ ಎರಡೂ ಉಳಿತಾಯವಾಗುತ್ತದೆ.[೪೧]

ಇದುವರೆಗೂ ಸ್ಕ್ಯಾನಿಂಗ್‌ನಲ್ಲಿ ಫೋಟೋಗ್ರಫಿಯಂತೆ ಮೂಲ ಪ್ರತಿಯ ಯಥಾವತ್ತಾದ ನಕಲನ್ನು ಮಾತ್ರ ನೋಡುವ ಸಾಧ್ಯತೆ ನಮಗಿತ್ತು. ಈ ಓ.ಸಿ.ಆರ್.ನ ಸಹಾಯದಿಂದ ಹಸ್ತಪ್ರತಿಗಳಲ್ಲಿನ ಬರಹವನ್ನು ನಮಗೆ ಬೇಕಾದಲ್ಲಿ ಬೇಕಾದ ಹಾಗೆ ಬದಲಾಯಿಸಬಹುದಾಗಿದೆ. ಅಂದರೆ ಗಣಕೀಕೃತ ಪಠ್ಯದಲ್ಲಿನ ಅಕ್ಷರಗಳನ್ನು ಬೋಲ್ಡ್ ಮಾಡುವ, ಪ್ಯಾರಾ ಮಾಡಿಕೊಳ್ಳುವ, ಬೇಕಾದ ಅಳತೆಗೆ ಹಿಗ್ಗಿಸುವ ಮತ್ತು ಕುಗ್ಗಿಸಿಕೊಳ್ಳುವ ಪಠ್ಯವೊಂದಕ್ಕೆ ಬೇಕಾದ ತಲೆಬರಹ ಕೊಡುವ ಸೌಲಭ್ಯಕಾಂಕ್ಷೆಗಳು ಪ್ರಾಪ್ತವಾಗಿವೆ.[೪೨]

ಪತ್ರಿಕೆಯ ಸಂದರ್ಭಕ್ಕೆ ಬಂದಾಗ ವರದಿಗಾರರಿಂದ ದಿನನಿತ್ಯ ಬರುವ ವರದಿಗಳನ್ನು ಬೆರಳಚ್ಚು ಮಾಡದೆ ನೇರ ಮುದ್ರಿತ ಹಂತಕ್ಕೆ ಬದಲಾಯಿಸಿಕೊಳ್ಳುವುದರಿಂದ ಪತ್ರಿಕೆಯನ್ನು ನಿಗದಿತ ಸಮಯಕ್ಕೆ ಹೊರತರಬಹುದಾಗಿದೆ. ಅಲ್ಲದೆ ಯಾವುದೇ ಒಬ್ಬ ಕವಿ ಅಥವಾ ಕಾದಂಬರಿಕಾರ ಬರೆದು ಕೊಡುವ ಕವನ, ಧಾರಾವಾಹಿಗಳ ಹಸ್ತಪ್ರತಿ ರೂಪಗಳನ್ನು ಈ ಓ.ಸಿ.ಆರ್. ಮೂಲಕ ತಪ್ಪುಗಳಿಲ್ಲದೆ ಲಗುಬಗೆಯಿಂದ ಮುದ್ರಿಸಬಹುದಾಗಿದೆ. ಇದರಿಂದ ಕರಡು ತಿದ್ದುವ ಕಿರಿಕಿರಿಯೇ ಮಾಯವಾಗುತ್ತದೆ. ಹಾಗೇನಾದರೂ ದೋಷಗಳಿದ್ದರೆ ಎಡಿಟಿಂಗ್ ಮೂಲಕ ಅದನ್ನು ಸರಿಪಡಿಸಿಕೊಳ್ಳಬಹುದಾಗಿದೆ.

ಓ.ಸಿ.ಆರ್. ಕನ್ನಡದಲ್ಲಿ ಬಂದರೆ ಹಸ್ತಪ್ರತಿಶಾಸ್ತ್ರ ಮತ್ತು ಪತ್ರಿಕಾರಂಗಕ್ಕೆ ಉಪಯುಕ್ತ ಕೊಡುಗೆಯಾಗುವುದರಲ್ಲಿ ಸಂದೇಹವಿಲ್ಲ. ಕನ್ನಡದ ಸಾಫ್ಟ್‌ವೇರ್ ತಂತ್ರಜ್ಞರು ಇದನ್ನು ಸಾಧ್ಯವಾಗಿಸಿದರೆ ಕನ್ನಡಕ್ಕೆ ಮತ್ತೊಂದು ತಾಂತ್ರಿಕ ಸಾಧ್ಯತೆ ದಕ್ಕಿದಂತಾಗುತ್ತದೆ.

ಓ.ಸಿ.ಆರ್. ಕನ್ನಡಕ್ಕೆ ಬಂದರೆ ಹಸ್ತಪ್ರತಿಶಾಸ್ತ್ರ ಮತ್ತು ಪತ್ರಿಕಾರಂಗಕ್ಕೆ ಉಪಯುಕ್ತ. ಇಂದು ಕಂಪ್ಯೂಟರೀಕರಣವು ಆಡಳಿತದ ಅವಿಭಾಜ್ಯ ಅಂಗವಾಗುತ್ತಿರುವ ಹೊತ್ತಿರುವ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕಂಪ್ಯೂಟರೀಕರಣದಲ್ಲಿ 'ಸಮಗ್ರ ಕನ್ನಡ ಕ್ರಿಯಾ ಯೋಜನೆ'ಯನ್ನು ಹಾಕಿಕೊಳ್ಳುವುದರ ಮೂಲಕ ಅನೇಕ ಹೊಸತನಗಳಿಗೆ ನಾಂದಿ ಹಾಡಿದೆ. ಈ ಕ್ರಿಯಾ ಯೋಜನೆಯನ್ನು ಆಡಳಿತ ಹಾಗೂ ಆಡಳಿತೇತರವಾದ ವಾಣಿಜ್ಯ-ವ್ಯವಹಾರ, ಶಾಲಾ-ಕಾಲೇಜುಗಳ ಆಡಳಿತ ನಿರ್ವಹಣೆ, ಅನುವಾದ, ಮೈಕ್ರೋಸಾಫ್ಟ್, ಆಫೀಸ್, ಗ್ರಂಥಾಲಯದಂಥ ತಂತ್ರಾಂಶಗಳ ತಯಾರಿಕೆಯನ್ನು ಒಳಗೊಂಡಿದೆ. ವಿಶ್ವಕೋಶಗಳಂಥ ಬೃಹತ್ ಮಾಹಿತಿ ಗ್ರಂಥಗಳನ್ನು ಸಂಗ್ರಹಿಸುವಂಥ ಡೇಟಾ ಬ್ಯಾಂಕ್ ಅಪ್ಲೈಡ್(ಅನ್ವಯಿಕ) ಸಾಫ್ಟ್‌ವೇರ್‌ಗಳಂಥ ತಂತ್ರಾಂಶಗಳನ್ನು ತಯಾರಿಸಿ ಕನ್ನಡವನ್ನು ವಿವಿಧ ವಲಯಗಳಲ್ಲಿ ಸಶಕ್ತಗೊಳಿಸಲು ಪ್ರಯತ್ನಿಸುತ್ತಿದೆ. ಅಷ್ಟೇ ಅಲ್ಲದೆ ಆಕಾರಾದಿ ವಿಂಗಡಣೆ(ಸಾರ್ಟಿಂಗ್), ಸೂಚೀಕರಣ(ಇಂಡಕ್ಸಿಂಗ್) 'ಪದ' ಮತ್ತು 'ವ್ಯಾಕರಣ ಪರೀಕ್ಷೆ' (ಸ್ಪೆಲ್ ಚೆಕ್ ಅಂಡ್ ಗ್ರಾಮರ್ ಚೆಕ್). ಕನ್ನಡ ಲಿಪಿ ಮುಂತಾದ ತಂತ್ರಾಂಶಗಳ ಹೊಣೆಯನ್ನು ಪ್ರಾಧಿಕಾರ ಹೊತ್ತುಕೊಂಡಿದೆ. ಈ ಕ್ರಿಯಾ ಯೋಜನೆ ಸಾರ್ಥಕವಾದರೆ ಮತ್ತಷ್ಟು ತಂತ್ರಾಂಶಗಳು. ಕಾರ್ಯದ ಸಾಧ್ಯತೆಗಳು, ಕೆಲಸದ ವಿಸ್ತಾರಗಳು ಲಭ್ಯವಾಗುತ್ತವೆ. ತಂತ್ರಜ್ಞಾನದ ಫಲಿತಾಂಶಗಳನ್ನು ಅದರ ಅಡಚಣೆಗಳನ್ನು ನೀಗಿಕೊಳ್ಳುವ ಮೂಲಕ ಜನಸಮುದಾಯದ ಸಮಗ್ರ ಹಿತಕ್ಕೆ ಬಳಸಿಕೊಳ್ಳಲು ಲಾಗೂ ಆಗುತ್ತದೆ. ಹಾಗೆ ನೋಡಿದರೆ ಶಾಲೆ, ಕಾಲೇಜು, ಕಂದಾಯ ಇಲಾಖೆ, ಬ್ಯಾಂಕು, ಪ್ರಯಾಣದ ಕೇಂದ್ರಗಳು ಹಾಗೂ ವ್ಯವಹಾರದ ರಂಗಗಳು ಹೀಗೆ ಸಾರ್ವಜನಿಕ ಉಪಯುಕ್ತ ಕ್ಷೇತ್ರಗಳಲ್ಲಿ ಕಂಪ್ಯೂಟರ್ ಬಳಕೆ ನಡೆಯುತ್ತಿದೆ. ಈ ರೀತಿ ಸಾಮಾನ್ಯ ಮತ್ತು ವಿಶಿಷ್ಟ ಕ್ಷೇತ್ರಗಳಲ್ಲಿನ ಕಂಪ್ಯೂಟರ್ ಕನ್ನಡೀಕರಣವು ಇನ್ನಷ್ಟು ವ್ಯಾಪಕವಾಗಿ ಮತ್ತು ಗುಣಾತ್ಮಕವಾಗಿ ನಡೆದಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಹೊಸದೊಂದು ಚೈತನ್ಯ ಮತ್ತು ಸ್ವರೂಪ ಬರುವುದರಲ್ಲಿ ಸಂದೇಹವಿಲ್ಲ.

ಊನಗೊಂಡ ಹಸ್ತಪ್ರತಿಯೊಂದನ್ನು ಪುನಾರಚಿಸಲು ಮತ್ತು ಪರಿಷ್ಕರಿಸಲು 'ಕಾರ್ಪಸ್' ಬಹುಮುಖ್ಯವಾಗಿ ಬೇಕಾಗುತ್ತದೆ. ಹಾಗೆಯೇ ಪರಿಷ್ಕರಿಸಿ ಮತ್ತು ಪುನಾರಚಿಸಿದ ನಂತರ ಸ್ಥಿರ ರೂಪದಲ್ಲಿ ಮತ್ತು ಸ್ಪಷ್ಟ ಸ್ಥಿತಿಯಲ್ಲಿ ಇಮೇಜ್ ರೂಪದಲ್ಲಿ ಸಿಗುವ ಹಸ್ತಪ್ರತಿಯಲ್ಲಿ ICR (Intelligent Character Recognition) ಮತ್ತು OCR (Optical Character Recogniser)ಗಳ ಸಹಾಯದಿಂದ ಟೈಪಿನ ಅಗತ್ಯವಿಲ್ಲದೆ ನೇರವಾಗಿ ನಮಗೆ ಬೇಕಾದ ಭಾಷೆಗೆ ಪರಿವರ್ತಿಸಿಕೊಳ್ಳಬಹುದಾಗಿದೆ.[೪೩] ಹಸ್ತಪ್ರತಿಯೊಳಗಡೆ ನಮಗೆ ಬೇಕಾದಲ್ಲಿ ಪ್ಯಾರಾ ಮಾಡುವ, ತೆರಪನ್ನು ಸೂಚಿಸುವ, ಅಕ್ಷರಗಳನ್ನು ಬೋಲ್ಡ್ ಮಾಡುವ, ಬೇಡವಾದದ್ದನ್ನು ತೆಗೆದು ಹಾಕುವ, ಬೇಕಾದ್ದನ್ನು ಸೇರಿಸುವ ಸಾಧ್ಯತೆಗಳು ಮೈಚಾಚಿವೆ. ಇಂಥ ಕೈ ಬರಹವನ್ನು ಅರ್ಥ ಮಾಡಿಕೊಳ್ಳುವಲ್ಲಿ ಕಂಪ್ಯೂಟರ್‌ನಲ್ಲಿ ಎರಡು ವಿಧಗಳಿವೆ. ೧. ಆಫ್‌ಲೈನ್ ಹ್ಯಾಂಡ್ ರೈಟಿಂಗ್ ರಿಕಗ್ನಿಷನ್ (Offline Hand Writing) ೨. ಆನ್‌ಲೈನ್ ರಿಕಗ್ನಿಷನ್ (Online Recognition). ಮೊದಲನೆಯದು ಹಾಳೆಯ ಮೇಲಿರುವ ಅಕ್ಷರಗಳನ್ನು ಗುರುತಿಸಲು ಮತ್ತು ಅರ್ಥೈಸಲು ಸಹಾಯಕವಾದರೆ, ಎರಡನೆಯದು ಎಲ್‌ಸಿಡಿ ಮಾನಿಟರ್‌ನಲ್ಲಿ ಪೆನ್ನಿನಂತಹ ಒಂದು ವಸ್ತುವಿನ ಚಲನೆಯನ್ನಾಧರಿಸಿ ಅಕ್ಷರ ಗುರುತಿಸುತ್ತದೆ. ಅಂದರೆ ಗಣಕ ಪರದೆಯ ಮೇಲೆ ಪೆನ್ನಿನಂತಹ ಉಪಕರಣದಿಂದ ನಾವು ಬರೆದಾಗ ಕಂಪ್ಯೂಟರ್ ಈ ವಿಶಿಷ್ಟ ಲೇಖನಿಯ ಚಲನೆಯ ಗತಿಯನ್ನು ಆಧರಿಸಿ ಕೈಬರಹಗಳನ್ನು ಅರ್ಥೈಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಎಸ್.ಬಿ. ಹೊನಗುಡಿ, ಗಣಕಯಂತ್ರ ಶಿಕ್ಷಣ, ಪು. ೧, ೨೦೦೪

೨. ಡಾ.ಎ. ಶ್ರೀನಿವಾಸನ್, ಕಂಪ್ಯೂಟರ್ ಶಿಕ್ಷಣ, ಪು. ೪೦

೩. ಅದೇ, ಪು. ೪

೪. ಜಿ.ವಿ. ನಿರ್ಮಲಾ ಎಸ್. ಕ್ಷಮಾ, ಗಣಕ ಲೋಕದೊಳಗೆ, ಪು. ೬೯, ೨೦೧೦

೫. ಅದೇ, ಪು. ೬೯

೬. ಅದೇ, ಪು. ೭೦

೭. ಅದೇ, ಪು. ೭೧

೮. ಅದೇ, ಪು. ೭೬

೯. ಅದೇ, ಪು. ೭೬

೧೦. ಅದೇ, ಪು. ೭೬

೧೧. ಪ್ರಜಾವಾಣಿ ಪತ್ರಿಕೆ, ಪು. ೫, ದಿನಾಂಕ ೪.೧.೨೦೧೯

೧೨. ಡಾ. ಸಾಂಬಮೂರ್ತಿ (ಸಂ), ಭಾಷಾ ತಂತ್ರಜ್ಞಾನ, ಪು. ೪೧, ೨೦೦೯

೧೩. ಅದೇ, ಪು. ೪೨

೧೪. ಅದೇ, ಪು. ೪೧

೧೫. ಅದೇ, ಪು. ೪೦

೧೬. ಅದೇ, ಪು. ೭೪

೧೭. ಅದೇ, ಪು. ೭೭-೭೮

೧೮. ಡಾ.ಎಂ.ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿಶಾಸ್ತ್ರ, ಪು. ೨, ೨೦೧೫

೧೯. ಡಾ. ಕೆ.ಆರ್. ಕೇಶವಮೂರ್ತಿ, ಹಸ್ತಪ್ರತಿ ಸಂರಕ್ಷಣೆ, ಪು. ೩, ೨೦೧೦

೨೦. ಅದೇ, ಪು.೨೨

೨೧. ಅದೇ ಪು, ೨೫

೨೨. ಅದೇ ಪು. ೨೬

೨೩. ಡಾ. ಸಾಂಬಮೂರ್ತಿ (ಸಂ), ಭಾಷಾ ತಂತ್ರಜ್ಞಾನ, ಪು. ೯೦, ೨೦೦೯

೨೪. ಉಮೇಶ ಹಡಗಲಿ, ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ಪದ್ಧತಿಗಳು (ಪಿಎಚ್.ಡಿ, ಮಹಾಪ್ರಬಂಧ) ಪು. ೧೫೭, ೨೦೧೩

೨೫. ಡಾ. ಸಾಂಬಮೂರ್ತಿ (ಸಂ), ಭಾಷಾ ತಂತ್ರಜ್ಞಾನ, ಪು. ೯೦, ೨೦೦೯

೨೬. ಅದೇ, ಪು. ೯೧

೨೭. ಅದೇ, ಪು. ೯೨

೨೮. ಅದೇ, ಪು. ೯೩

೨೯. ಅದೇ, ಪು. ೯೪

೩೦. ಅದೇ, ಪು. ೨೯

೩೧. ಅದೇ, ಪು. ೨೯

೩೨. ಡಾ. ವೀರೇಶ ಬಡಿಗೇರ (ಸಂ), ಎಸ್.ಆರ್. ಚನ್ನವೀರಪ್ಪ, ಹಸ್ತಪ್ರತಿ ವ್ಯಾಸಂಗ-೩, ಪು. ೪೧, ೨೦೦೨

೩೩. ಅದೇ, ಪು. ೪೫

೩೪. ಅದೇ, ಪು. ೪೪

೩೫. ಅದೇ, ಪು. ೪೪

೩೬. ಡಾ. ಎ. ಮೋಹನ ಕುಂಟಾರ್, ಭಾಷಾಂತರ ಪ್ರಕ್ರಿಯೆ, ಪು. ೪, ೨೦೧೬

೩೭. ಡಾ. ಸಾಂಬಮೂರ್ತಿ (ಸಂ), ಭಾಷಾ ತಂತ್ರಜ್ಞಾನ, ಪು. ೯೦, ೨೦೦೯

೩೮. ಅದೇ, ಪು. ೯೦-೯೧

೩೯. ಅದೇ, ಪು. ೯೩

೪೦. ಅದೇ, ಪು. ೯೩-೯೪

೪೧. ಡಾ. ವೀರೇಶ ಬಡಿಗೇರ (ಸಂ), ಎಸ್.ಆರ್. ಚನ್ನವೀರಪ್ಪ, ಹಸ್ತಪ್ರತಿ ವ್ಯಾಸಂಗ-೩, ಪು. ೨೧, ೨೦೦೨

೪೨. ಅದೇ, ಪು. ೨೨

೪೩. ಡಾ. ಸಾಂಬಮೂರ್ತಿ (ಸಂ), ಭಾಷಾ ತಂತ್ರಜ್ಞಾನ, ಪು. ೯೦, ೨೦೦೯

## ಅಧ್ಯಾಯ: ಆರು

# ಕನ್ನಡ ಸಾಹಿತ್ಯದ ಬೆಳವಣಿಗೆ: ಸಾಮಾಜಿಕ ಜಾಲತಾಣಗಳು

೬.೧. ಫೇಸ್‌ಬುಕ್

೬.೨. ವ್ಯಾಟ್ಸ್‌ಆ್ಯಪ್

೬.೩. ಬ್ಲಾಗ್

೬.೪. ವೆಬಿನಾರ್ ಸಂಸ್ಕೃತಿ

# ಅಧ್ಯಾಯ: ಆರು

# ಕನ್ನಡ ಸಾಹಿತ್ಯ ಬೆಳವಣಿಗೆ: ಸಾಮಾಜಿಕ ಜಾಲತಾಣಗಳು

ಆಧುನಿಕ ವಿಜ್ಞಾನ-ತಂತ್ರಜ್ಞಾನದ ಕ್ಷಿಪ್ರ ಪ್ರಗತಿಯ ಕಾರಣದಿಂದ ಎಲ್ಲಾ ಕ್ಷೇತರಗಳು ವೇಗವಾಗಿ ಬೆಳವಣಿಗೆಯಾಗುವ ಸಾಧ್ಯತೆಗಳು ಹೆಚ್ಚುತ್ತಿದೆ. ಭಾಷಾ ಕ್ಷೇತ್ರದಲ್ಲಿಯಂತೂ ತಂತ್ರಜ್ಞಾನ ಇಂದು ತುಂಬಾ ಸಹಕಾರಿಯಾಗಿದೆ. ಕಂಪ್ಯೂಟರ್ ಹಾಗೂ ಅಂತರ್ಜಾಲದ ಬಳಕೆಯಿಂದಾಗಿ ವಿಶ್ವದ ವಿದ್ಯಮಾನಗಳು ಹೆಚ್ಚು ಹೆಚ್ಚು ಸಾರ್ವತ್ರಿಕವಾಗುವ ಸಾಧ್ಯತೆಗಳು ಅಧಿಕವಾಗುತ್ತಿವೆ. ಮಾಹಿತಿಗಳನ್ನು ಮನೋವೇಗದಲ್ಲಿ ಕಡಿಮೆ ವೆಚ್ಚದಲ್ಲಿ ಸಾಗಿಸುವಂತಹ ಕಾರ್ಯ ವಿದ್ಯುನ್ಮಾನ ಮಾಧ್ಯಮಗಳಿಂದ ಸಾಧ್ಯವಾಗಿರುವಂತಹದು. ಮಾಹಿತಿಯನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಬ್ಬರಿಂದ ಮತ್ತೊಬ್ಬರಿಗೆ ಸಾಗಿಸುವಲ್ಲಿ ಭಾಷಾ ತಂತ್ರಜ್ಞಾನದ ಕಾರ್ಯ ಬಹಳ ಮಹತ್ವವಾದುದು. ಈ ಮಾಹಿತಿ ವರ್ಗಾವಣೆ ಕಾರ್ಯ ಕೇವಲ ಒಂದು ಸೀಮಿತ ಪ್ರದೇಶಕ್ಕೆ ಸೀಮಿತವಾಗಿಲ್ಲ. ಅದು ವಿಶ್ವಮಟ್ಟಕ್ಕೆ ಸಂಬಂಧಿಸಿದುದಾಗಿದೆ. ಇಂತಹ ಸಂದರ್ಭದಲ್ಲಿ ಇಂಗ್ಲೀಷ್‌ನಂತಹ ಪರಭಾಷೆಗಳು ಜನರ ಮೇಲೆ ಪರಿಣಾಮ ಬೀರುತ್ತವೆ. ಅವುಗಳು ವ್ಯವಹಾರಿಕವಾಗಿ ಕಾರ್ಯ ನಿರ್ವಹಿಸಿದರೂ ಎಲ್ಲರನ್ನೂ ತನ್ನೆಡೆಗೆ ಸೆಳೆಯುವಂತಹ ಸಂದರ್ಭಗಳು ಉದ್ಭವಿಸುತ್ತವೆ. ಅದರಂತೆ ಸಾವಿರಾರು ವರ್ಷಗಳ ಪಾರಮ್ಯತೆ ಹೊಂದಿರುವ ಕನ್ನಡದಂತಹ ಇತರ ಭಾಷೆಗಳು ಬೆಳವಣಿಗೆ ಕುಂಠಿತವಾಗಬಹುದು. ಆದುದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಜಾಗತಿಕ ಮಟ್ಟದಲ್ಲಿ ಬೆಳೆಸುವಲ್ಲಿ ಅಂತರ್ ಜಾಲದಲ್ಲಿ ಕೆಲವೊಂದು ಆ್ಯಪ್‌ಗಳು ತುಂಬಾ ಸಹಕಾರಿಯಾಗಿವೆ. ಅವುಗಳಲ್ಲಿ ಫೇಸ್‌ಬುಕ್, ವ್ಯಾಟ್ಸ್‌ಫ್, ಟ್ವಿಟರ್ ಹಾಗೂ ಬ್ಲಾಗ್‌ಗಳು. ನಾಲ್ಕಾರು ಸಮಾನ ಮನಸ್ಕ ಸ್ನೇಹಿತರು ಹಿರಿಯ ಅನುಭವಿ ಬರಹಗಾರರು ಕವಿಗಳು ಎಲ್ಲಾ ಒಂದೇ ತರಹದ ಅಭಿರುಚಿ ಇರುವ ಜನರು ಒಟ್ಟಿಗೆ ಕುಳಿತು ಹರಟುತ್ತಿದ್ದೇವೆ ಎನ್ನುವಷ್ಟು ಸಾಮಿಪ್ಯವನ್ನು ಕಲ್ಪಿಸಿ ದೂರದ ಮನಸ್ಸುಗಳ ಭಾವನೆಗಳನ್ನು ಹಂಚಿಕೊಳ್ಳಲು ಹಾಗೂ ಇತರರಿಗೆ ಸಾಹಿತ್ಯ ಜ್ಞಾನ ತಿಳಿಯಲು ಸಾಹಿತ್ಯಾಭಿರುಚಿ ಪಡೆಯಲು ಮತ್ತು ಸಾಹಿತ್ಯ ಓದುವ ಆಸಕ್ತಿ ಉಂಟು ಮಾಡಲು ಈ ಆ್ಯಪ್‌ಗಳು ಸಹಕಾರಿಯಾಗಿವೆ.

## ೬.೧. ಫೇಸ್‌ಬುಕ್

ಫೇಸ್‌ಬುಕ್ ಒಂದು ವಿಶ್ವವ್ಯಾಪಕವಾದ ಸಾಮಾಜಿಕ ಸಂಪರ್ಕದ ಜಾಲತಾಣ ಇದರ ಕಾರ್ಯಚರಣೆ ನಿರ್ವಹಿಸುವ ಮತ್ತು ಖಾಸಗಿ ಮಾಲೀಕತ್ವ ಹೊಂದಿರುವ ಕಂಪನಿ Facebook.INC ಬಳಕೆದಾರರು ತಮ್ಮ ಮಿತ್ರರನ್ನು ಇಲ್ಲಿ ಸೇರಿಸಬಹುದು ಮತ್ತು ಅವರಿಗೆ ಸಂದೇಶಗಳನ್ನು ಕಳುಹಿಸಬಹುದು ಮತ್ತು ವೈಯಕ್ತಿಕ ವ್ಯಕ್ತಿ ಚಿತ್ರವನ್ನು ಸಹ ನವೀಕರಿಸಿ ಮಿತ್ರರಿಗೆ ತಮ್ಮ ಬಗ್ಗೆ ಪ್ರಕಟಿಸಬಹುದು. ಇದರ ಜೊತೆಗೆ ಬಳಕೆದಾರರು ಊರು ಕಾರ್ಯಾಲಯ, ಶಾಲೆ ಮತ್ತು ಪ್ರದೇಶದವರು ಸಂಘಟಿಸಿದ ಸಂಪರ್ಕ ಜಾಲದಲ್ಲಿ ಸೇರಬಹುದು. ವಿಶ್ವವಿದ್ಯಾಲಯದ ನಿರ್ವಾಹಕರು ತಮ್ಮ ವಿದ್ಯಾರ್ಥಿಗಳು ಪರಸ್ಪರರನ್ನು ಒಳ್ಳೆಯ ರೀತಿಯಲ್ಲಿ ಪರಿಚಿತರಾಗಲಿ ಎಂಬ ಉದ್ದೇಶದಿಂದ ಶೈಕ್ಷಣಿಕ ವರ್ಷದ ಆರಂಭದಲ್ಲಿ ಕೊಡುತ್ತಿದ್ದ ಪುಸ್ತಕಗಳ ಆಡುಮಾತಿನ ಹೆಸರಿನಿಂದ ಈ ಒಂದು ವೆಬ್‌ಸೈಟ್‌ನ ಹೆಸರು ಉಗಮಗೊಂಡಿದೆ.

ಮಾರ್ಕ್‌ಜ್ಯೂಕರ್‌ಬರ್ಗ್ ಹಾರ್ವರ್ಡ್ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿದ್ದಾಗ ತಮ್ಮ ಕಾಲೇಜಿನ ಜೊತೆ ವಾಸಿಗರು ಮತ್ತು ಕಂಪ್ಯೂಟರ್ ಸೈನ್ಸ್‌ನ ವಿದ್ಯಾರ್ಥಿ ಗೆಳೆಯರಾದ ಎಡ್ವಾರ್ಡೊ ಸೆವರಿನ್ ಡಸ್ಟಿನ್ ಮಾಸ್ಕೋವಿಟ್ಸ್ ಮತ್ತು ಕ್ರಿಸ್ ಹ್ಯಾಸ್‌ರೊಂದಿಗೆ ಸೇರಿ ಫೇಸ್‌ಬುಕ್ ಶೋಧಿಸಿದರು. ಆರಂಭದಲ್ಲಿ ಈ ಜಾಲತಾಣದ ಸದಸ್ಯತ್ವ ಕೇವಲ ಹಾರ್ವರ್ಡ್ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ನಂತರ ಅದು ಬೊಸ್ಟನ್ ಎರಿಯಾ ದಿ ಐವಿ ಲೀಗ್ ಮತ್ತು ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದಂತಹ ಇತರ ಕಾಲೇಜುಗಳಿಗೂ ವಿಸ್ತಾರಗೊಂಡಿತು. ನಂತರ ಇನ್ನೂ ವಿಸ್ತರಿಸುತ್ತ ಯಾವುದೇ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೂ ಕೂಡ ಸೇರ್ಪಡೆಗೆ ಅವಕಾಶ ನೀಡತೊಡಗಿತು. ನಂತರ ಪ್ರೌಢಶಾಲಾಯೆ ವಿದ್ಯಾರ್ಥಿಗಳು ಮತ್ತು ಕೊನೆಯದಾಗಿ ೧೩ ವರ್ಷ ಹಾಗೂ ಅದಕ್ಕಿಂತ ಮೇಲ್ಪಟ್ಟವರು ಯಾರಾದರೂ ಸೇರಬಹುದಾಗಿತ್ತು. ಈ ಜಾಲತಾಣವು ಇಂದು ವಿಶ್ವದಾದ್ಯಂತ ೩೦೦ ಮಿಲಿಯನ್‌ಗಿಂತ ಹೆಚ್ಚು ಸಕರಿಯ ಬಳಕೆದಾರರನ್ನು ಹೊಂದಿದೆ. ಇದನ್ನು ಫೆಬ್ರವರಿ ೪, ೨೦೦೪ರಂದು ಜೂಕರ್‌ಬರ್ಗ್ 'ದ ಫೇಸ್‌ಬುಕ್' ಸ್ಥಾಪಿಸಿದರು. ಇದು ಮೂಲವಾಗಿ the facebook ರಲ್ಲಿ ನೆಲೆಗೊಳಿಸಿದೆ. ಸಾಹಿತ್ಯವೆಂದರೆ ಸಾಕಷ್ಟು ಜನರಿಗೆ ನಿಲುಕದ ನಕ್ಷತ್ರವಾಗಿ ಒಂದು ಕಾಲದಲ್ಲಿ ಕಾಣುತ್ತಿತ್ತು. ಆದರೆ ಈಗಿನ ಸಂದರ್ಭದಲ್ಲಿ ಫೇಸ್ ಬಳಕೆಯ ಅವಕಾಶದಿಂದ ಎಲ್ಲರೂ ಕೂಡ ಯಾವುದೇ ಸಮಯಕ್ಕಾಗಲೀ ಸುಲಭವಾಗಿ ಸಾಹಿತ್ಯವನ್ನು ಓದಬಹುದಾದಂತಾಗಿದೆ.

ಫೇಸ್‌ಬುಕ್ ಮುಕ್ತವಾದ ಗೆಳೆತನಕ್ಕೆ ಚರ್ಚೆಗೆ ವಿಷಯಗಳ ವಿಶ್ಲೇಷಣೆ ಸಂಶೋಧನೆ ಕವಿತೆ ಅಭಿಪ್ರಾಯ ಸಲಹೆ ವೈಚಾರಿಕತೆ ವಿಚಾರ ವಿನಿಮಯ ಭಿನ್ನಾಭಿಪ್ರಾಯ ಮುಂತಾದ ಸಂಗತಿಗಳನ್ನು ದಿನನಿತ್ಯದಲ್ಲಿ ವ್ಯವಹರಿಸುವುದಕ್ಕೆ ಮುಕ್ತವಾದ ಅವಕಾಶವಿದೆ. ಕನ್ನಡ ಸಾಹಿತ್ಯದ ಬಹುತೇಕ ಪ್ರಕಾರಗಳ ಸಾಹಿತ್ಯವು ಫೇಸ್‌ಬುಕ್ ವಾಲ್‌ಗಳಲ್ಲಿ ಸಾಹಿತ್ಯದ ಮಹತ್ವದ ವಾಕ್ಯಗಳೆಲ್ಲವೂ

ಸ್ಟೇಟಸ್‌ಗೆ ಹಾಕಿಕೊಂಡಿರುವ ಅನೇಕ ಅಕೌಂಟ್‌ಗಳಿವೆ. ರಾಮಾಯಣ, ಮಹಾಭಾರತದ ವಾಕ್ಯಗಳು, ಜನಪದ ಬರಹಗಳು, ಪಂಪನ 'ಮನುಷ್ಯ ಜಾತಿ ತಾನೊಂದೆ ವಲಂ', ವಿಕ್ರಮಾರ್ಜುನ 'ವಿಜಯದ ಪ್ರಸಿದ್ಧ ವಾಕ್ಯ'ಗಳು, ಶ್ರೀ ವಿಜಯನ 'ಕುರಿತೋದಯಂ ಕಾವ್ಯ ಪ್ರಯೋಗ ಮತಿಗಳ್' ವಚನಗಳ ಸಾಲು, 'ಕಾಯಕವೇ ಕೈಲಾಸ', ಕುಮಾರವ್ಯಾಸರ 'ಹಲಗೆ ಬಳಪ ಪಿಡಿಯದೊಂದು ಅಗ್ಗಳಿಕೆ', ಕನಕದಾಸರ 'ಕುಲ ಕುಲವೆಂದು ಹೊಡೆದಾಡುತಿರಿ ಕುಲದ ನೆಲೆಯನ್ನಾದರೂ ಬಲ್ಲಿರಾ', ಇಂತಹ ಬರಹಗಳು ಫೇಸ್‌ಬುಕ್‌ನ ಗೋಡೆಗಳೆಲ್ಲ ರಾರಾಜಿಸುತ್ತವೆ. ಆಧುನಿಕ ಸಾಹಿತ್ಯದ ಲೇಖಕರಾದ ಕುವೆಂಪು ಅವರ ವಿಶ್ವಮಾನವ ಸಂದೇಶಗಳು, ಬೇಂದ್ರೆ ಕವನಗಳು, ಕಾರಂತ, ಗೋಕಾಕ್, ಗೋಪಾಲಕೃಷ್ಣ ಅಡಿಗ, ಪಿ.ಲಂಕೇಶ್, ಪು.ತಿ.ನ., ನಿಸಾರ್ ಅಹಮ್ಮದ್, ದೇವನೂರು ಮಹಾದೇವ, ಸಿದ್ಧಲಿಂಗಯ್ಯ ಮುಂತಾದವರು ತಮ್ಮ ಕೃತಿಯಲ್ಲಿನ ಬರಹಗಳಿಗೆ ಮಾರುಹೋಗಿ ಬರೆದುಕೊಂಡ ಅಸಂಖ್ಯಾತ ವಿವರಗಳು ಸಿಗುತ್ತವೆ. ಬಂಡಾಯದ ಗಾಳಿಗೆ ಒಗ್ಗಿಕೊಂಡಂತೆ ಕಂಡುಬರುತ್ತಿರುವ ಯುವ ಸಮುದಾಯವು ಸರ್ಕಾರವಾಗಲಿ, ರಾಜಕೀಯವಾಗಲಿ, ಸಾಹಿತ್ಯಕವಾಗಲಿ, ಸಾಮಾಜಿಕ ಅನಿಷ್ಟತೆ, ಮೌಢ್ಯಗಳ ವಿರುದ್ಧವಾಗಿ ತಕ್ಷಣಕ್ಕೆ ಪ್ರತಿಕ್ರಿಯಿಸುವುದು ಆಶಾವಾದದ ಸಂಕೇತವಾಗಿದೆ.[೧] ಫೇಸ್‌ಬುಕ್‌ನಲ್ಲಿ ಸಾಹಿತ್ಯವನ್ನು ಓದುವುದುಕ್ಕೆ ಮಾತ್ರ ಅವಕಾಶ ಇರುವುದೆಂದಲ್ಲ ಅದರಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಜನಪದ ಹಾಡುಗಳು, ಭಾವಗೀತೆಗಳು, ನಾಡಗೀತೆಗಳು, ನಾಡಿನ ಪ್ರಸಿದ್ಧರು ಮಾಡಿದ ಭಾಷಣಗಳು ಸಹ ಫೇಸ್‌ಬುಕ್‌ನಲ್ಲಿ ನೋಡಲು ಲಭ್ಯವಿದೆ. ಲೈವ್ ವಿಡಿಯೋಗಳ ಸೌಲಭ್ಯ ಅಥಾವ ಅವಕಾಶವಿದೆ. ಇದು ಕೈಗೆಟಕದೆ ಇರುವ ಕೃತಿಗಳು ಪಿಡಿಎಫ್‌ನ ರೂಪದಲ್ಲಿದ್ದು ಫೇಸ್‌ಬುಕ್‌ನಿಂದಲೇ ಹೆಚ್ಚು ಪ್ರಚಲಿತವಾಗುತ್ತಿವೆ. ಸಾಹಿತಿಗಳು, ಸಂಶೋದಕರು ಅನ್ಯ ರಾಜ್ಯಗಳ ಅಧ್ಯಯನ ಸಾಹಿತ್ಯದ ಕೆಲಸಗಳಿಗೆ ಹೋದಾಗ ಅಲ್ಲಿನ ಹೋರಾಟಗಳ ಪರಿಚಯ ಸಾಹಿತ್ಯಾಸಕ್ತತೆ ಕುರಿತು ಲೈವ ಆದ ವಿಡಿಯೋಗಳು ಚಿತ್ರಿಸುವುದನ್ನು ನೋಡಿದ್ದೇವೆ.

ಕರೋನಾ ಕಾಲದಲ್ಲಿಯಂತೂ ಸಾಹಿತ್ಯ ಓದು ಫೇಸ್‌ಬುಕ್‌ನಿಂದಾಗಿ ಚಳುವಳಿ ಎಂಬಂತೆ ಭಾಸವಾಗುತ್ತಿದೆ. ಸಾಹಿತ್ಯಾಸಕ್ತರು ಪರಸ್ಪರ ವಿಚಾರ ವಿನಿಮಯದ ಹೊತ್ತಿನಲ್ಲಿ ನಿರಂಜನರ 'ಚಿರಸ್ಮರಣೆ' ಕಾದಂಬರಿಯ ಕುರಿತು ಗಂಭೀರ ಚರ್ಚೆಯನ್ನು ಆರಂಭಿಸಿ ಕೊನೆಗೆ ಅದು ಅನೇಕ ಫೇಸ್‌ಬುಕ್‌ನ ಗೆಳೆಯರನ್ನು ಕೂಡಿ 'ನಮ್ಮ ನಡಿಗೆ ಕಯ್ಯೂರಿನ ಕಡೆಗೆ' ಎಂಬ ಟ್ಯಾಗ್‌ಲೈನ್ ಹೊತ್ತು ಕಯ್ಯೂರಿನ ಕಡೆಗೆ ಹೊರಟರು. ಹೊರಡುವ ಮುನ್ನ ಕಾದಂಬರಿಯ ಪ್ರಾದೇಶಿಕತೆಗೆ ಬರುವ ಸ್ನೇಹಿತರೆಲ್ಲ 'ಚಿರಸ್ಮರಣೆ' ಓದಿಕೊಂಡೆ ಬರಬೇಕೆಂಬ ನಿಲುವಿನಿಂದ ಹೋದರು. ಅಲ್ಲಿ ಚರ್ಚಿಸಿದ್ದು ಚಿರಕುಂಡ. ಅಪ್ಪು ಮನೆಗಳು, ಸ್ಮಾರಕ, ಪರಿಸರ, ಹೋರಾಟ ಅಲ್ಲಿನ ಈಗಿನ ವಾತಾವರಣ ಎಲ್ಲವನ್ನೂ ಸಾಹಿತ್ಯ ಕೃತಿಯ ಮುಖೇನ ಚರ್ಚಿಸಿದ ವಿಶೇಷ ಅನುಭವಗಳನ್ನು ಫೇಸ್‌ಬುಕ್‌ಗಳಲ್ಲಿ ಬರೆದುಕೊಂಡಿದ್ದಾರೆ.

## ಕನ್ನಡ ಸಾಹಿತ್ಯ ಮತ್ತು ಫೇಸ್‌ಬುಕ್ ಹೋರಾಟ

ಹೋರಾಟ ಮತ್ತು ಚಳುವಳಿಗಳು ಕನ್ನಡ ಸಾಹಿತ್ಯದ ಒಂದು ಭಾಗವಾಗಿಯೂ ನೋಡಬಹುದು. ಸಮಾಜದಲ್ಲಿ ನಡೆಯುವ ಕೆಲವು ಅಹಿತಕರ ಘಟನೆಗಳನ್ನು ಸಾಹಿತ್ಯ ವಲಯ ಮೊದಲಿನಿಂದಲೂ ಖಂಡಿಸುತ್ತಾ ಬಂದಿದೆ. ಅಂತಹ ಮನೋಭಾವದ ಪ್ರಗತಿಪರ ಸಾಹಿತಿಗಳನ್ನೇ ಕೊಂದಾಗ ಸಾಹಿತ್ಯ ವಲಯವೆ ಆತಂಕಗೊಂಡಿತ್ತು. ಎಂ.ಎಂ.ಕಲಬುರ್ಗಿ ಮತ್ತು ಗೌರಿ ಲಂಕೇಶ್ ಹತ್ಯೆಯಾದಾಗ ಧಾರವಾಡದ ಹೋರಾಟ, ಗೌರಿ ಹತ್ಯೆಯ ಬೆಂಗಳೂರಿನ ಹೋರಾಟಗಲಿಗೆ ಫೇಸ್‌ಬುಕ್‌ನಿಂದಲೇ ಅನೇಕ ಯುವ ಉತ್ಸಾಹಿಗಳಿಗೆ ಕರೆಯನ್ನು ಕೊಟ್ಟಿದ್ದರು. ಸಾಹಿತಿಗಳು ಮತ್ತು ಸಾಹಿತ್ಯಾಸಕ್ತರು ವಿದ್ಯಾರ್ಥಿಗಳು ದೊಡ್ಡ ಸಂಖ್ಯೆಯಲ್ಲಿ ಸೇರಿ ಹೋರಾಟಕ್ಕೆ ಕೈಜೋಡಿಸಿದ್ದರು. ಜಾತಿ ಶ್ರೇಣೀಕರಣವನ್ನು ಮೊದಲಿನಿಂದಲೂ ವಿರೋಧಿಸುತ್ತ ಬಂದಿರುವ ಸಾಹಿತ್ಯ ವಲಯವು ದಲಿತ ಬಂಡಾಯದ ಚಳುವಳಿಯನ್ನೇ ಪರಿಣಮಕಾರಿಯಾಗಿ ಹುಟ್ಟು ಹಾಕಿತ್ತು. ಇದರ ಪರಿಣಾಮವಾಗಿ ಜಾತೀಯತೆಯ ವಿರುದ್ಧವಾಗಿ ಫೇಸ್‌ಬುಕ್‌ನಿಂದಲೇ ಜೊತೆಗೂಡಿ ಕಾರ್ಯರೂಪಕ್ಕೆ ತಂದ ಸಂಗತಿಗಳಿವೆ.[೨]

ಸಾಮಾಜಿಕ ಮಾಧ್ಯಮಗಳ ಬಹುಮುಖ್ಯ ವೇದಿಕೆಯಾಗಿರುವ ಫೇಸ್‌ಬುಕ್ ಸಮಾಜದಲ್ಲಿ ನಡೆಯುವ ಘಟನೆಗಳಿಗೆ ನಮ್ಮ ತಕ್ಷಣದ ಪ್ರತಿಕ್ರಿಯೆಗಳು ಮತ್ತು ನಮ್ಮ ವೈಯಕ್ತಿಕ ಅನಿಸಿಕೆಗಳನ್ನು ಅಭಿವ್ಯಕ್ತಿಸಲು ಸಹಕಾರಿಯಾಗಿದೆ. ವಿಶೇಷವಾಗಿ ಯುವಕರು ತಮ್ಮ ವಿಚಾರಗಳನ್ನು ಸಿದ್ಧಾಂತಗಳನ್ನು ಪ್ರಕಟಪಡಿಸಲು ಮಾತ್ರವಲ್ಲದೆ ತಮ್ಮ ಹತಾಶೆಯನ್ನು ಫೇಸ್‌ಬುಕ್ ಮೂಲಕ ಹೊರಹಾಕುತ್ತಿದ್ದಾರೆ. ಯುವ ಕವಿಗಳು ಬರಹಗಾರರು ತಮ್ಮ ಅಪ್ರಕಟಿತ ಕಥೆ, ಕವನ, ಚುಟುಕು, ವಿಮರ್ಶೆ ಲೇಖನಗಳ ಅಭಿವ್ಯಕ್ತಿಗೆ ಫೇಸ್‌ಬುಕ್‌ನ್ನು ಬಳಸಿಕೊಳ್ಳುತ್ತಿದ್ದಾರೆ. ನಾಡಿನ ಪ್ರಸಿದ್ಧ ಕವಿ ಸಾಹಿತಿ ಲೇಖಕರು, ವಿಮರ್ಶಕರುಗಳೂ ಫೇಸ್‌ಬುಕ್‌ನಲ್ಲಿ ಕ್ರಿಯಾಶೀಲರಾಗಿದ್ದು ತಮ್ಮ ಚುಟುಕು ವಿಮರ್ಶೆ ಟೀಕೆಗಳ ಮೂಲಕ ಯುವ ಉದಯೋನ್ಮುಖ ಬರಹಗಾರರನ್ನು ತಿದ್ದಿ ತೀಡುತ್ತಿದ್ದಾರೆ. ಈ ಫೇಸ್‌ಬುಕ್ ಮಾಧ್ಯಮವು ಎಷ್ಟೋ ಯುವ ಜನರ ಸುಪ್ತ ಪ್ರತಿಭೆಯನ್ನು ಹೊರಗೆಳೆಯಲು ಪ್ರಯತ್ನಿಸಿದೆ. ಆ ಮೂಲಕ ಪ್ರತಿಯೊಂದು ಯುವ ಮನಸ್ಸಿನ ತೀವ್ರ ಭಾವನೆಗಳ ಅಭಿವ್ಯಕ್ತಿಗೂ ಎಡೆಮಾಡಿಕೊಟ್ಟಿದೆ. ಕೆಲವರು ತಮ್ಮ ಕವಿತೆಗಳಿಗೆ ಇದನ್ನೊಂದು ಮಾಧ್ಯಮವನ್ನಾಗಿ ಮಾಡಿಕೊಂಡರೆ ಇನ್ನು ಕೆಲವರು ತಾವು ಓದಿದ ಒಳ್ಳೆಯ ಕಾವ್ಯ, ಕಥೆ, ಲೇಖನಗಳ ಬಗ್ಗೆ ಅಭಿಪ್ರಾಯ, ಅನಿಸಿಕೆಗಳನ್ನು ಹಂಚಿಕೊಳ್ಳುವ ವೇದಿಕೆಯನ್ನಾಗಿ ಮಾಡಿಕೊಂಡಿದ್ದಾರೆ. ವ್ಯಾಟ್ಸ್ ಆ್ಯಪ್‌ನಂತೆ ಫೇಸ್‌ಬುಕ್‌ನಲ್ಲಿಯೂ ಸಾಮೂಹಿಕ ವಿಚಾರ ವಿನಿಮಯಗಳಿಗೆ ಅವಕಾಶವಿದೆ. ಕನ್ನಡ ಬರುತ್ತೆ ಕವಿ ಸಂಗಮ, ಬರಹಗಾರರ ಜಗತ್ತು, ಕಾದಂಬರಿಕಾರರ ಗುಂಪು, ಬಾಲ ಸಾಹಿತಿಗಳು, ಉದಯೋನ್ಮುಖ ಕವಿಗಳು, ಬರಹಗಾರರ ಬರಹ, ಮಹಿಳಾ ಸಾಹಿತಿಗಳು-ಕೃತಿಗಳು ಸೇರಿದಂತೆ ಹಲವು ಫೇಸ್‌ಬುಕ್ ಗುಂಪುಗಳು ಕ್ರಿಯಾಶೀಲವಾಗಿ ಆಯಾ ವಿಷಯಗಳ ಬಗ್ಗೆ ಗಂಭೀರ ಚರ್ಚೆಗೆ ಬಳಕೆಯಾಗುತ್ತಿವೆ.೩ ಇಷ್ಟೇ ಅಲ್ಲದೇ ಕನ್ನಡ ಸಾಹಿತ್ಯ ಪ್ರಚಾರಕ್ಕೂ ಫೇಸ್‌ಬುಕ್

ಸಹಕಾರಿಯಾಗಿದೆ. ಸಾಹಿತ್ಯವು ವ್ಯವಹಾರಿಕ ಕ್ಷೇತ್ರವಲ್ಲದಿದ್ದರೂ ಪ್ರಕಟಣೆ ಕೃತಿಗಳು ಬಿಡುಗಡೆಯ ವಿಚಾರಕ್ಕೆ ಬಂದಾಗ ಡಿಜಿಟಲ್‌ಗೆ ಹೊಂದಿಕೊಂಡಿರುವುದನ್ನು ಕಾಣುತ್ತೇವೆ. ಪ್ರಕಾಶಕರು ಕೃತಿ ಪ್ರಕಟಿಸುವ ಬಿಡುಗಡೆಯ ಕಾಲಕ್ಕೆ ಫೇಸ್‌ಬುಕ್‌ನಿಂದಾಗಿ ವ್ಯಾಪಕವಾದ ಪ್ರಚಾರ ಸಿಕ್ಕುತ್ತಿದೆ. ಇದರಿಂದಾಗಿ ಪ್ರಕಾಶಕರು ಕುಳಿತಲ್ಲೇ ಲಾಭ ಗಳಿಸುವುದಕ್ಕೆ ಸಾಧ್ಯವಾಗಿದೆ. ಈ ವ್ಯಾಪಾರ ಗ್ರಂಥಾಲಯಗಳಲ್ಲಿ ಡಿಜಿಟಲೀಕರಣ, ಪ್ರಕಾಶನ ಸಂಸ್ಥೆಗಳು ಎಲ್ಲವೂ ಇಲ್ಲಿ ಸುಲಭಕ್ಕೆ ಕೈಗೆಟುಕವಂತಿದೆ.

### ೬.೨. ವ್ಯಾಟ್ಸ್‌ಆ್ಯಪ್

ಸಾಮೂಹಿಕ ವಿಚಾರ ವಿನಿಮಯಗಳಿಗೆ ಅನುಕೂಲವಾಗಿರುವಂತಹ ಮತ್ತೊಂದು ಅಂತರ್‌ಜಾಲ ತಾಣವೇ ವಾಟ್ಸ್‌ಪ್. ವಾಟ್ಸ್‌ಆಪ್ ಮೆಸ್ಸೆಂಜರ್ ಸ್ಮಾರ್ಟ್ ಫೋನ್‌ಗಳಿಗೆ ಒಂದು ಪ್ರೊಪ್ರೈಟರಿ ವೇದಿಕೆ ಹಾಗೂ ತ್ವರಿತ ಸಂದೇಶವನ್ನು ಕಳಿಸುವಂತಹ ಕ್ಲೈಂಟ್ ಆಗಿ ನಿಂತಿದೆ. ಅದು ಸಂದೇಶಗಳನ್ನು ಚಿತ್ರಗಳನ್ನು ಧ್ವನಿ ಸಂಭಾಷಣೆಗಳನ್ನು ವಿಡಿಯೋಗಳನ್ನು ಮತ್ತು ದಾಖಲೆಗಳನ್ನು ಅಂತರಜಾಲದ ಮುಖಾಂತರ ಒಬ್ಬ ವ್ಯಕ್ತಿಯ ಸ್ಮಾರ್ಟ್ ಫೋನಿನಿಂದ ಮತ್ತೊಬ್ಬನಿಗೆ ಕಳುಹಿಸಲು ಉಪಯೋಗಿಸುತ್ತದೆ. ಫೆಬ್ರವರಿ ೧೬, ೨೦೧೬ರ ದಾಖಲೆಗಳ ಪ್ರಕಾರ ಪ್ರಪಂಚದಲ್ಲಿ ವಾಟ್ಸ್‌ಆಪ್ ಬಳಸುವ ಸಂಖ್ಯೆಯು ೧೦೦ ಕೋಟಿಯನ್ನು ದಾಟಿದೆ. ಹಾಗೂ ಇದು ವಿಶ್ವದಲ್ಲೇ ಅತೀ ದೊಡ್ಡ ಜನಪ್ರಿಯ ಸಂದೇಶವಾಹಕ ಅಪ್ಲಿಕೇಶನ್ ಆಗಿದೆ. ಸ್ಮಾರ್ಟ್ ಫೋನ್ ಮತ್ತು ಲ್ಯಾಪ್‌ಟಾಪ್ ಬಳಕೆಗೆ ಬಂದ ನಂತರ ವಾಟ್ಸ್‌ಪ್ಪಿನ ಬಳಕೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಈ ವಾಟ್ಸ್‌ಆಪ್ ಮೆಸೆಂಜರ್ ಇಂಕ್ ಕಂಪನಿಯು ೨೦೦೯ರಲ್ಲಿ ಬ್ರಿಯಾನ್ ಆ್ಯಕ್ಟನ್ ಮತ್ತು ಜಾನ್ ಕೌಂ ಎಂಬವರಿಂದ ಸ್ಥಾಪಿತವಾಯಿತು. ಇದರಲ್ಲಿ ವಿಶ್ವದ ಯಾವುದೇ ಮೂಲೆಯಿಂದ ಯಾವುದೇ ಮೂಲೆಗಾದರೂ ಜನರು ಸಂಭಾಷಣೆಯನ್ನು ಕಳುಹಿಸಬಹುದು. ಸಂಭಾಷಣೆ ಒಂದೇ ಅಲ್ಲದೆ ಚಿತ್ರಗಳು, ವಿಡಿಯೋಗಳು, ಧ್ವನಿ(ಸಂಭಾಷಣೆ) ಕರೆಗಳು ಇನ್ನೊಬ್ಬರ ಸಂಪರ್ಕಗಳನ್ನು ಸ್ಥಳದ ವಿಕಾಸವನ್ನು ಕಳುಹಿಸಬಹುದು. ವಾಟ್ಸ್‌ಆಪ್ ಆಕರ್ಷಕವಾಗಿದ್ದು ಈಗಿನ ಮಕ್ಕಳು ಯುವಕರು, ಯುವತಿಯರು ಇದರಲ್ಲೆ ಮಾರು ಹೋಗಿದ್ದಾರೆ. ಇಂಟರ್‌ನೆಟ್ ಬಳಕೆ ಮಾತ್ರ ಬೇಕಾಗಿರುವುದರಿಂದ ಸೇವೆಯು ಬಹಳ ಸುಲಭವಾಗಿ ಕಂಡುಬಂದಿವೆ. ಇತ್ತೀಚಿನ ಬೆಳವಣಿಗೆಗಳಲ್ಲಿ ವಾಟ್ಸ್‌ಆಪ್ ತನ್ನ ಅಪ್ಲಿಕೇಶನ್ ಭಾಷೆಯನ್ನು ಬದಲಾಯಿಸುವ ಆಯ್ಕೆಯನ್ನು ಕೊಟ್ಟಿದೆ. ಇದರಲ್ಲಿ ವಿಶ್ವದ ನಾನಾ ಭಾಷೆಗಳು ಇದೆ. ಆಂಗ್ಲ ಭಾಷೆಯನ್ನು ಗೊತ್ತಿಲ್ಲದಿದ್ದವರು ಸಹ ಬಹಳ ಸುಲಭವಾಗಿ ಉಪಯೋಗಿಸಲು ಅವಕಾಶವಿದೆ. ವಾಟ್ಸ್‌ಪ್‌ನಲ್ಲಿ ವಿಶ್ವವಿದ್ಯಾಲಯಗಳಲ್ಲಿನ ಪ್ರಾಧ್ಯಾಪಕರು, ಸಂಶೋಧಕರು, ವಿದ್ಯಾರ್ಥಿಗಳು, ಇವರಲ್ಲದೆಯೂ ಸಾಮಾನ್ಯವಾಗಿ ಓದು ಬರಹ ಬರುವಂತಹ ಸಾಹಿತ್ಯ ಆಸಕ್ತಿಯನ್ನು ಹೊಂದಿರುವಂತಹ ಇತರರು ಸಹ ಸಾಹಿತ್ಯದ ಪರಿಧಿಯೊಳಗೆ ಬರುವಂತಹ ಕಥೆ, ಕವನ, ಮುಂತಾದವುಗಳನ್ನು ವಾಟ್ಸ್‌ಪಿನಲ್ಲಿ ಓದಿ ಸಾಹಿತ್ಯಾಭಿರುಚಿಯನ್ನು ಪಡೆಯಬಹುದು. ಯಾವುದೇ ಒಂದು ಸಾಹಿತ್ಯ

ಪ್ರಕಾರದ ಕುರಿತು ಅದರ ಅರ್ಥ ತಿಳಿಯಬಹುದು. ವಿಮರ್ಶೆ ಮಾಡಬಹುದು. ಸಾಹಿತ್ಯ ರಚನೆಯ ಕವಿಗಳ ಬಗ್ಗೆ ತಿಳಿಯಬಹುದು. ಹಿರಿಯರಿಂದ ಹಿಡಿದು ಕಿರಿಯರವರೆಗೆ ಸಾಹಿತ್ಯಾಸಕ್ತಿವುಳ್ಳಂತಹ ಸಮಾನ ಮನಸ್ಕರು ಸಾಹಿತ್ಯದ ಬಗ್ಗೆ ಚರ್ಚೆ ಮಾಡಲು ಅವಕಾಶವಿದೆ. ಕನ್ನಡ ಭಾಷೆಗೆ ಸಂಬಂಧಪಟ್ಟಂತಹ ಸಂಶೋಧನೆಗೆ ಇರುವಂತಹ ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಹಲವಾರು ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ರಾಷ್ಟ್ರಮಟ್ಟದ, ರಾಜ್ಯ ಮಟ್ಟದ ವಿಚಾರ ಸಂಕಿರಣಗಳು, ಕಮ್ಮಟಗಳು ನಡೆಯುತ್ತಿರುತ್ತವೆ. ಇಂತಹವುಗಳನ್ನು ವಿಡಿಯೋ ರೆಕಾರ್ಡ್ ಮಾಡಿ ಇತರ ಹೊರ ಜಗತ್ತಿಗೆ ವಾಟ್ಸಪ್ ಮೂಲಕ ಕಳುಹಿಸಬಹುದು.

ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡ ಭಾಷೆಯ ಸಾಹಿತ್ಯ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಹಲವಾರು ವಿಭಾಗಗಳಿವೆ. ಹಸ್ತಪ್ರತಿಶಾಸ್ತ್ರ ವಿಭಾಗ, ಭಾಷಾಧ್ಯಯನ ವಿಭಾಗ, ಸಾಹಿತ್ಯ ಅಧ್ಯಯನ ವಿಭಾಗ, ಭಾಷಾಂತರ, ಜಾನಪದ ಅಧ್ಯಯನ ವಿಭಾಗಗಳಿದ್ದು, ಆಯಾ ವಿಭಾಗಗಳಲ್ಲಿಯೂ ಒಂದೊಂದು ವಾಟ್ಸಆಪ್ ಗ್ರೂಪ್ ಇದೆ. ಈ ಗ್ರೂಪ್‌ಗಳಲ್ಲಿನ ಸದಸ್ಯರು ಒಂದೊಂದು ವಿಭಾಗದಲ್ಲಿ ನಡೆದ ಚರ್ಚೆ, ಗೋಷ್ಠಿಗಳ ಕಾರ್ಯಕ್ರಮವನ್ನು ವಾಟ್ಸಪ್ ಮೂಲಕ ಹಂಚಿಕೊಳ್ಳುತ್ತಾರೆ. ಇದರಿಂದ ಅನೇಕರಿಗೆ ಸಾಹಿತ್ಯದ ಜ್ಞಾನ ಹೆಚ್ಚು ಹೆಚ್ಚು ಬೆಳೆಯುತ್ತದೆ. ವಿಶ್ವವಿದ್ಯಾಲಯದಿಂದ ಹೊರಗುಳಿದ ಜನತೆಗೂ ಸಾಹಿತ್ಯಕ ವಿಚಾರಗಳನ್ನು ವಾಟ್ಸಆಪ್‌ನ ಮೂಲಕ ಕಳುಹಿಸಬಹುದಾಗಿದೆ.[೩]

### ೬.೩. ಬ್ಲಾಗ್

ಬ್ಲಾಗ್ ಎಂದರೆ ಅಂತರ್‌ಜಾಲದ ಒಂದು ವಿಧ. (ವೆಬ್ಲಾಗ್ ಎಂಬುದರ ಹ್ರಸ್ವರೂಪ) ಇದು ಸಾಮಾನ್ಯವಾಗಿ ಪ್ರತ್ಯೇಕ ಖಾಸಗಿ ವ್ಯಕ್ತಿಗಳಿಂದ ನಿರ್ವಹಿಸಲ್ಪಡುವ ತಾಣವಾಗಿರುತ್ತದೆ. ಇದರಲ್ಲಿ ಪ್ರತಿ ಕ್ರಿಯಾತ್ಮಕ ಲೇಖನಗಳು, ಕಾರ್ಯಕ್ರಮಗಳ ವಿವರಣೆ, ಗ್ರಾಫಿಕ್ಸ್, ವಿಡಿಯೋ ಮೊದಲಾದವುಗಳನ್ನು ನಿರಂತರವಾಗಿ ದಾಖಲಿಸಲಾಗುತ್ತದೆ. ಹೀಗೆ ದಾಖಲಿಸುವ ಲೇಖನಗಳು ಸಾಮಾನ್ಯವಾಗಿ ಹಿಮ್ಮುಕ ಕ್ರಮಾಂಕದಲ್ಲಿ ಪ್ರದರ್ಶನಗೊಳ್ಳುತ್ತವೆ. ಎಲ್ಲರಿಗೂ ಓದಲು ಅನುಕೂಲವಾಗುವಂತೆ ಅಂತರಜಾಲದಲ್ಲಿ ಇಟ್ಟಂತಹ ತೆರೆದ ದಿನಚರಿ ಅಥವಾ ಡೈರಿಯನ್ನು ಬ್ಲಾಗ್ ಎನ್ನುತ್ತಾರೆ. ಬ್ಲಾಗ್ ಎಂದರೆ ಒಂದು ರೀತಿಯಲ್ಲಿ ಸಾರ್ವಜನಿಕ ಸ್ವಗತ ಎನ್ನಬಹುದು.

ಬ್ಲಾಗ್ ಎನ್ನುವುದು ವೆಬ್ಲಾಗ್ (Weblog) ಎನ್ನುವ ಪದದಿಂದ 'ವ್ಯುತ್ಪತ್ತಿ'ಯಾಗಿದೆ. ಇದನ್ನು ಮೊತ್ತ ಮೊದಲು ಜಾನ್ ಬರ್ಗರ್ ಎಂಬುವವರು ಮೊತ್ತಮೊದಲಿಗೆ ೧೯೯೭ರಲ್ಲಿ ಬಳಸಿದರು. ಪೀಟರ್ ಮಹೋಲ್ಝ್ ಅವರು ೧೯೯೯ರಲ್ಲಿ ಇದನ್ನು ವಿಬ್ಲಾಗ್ (Weblog) ಎಂಬುದಾಗಿ ವಿಭಜಿಸಿದರು. ಎಂದರೆ ನಾವು ಬ್ಲಾಗ್ ಮಾಡುತ್ತಿದ್ದೇವೆ ಎಂಬ ಅರ್ಥ. ತದನಂತರ ಬ್ಲಾಗ್ ಎನ್ನುವುದು ನಾಮಪದ ಮತ್ತು ಕ್ರಿಯಾಪದವಾಗಿ ಬಳಕೆಯಾಗತೊಡಗಿತು. ೨೦೦೧ರ ನಂತರ

ಬ್ಲಾಗ್ ಜನಪ್ರಿಯವಾಗತೊಡಗಿತಾದರೂ ೨೦೦೩ರಲ್ಲಿ ಹಲವು ಉಚಿತ ಬ್ಲಾಗಿಂಗ್ ತಾಣಗಳು ಅವತರಿಸಿ ಬ್ಲಾಗಿಂಗ್ ಮನೆಮಾತಾಗುವಂತಾಯಿತು. ಅಂತರ್‌ಜಾಲದಲ್ಲಿ ಇರುವ ಅನೇಕ ತಾಣಗಳಲ್ಲಿ ಬ್ಲಾಗ್ ಕೂಡ ಒಂದು. ಆದರೆ ಒಂದು ವಿಧದ ತಾಣಗಳನ್ನು ಮಾತ್ರ ಬ್ಲಾಗ್ ಎಂದು ಕರೆಯಲಾಗುತ್ತದೆ. ಸರಳವಾಗಿ ಹೇಳಬಹುದಾದರೆ, 'ಅಂತರಜಾಲದಲ್ಲಿ ನಮ್ಮ ಅನಿಸಿಕೆಗಳು, ಭಾವನೆಗಳು, ಬರವಣಿಗೆಗಳು, ದಿನಚರಿಗಳು, ಫೋಟೋಗಳು ಇತ್ಯಾದಿಗಳನ್ನು ಒಂದು ಕಡೆ ದಾಖಲಿಸಲು ನೆರವಾಗುವ ವೇದಿಕೆ ಇದೊಂದು ಉಚಿತವಾದ ವೇದಿಕೆ. ಇದೊಂದು ನಮ್ಮದೇ ಆದ ಪುಟ್ಟ ವೆಬ್‌ಸೈಟ್ ಇದ್ದಂತೆ. ಈ ಬ್ಲಾಗ್ ತಾಣದಲ್ಲಿ ಮೂರು ಮುಖ್ಯವಾದ ಅಂಶಗಳು ಇರುತ್ತವೆ. ಬ್ಲಾಗ್, ಬ್ಲಾಗಿಂಗ್ ಬ್ಲಾಗ್ನರ್. ಬ್ಲಾಗ್ ಎಂದರೆ ಇದೊಂದು ವೇದಿಕೆ, ಬ್ಲಾಗಿಂಗ್ ಎಂದರೆ ಇದನ್ನು ನಡೆಸುವ ಕ್ರಿಯೆ, ಬ್ಲಾಗ್ನರ್ ಎಂದರೆ, ಬ್ಲಾಗ್ ಬರೆಯುವ ವ್ಯಕ್ತಿಯೇ ಬ್ಲಾಗ್ನರ್.

ಬ್ಲಾಗ್ ಆರಂಭಿಸಲು ನಮಗೆ ಬೇಕಾಗಿರುವುದು ನಮ್ಮ ಇಮೇಲ್ ವಿಳಾಸ ಹಾಗೂ ಇಂಟರ್ನೆಟ್ ಸಂಪರ್ಕ. ನಮ್ಮಲ್ಲಿ ಹೆಚ್ಚಿನವರು ಬಳಸುತ್ತಿರುವ Blogger.com ಅಥವಾ word press.com ಎಂಬ ತಾಣಗಳಿಗೆ ಹೋಗಿ ಅಲ್ಲಿ sign-up ಅಂತ ಇರುವಲ್ಲಿ ಕ್ಲಿಕ್ ಮಾಡಿದರೆ ಅಲ್ಲಿ ನಿಮ್ಮ ಹೆಸರು, ಊರು, ಜನ್ಮದಿನಾಂಕ, ದೂರವಾಣಿ ಸಂಖ್ಯೆ ಮುಂತಾದ ಮೂಲ ಮಾಹಿತಿಯನ್ನು ದಾಖಲಿಸುತ್ತಾ ಹೋಗಿ, ಹೆಚ್ಚಿನವರು ಗೂಗಲ್ ಕಂಪನಿಯ Blogger.com ಬಳಸುತ್ತಾರೆ. ಅದರಲ್ಲಾದರೆ ನಿಮ್ಮ ಜಿಮೇಲ್ ಖಾತೆ ಬಳಸಿ ಲಾಗ್ ಇನ್ ಆಗಿ ಸುಲಭವಾಗಿ ಬ್ಲಾಗ್ ರಚಿಸಬಹುದು. ವರ್ಡ್‌ಪ್ರೆಸ್‌ನಲ್ಲಿ ಯಾಹೂ, ರೆಡಿಫ್, ಜಿಮೇಲ್ ಮುಂತಾದ ಯಾವುದೇ ಇಮೇಲ್ ಖಾತೆ ಬಳಸಬಹುದು.

ಬ್ಲಾಗರ್‌ನಲ್ಲಿ ಜಿಮೇಲ್ ಮೂಲಕ ಲಾಗ್ ಇನ್ ಆದ ತಕ್ಷಣ ಕಾಣಿಸಿಕೊಳ್ಳುವ New blog ಬಟನ್ ಒತ್ತಬೇಕು. Title ಅಂತ ಇರುವಲ್ಲಿ ಬ್ಲಾಗ್‌ಗೆ ಕನ್ನಡದಲ್ಲಿ ನಮಗಿಷ್ಟದ ಒಂದು ಸುಂದರ ಹೆಸರನ್ನು ಕೊಡಬೇಕು. ನಂತರ Adress ಎಂದಿರುವಲ್ಲಿ ನಮ್ಮ ಬ್ಲಾಗ್‌ನ ವಿಳಾಸ ಅಂದರೆ ಯುಆರ್‌ಎಲ್ ನಿಮಗೆ ಬೇಕಾದಂತೆ ಇಂಗ್ಲಿಷ್‌ನಲ್ಲಿ ನಮೂದಿಸಬೇಕು. ನಿಮ್ಮ ಹೆಸರನ್ನೋ, ಬ್ಲಾಗಿನ ಹೆಸರನ್ನೋ ಬರೆದರೆ ಸಾಕು. ಮುಂದಿನ ಭಾಗ (ಡೊಮೆನ್ ಅಂತಾರೆ) blogspot.com ಎಂಬುದು ತಾನಾಗಿ ಸೇರಿಕೊಳ್ಳುತ್ತದೆ. ಇಲ್ಲಿ ನೆನಪಿಡಬೇಕಾದ ಅಂಶವೆಂದರೆ ಬ್ಲಾಗ್ ಎಂದರೆ ನಮ್ಮ ಸ್ವಂತ ವೆಬ್ ತಾಣವಿದ್ದಂತೆ. ಅದಕ್ಕೆ ನಾವು ಬರೆಯುವ (ಅಂದರೆ ಪೋಸ್ಟ್ ಮಾಡುವ ಲೇಖನಗಳನ್ನು ಪೋಸ್ಟ್ ಅಂತ ಕರೀತಾರೆ. ಪೋಸ್ಟನ್ನು ಕೂಡ ಬ್ಲಾಗ್ ಅಂತ ಉಲ್ಲೇಖಿಸಲಾಗುತ್ತದೆ. (ಉದಾ. ನಾನು ಬ್ಲಾಗ್ ಬರ್ದಿದ್ದೀನಿ.) ಆಗ ಅಲ್ಲಿ ಕಾಣಸಿಗುವ ಪೆನ್ಸಿಲ್ ಚಿತ್ರವಿರುವ ಒಂದು ಬಟನ್ ಒತ್ತಿದರೆ, ಬ್ಲಾಗ್ ಪೋಸ್ಟ್‌ನ ಶೀರ್ಷಿಕೆ (post title) ಹಾಕಲು ಮತ್ತು ವಿಷಯವನ್ನು ಬರೆಯುವ ಎರಡು ಬಾಕ್ಸ್‌ಗಳಿರುವ ಫಾರ್ಮ್ ಕಾಣಿಸುತ್ತದೆ.

ಅಲ್ಲೆ ಕನ್ನಡದಲ್ಲಿಯೂ ಬರೆಯಲು ಗೂಗಲ್ ನಮಗೆ ಅನುಕೂಲ ಮಾಡಿಕೊಟ್ಟಿದೆ. ಬರಹ ಬರೆಯುವ ಫಾರ್ಮ್‌ನ ಬಲ ಮೇಲ್ಭಾಗದಲ್ಲಿರುವ ಹಿಂದಿ 'ಅ' ಅಕ್ಷರ ಕಾಣಿಸುವ ಬಟನ್ ಕ್ಲಿಕ್ ಮಾಡಿದರೆ ಯಾವ ಭಾಷೆಯನ್ನು ಬೇಕಾದರೂ ಆಯ್ಕೆ ಮಾಡುವ ಅವಕಾಶವಿರುತ್ತದೆ. ಎಲ್ಲ ಬರೆದಾದ ಬಳಿಕ Publish ಬಟನ್ ಒತ್ತಿದರೆ ನಮ್ಮ ಬ್ಲಾಗ್ ಪೋಸ್ಟ್ ಆನ್‌ಲೈನ್‌ನಲ್ಲಿ ಪ್ರಕಟವಾಗುತ್ತದೆ.

ಇದು ಸಾದಾ ಸಾಮಾನ್ಯ ಬ್ಲಾಗ್. ಪ್ರತೀ ಬಾರಿ ನೀವು New post ಅಂತ ಇರುವಲ್ಲಿ ಕ್ಲಿಕ್ ಮಾಡಿದರೆ ಹೊಸದಾಗಿ ಲೇಖನ ಪ್ರಕಟಿಸಬಹುದು. ಬೇರೆ ಕಡೆ ಟೈಪ್ ಮಾಡಿಯೂ ಇಲ್ಲಿಗೆ ಪೇಸ್ಟ್ ಮಾಡಬಹುದು. ನಂತರ ಇಲ್ಲಿ ಒಂದಿಷ್ಟು ತಿಳುವಳಿಕೆ ಉಪಯೋಗಿಸಿದರೆ, ನಮ್ಮ ಬ್ಲಾಗ್ ವಿನ್ಯಾಸವನ್ನು ನಾವೇ ಬದಲಾಯಿಸಿಕೊಳ್ಳಬಹುದು. ಟೆಂಪ್ಲೇಟ್ ಬದಲಿಸಬಹುದು. ಅದಕ್ಕೊಂದು ಟ್ಯಾಗ್‌ಲೈನ್ ಸೇರಿಸಬಹುದು. ಮತ್ತು ಲೇಔಟ್ ಎಂದಿರುವಲ್ಲಿ ಕ್ಲಿಕ್ ಮಾಡಿದರೆ, ವಿಭಿನ್ನ ಗ್ಯಾಜೆಟ್‌ಗಳನ್ನು (ಸರಳವಾಗಿ ಹೇಳುವುದಾದರೆ ಬ್ಲಾಗ್ ವಿನ್ಯಾಸಕ್ಕೆ ಪೂರಕವಾಗಿರುವ ಅಪ್ಲಿಕೇಶನ್‌ಗಳು ಉದಾ. ಫೇಸ್‌ಬುಕ್, ಟ್ವಿಟರ್ ಲಿಂಕ್‌ಗಳು) ಸೇರಿಸಿಕೊಳ್ಳಬಹುದು. ಎಲ್ಲ ಆದ ಮೇಲೆ ಲಾಗೌಟ್ ಮಾಡುವುದನ್ನು ಮರೆಯಬಾರದು.

**ಬ್ಲಾಗ್‌ನ ಲಕ್ಷಣಗಳು**

* ನಿಯಮಿತವಾಗಿ ಹೊಸ ಬರವಣಿಗೆಯನ್ನು ಸೇರಿಸುತ್ತಿರಬೇಕು.

* ಅವುಗಳನ್ನು ಸೇರಿಸಿದ ದಿನಾಂಕ ಪ್ರಕಾರ ಅಳವಡಿಸಿರಬೇಕು.

* ಕೊನೆಯ ಬರವಣಿಗೆ ಮೊದಲು ಲಭ್ಯವಾಗಿರುವಂತಿರುತ್ತದೆ.

* ಬ್ಲಾಗ್ನಲ್ಲಿ ಸೇರಿಸಲ್ಪಡುವ ಲೇಖನಕ್ಕೆ ಪೋಸ್ಟ್ ಅಥವಾ ಪೋಸ್ಟಿಂಗ್ ಎನ್ನುತ್ತಾರೆ.

* ಈ ಪೋಸ್ಟಿಂಗ್ ಒಂದು ಶೀರ್ಷಿಕೆ ಸೇರಿಸಿದ ದಿನಾಂಕ ಮುಖ್ಯ ಬರಹ ಅಥವಾ ಲೇಖನ ವಿಷಯ ಇತ್ಯಾದಿ ಲಕ್ಷಣಗಳಿರುತ್ತವೆ.

**ಬ್ಲಾಗ್‌ಗಳ ವಿಧಗಳು**

ಯಾವ ಯಾವ ರೀತಿಯ ಬ್ಲಾಗ್ಗಳಿವೆ ಎಂಬುದನ್ನು ವೀಕ್ಷಿಸಿ ನೋಡಿದರೆ ನಮಗೆ ಅಂತರಜಾಲದಲ್ಲಿ ಎಷ್ಟು ವೈವಿಧ್ಯದ ತಾಣಗಳಿವೆಯೋ ಅಷ್ಟು ವೈವಿಧ್ಯ ಬ್ಲಾಗ್ಗಳಲ್ಲೂ ಇರುವುದು ಗೋಚರವಾಗುತ್ತದೆ. ಬ್ಲಾಗಿಗಳಲ್ಲಿ ಬಹುಪಾಲು ಮಂದಿ ಹೊತ್ತು ಕಳೆಯಲು ಅಥವಾ ಏನಾದರೂ ಹೇಳಬೇಕು ಎನ್ನುವ ತುಡಿತ ತೀರಿಸಿಕೊಳ್ಳಲು ಬ್ಲಾಗಿಂಗ್ ಮಾಡುತ್ತಿದ್ದಾರೆ. ಹಾಗಿದ್ದರೂ ಇವರ ಬ್ಲಾಗ್‌ಗಳಲ್ಲಿ ಹಲವು ಉಪಯುಕ್ತ ಮಾಹಿತಿಗಳು ದೊರೆಯುವ ಸಾಧ್ಯತೆಗಳಿವೆ. ಬ್ಲಾಗ್ ಮಾಡುತ್ತಿರುವವರು ಕಥೆಗಾರ ಅಥವಾ ಸಾಹಿತಿಯಾಗಿದ್ದರಂತೂ ಓದುಗರಿಗೆ ಬೋನಸ್ ಎನ್ನಬಹುದು. ಪರಿಣಿತರಾದ ತಂತ್ರಜ್ಞರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಆಗುತ್ತಿರುವ ಹೊಸ

ಸಂಶೋಧನೆಗಳ ಬಗ್ಗೆ ಪೂರ್ವಭಾವಿಯಾಗಿ ಬ್ಲಾಗ್ ಬರೆಯುವ ಮೂಲಕ ಈ ವಿಷಯಗಳಲ್ಲಿ ಆಸಕ್ತಿ ಇರುವವರಿಗೆ ಬೇಗನೆ ಮಾಹಿತಿ ಸಿಗುವಂತಾಗುತ್ತದೆ. ಉದಾಹರಣೆಗೆ ಮೈಕ್ರೋಸಾಫ್ಟ್ ಕಂಪನಿಯ ಉದ್ಯೋಗಿಗಳು ಮುಂಬರುವ ತಂತ್ರಾಂಶಗಳ ಬಗ್ಗೆ ಬ್ಲಾಗಿಂಗ್ ಮಾಡುತ್ತಾರೆ. ಅಷ್ಟು ಮಾತ್ರವಲ್ಲ ಈಗಿರುವ ತಂತ್ರಾಂಶಗಳ ಬಗ್ಗೆ ಸಲಹೆ ನೀಡುತ್ತಾರೆ. ಕೆಲವೊಮ್ಮೆ ಯಾವುದೇ ಗ್ರಾಹಕ ಕೈಪಿಡಿಯಲ್ಲೂ ಸಿಗದ ಮಾಹಿತಿ ಇಂತಹ ಬ್ಲಾಗ್‌ಗಳಲ್ಲಿ ದೊರೆಯುತ್ತವೆ. ಕೆಲವು ತಂತ್ರಜ್ಞರು ತಮ್ಮ ಕ್ಷೇತ್ರದಲ್ಲಿಯೂ ಕೆಲವು ಉಪಯುಕ್ತ ಸಲಹೆ ಕಿವಿಮಾತುಗಳನ್ನೂ ತಮ್ಮ ಬ್ಲಾಗ್‌ಗಳಲ್ಲಿ ನೀಡುತ್ತಿರುತ್ತಾರೆ. ಆದುದರಿಂದ ಎಲ್ಲಾ ಬ್ಲಾಗ್‌ಗಳನ್ನು ಕೆಲಸವಿಲ್ಲದವರ ಗಳಹುವಿಕೆ ಎಂದು ಅಲ್ಲಗಳೆಯುವಂತಿಲ್ಲ. ಅಥವಾ ತುಚ್ಚೀಕರಿಸುವಂತಿಲ್ಲ.

ಬ್ಲಾಗ್‌ಗಳಲ್ಲಿ ಹಲವು ವಿಧಗಳಿದ್ದು ಈ ವೈವಿಧ್ಯವು ಕೇವಲ ವಸ್ತು ವಿಷಯಗಳ ಮೇಲೆ ನಿರ್ಧಾರಿತವಾಗಿರದೆ ಅದರ ನಿರೂಪಣಾ ಶೈಲಿ ಅಥವಾ ಬರಹ ವಿಧಾನದ ಮೇಲೆಯೂ ಅವಲಂಬಿತವಾಗಿರುತ್ತದೆ. ಅವುಗಳಲ್ಲಿ ಖಾಸಗಿ ಬ್ಲಾಗ್‌ಗಳು, ಸಾಂಸ್ಥಿಕ ಬ್ಲಾಗ್‌ಗಳು, ವಿಷಯಾಧಾರಿತ ಬ್ಲಾಗ್‌ಗಳು, ಮಾಧ್ಯಮ ಆಧಾರಿತ ಬ್ಲಾಗ್‌ಗಳು, ಸಾಧನೆ ಆಧಾರಿತ ಬ್ಲಾಗ್‌ಗಳು ಇವೆ.

**ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಬ್ಲಾಗ್‌ಗಳು**

ಇಂದಿನ ಸಾಮಾಜಿಕ ಜಾಲತಾಣಗಳಾದ ಬ್ಲಾಗ್‌ಗಳು ಕನ್ನಡ ಸಾಹಿತ್ಯ ಪ್ರಸರಣ ಕ್ರಿಯೆಯಲ್ಲಿ ತೊಡಗಿವೆ ಎನ್ನಬಹುದು. ಸಾಮಾಜಿಕ ಜಾಲತಾಣಗಳು ಸೃಷ್ಟಿಯಾಗುವುದಕ್ಕೆ ಮುಂಚೆ ಸಾಹಿತ್ಯಕ ವಿಚಾರಗಳೆಂದರೆ ಬಹಳ ಗಂಭೀರ ವೇದಿಕೆಗಳಲ್ಲಿ ಚರ್ಚಿತವಾಗುವ ವಿಚಾರ ಮಾತ್ರವಾಗಿತ್ತು. ಆದರೆ ಇಂದು ಬ್ಲಾಗ್ ಎಂಬ ಮುಕ್ತ ವೇದಿಕೆಯನ್ನು ತಾವೇ ರಚಿಸಿಕೊಂಡು ಅನಿಸಿಕೆಗಳನ್ನು, ಅನುಭವಗಳನ್ನು ಸುಪ್ತ ಭಾವನೆಗಳನ್ನು ಬ್ಲಾಗ್‌ಗಳ ಮೂಲಕ ಅಭಿವ್ಯಕ್ತಿಸುತ್ತಿದ್ದಾರೆ. ತಾವು ಓದಿದ ಕೃತಿಯ ಬಗ್ಗೆ ಮೆಚ್ಚುಗೆ ಟೀಕೆ, ವಿಮರ್ಶೆ, ವಿಶ್ಲೇಷಣೆಗಳನ್ನು ಮಾಡಲು ಮತ್ತು ಸಮಾನ ಮನಸ್ಕರೊಂದಿಗೆ ಹಂಚಿಕೊಳ್ಳಲು ಬ್ಲಾಗ್‌ಗಳು ವಿಶೇಷವಾಗಿ ಬಳಕೆಯಾಗುತ್ತಿವೆ. ಕನ್ನಡದಲ್ಲಿ ಇಂತಹ ಸುಮಾರು ೧೦೦೦ಕ್ಕೂ ಹೆಚ್ಚು ಬ್ಲಾಗ್‌ಗಳು ಕ್ರಿಯಾಶೀಲವಾಗಿವೆ.

ಕನ್ನಡ ಸಾಹಿತ್ಯವನ್ನು ಬ್ಲಾಗ್‌ಗಳ ಮೂಲಕ ಬಿತ್ತರಿಸುವಂತಹ ಈ ಸಂದರ್ಭದಲ್ಲಿ ಕೆಲವೊಂದು ಬ್ಲಾಗ್‌ಗಳನ್ನು ನೋಡಬಹುದು. ದಿನಾಂಕ ೧೧.೦೧.೨೦೦೮ ಸಮಯ ೧೬.೪೧ರಲ್ಲಿ ಪ್ರಕಟಗೊಂಡ ಬ್ಲಾಗ್ ವೇದಿಕೆಯಿಂದ ನಡೆದ ಕಾರ್ಯಕ್ರಮ. ಉತ್ತರ ಅಮೇರಿಕಾದ ಮೇರಿ ಲ್ಯಾಂಡ್‌ನಲ್ಲಿರುವ "ಭೂಮಿಕಾದ" ಆಶ್ರಯದಲ್ಲಿ ಪ್ರತಿ ತಿಂಗಳು ಎರಡನೆಯ ಭಾನುವಾರ ಮಧ್ಯಾಹ್ನ ೧.೪೫ ಗಂಟೆಗೆ ಸರಿಯಾಗಿ ಕನ್ನಡ ರಂಗಭೂಮಿ, ಸಾಂಪ್ರದಾಯಿಕ ಕಲೆ ಸಾಹಿತ್ಯ ಮತ್ತು ಇತರೇ ವಿಷಯಗಳ ಬಗ್ಗೆ ವಿಚಾರ ವಿನಿಮಯ ಹಾಗೂ ಚರ್ಚೆ ನಡೆಸಲಾಗುತ್ತದೆ. ನಿಮಗೆಲ್ಲರಿಗೂ ಆದರದ ಸ್ವಾಗತ.

ಪ್ರಸ್ತುತ ಕಾರ್ಯಕ್ರಮ ಸತೀಶ್‌ಕುಮಾರ್ ಅವರು ಹೊಸನಗರ ಮೈಸೂರು ವಿಶ್ವವಿದ್ಯಾನಿಲಯ ಹಾಗೂ 'ಹೊಬೋಕನ್ ಟೆಕ್ನಾಲಜಿ ಇನ್‌ಸ್ಟಿಟ್ಯೂಟ್'ನಲ್ಲಿ ಸ್ನಾತಕೋತ್ತರ ಪದವಿ ಗಳಿಸಿದ್ದಾರೆ. ಸದ್ಯಕ್ಕೆ ನ್ಯೂಜೆರ್ಸಿಯ ಟೆಲಿಕಮ್ಯೂನಿಕೇಶನ್ ಕಂಪನಿಯೊಂದರಲ್ಲಿ ಪ್ರಾಜೆಕ್ಟ್ ಮ್ಯಾನೇಜರ್ ಆಗಿ ಕೆಲಸ ಮಾಡುತ್ತಿದ್ದಾರೆ. ಅವರು ತಮ್ಮ ಲೇಖನಗಳನ್ನು ಈವರೆಗೆ ಹಲವು ನಿಯತ ಕಾಲಿಕೆಗಳಲ್ಲೂ ಇಂಟರ್‌ನೆಟ್ ಪೋರ್ಟಲ್‌ಗಳಲ್ಲೂ ಪ್ರಕಟಿಸಿರುವುದರ ಜೊತೆಗೆ ಕಳೆದ ಎರಡು ವರ್ಷಗಳಿಂದ ತಮ್ಮದೇ ಆದ ವೆಬ್‌ಲಾಗ್‌ಗಳನ್ನು ಪ್ರಕಟಿಸುತ್ತಾ ಬಂದಿರುತ್ತಾರೆ. ಅವರ ಮೂರು ಬ್ಲಾಗ್‌ಗಳು ಇಂತಿವೆ.

ಅಂತರಂಗ

ಕಾಲಚಕ್ರ

ದಾರಿದೀಪ

'ಅಂತರಂಗ' ಬ್ಲಾಗಿನಲ್ಲಿ ದಿನನಿತ್ಯದ ಹಾಗುಹೋಗುಗಳ ಬಗ್ಗೆ ಸ್ಥಳೀಯ ಹಾಗೂ ಅಂತರಾಷ್ಟ್ರೀಯ ವಿದ್ಯಮಾನಗಳ ಬಗ್ಗೆ ತಮ್ಮ ನೆರೆಹೊರೆಯ ಬಗ್ಗೆ ಓತಪ್ರೋತವಾಗಿ ಬರೆಯುತ್ತಲೇ ಬಂದಿದ್ದಾರೆ. 'ಕಾಲಚಕ್ರ'ದಲ್ಲಿ ಅರೆ ಮಲೆನಾಡಿನ ಭಾಷೆಯಲ್ಲಿ ಕರ್ನಾಟಕದ ರಾಜಕೀಯ ರಾಜಕಾರಣಿಗಳ ಬಗ್ಗೆ ಹಾಸ್ಯ ಹಾಗೂ ವಿಡಂಬನೆಗೆ ಒತ್ತು ಕೊಟ್ಟು ಬರೆಯುವುದಕ್ಕೆ ಮೀಸಲಾದ ಬ್ಲಾಗು. 'ದಾರಿದೀಪ' ಬ್ಲಾಗಿನಲ್ಲಿ ತಮ್ಮ ವಿದ್ಯಾರ್ಥಿ ಹಾಗೂ ವೃತ್ತಿ ಜೀವನದ ಅನುಭವಗಳನ್ನು ಹಂಚಿಕೊಳ್ಳುತ್ತಾ ಬಹಳಷ್ಟು ಜನರಿಗೆ ಮಾರ್ಗದರ್ಶನ ನೀಡಲು ಪ್ರಯತ್ನಿಸುತ್ತಿದ್ದಾರೆ.

ಸತೀಶ್‌ಕುಮಾರ್‌ರವರು ರಚನೆ ಮಾಡಿಕೊಂಡಿರುವ ಈ ಮೂರು ಬ್ಲಾಗುಗಳ ಜೊತೆಗೆ ಇನ್ನೂ ಹಲವಾರು ಕನ್ನಡದ ಲೇಖನಗಳುಳ್ಳ ಬ್ಲಾಗುಗಳಿವೆ.

೧೮ ಪರ್ವಗಳ ಸಂಪೂರ್ಣ ಮಹಾಭಾರತ, ಕೆಂಡ ಸಂಪಿಗೆ ಬ್ಲಾಗ್, ನನ್ನ ಪುಟ ಬ್ಲಾಗ್, ಕನ್ನಡ ಕನ್ನಡಿಗ, ಅವಧಿ ಪ್ರಮುಖ ಕನ್ನಡ ಪುಸ್ತಕಗಳು, ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕೃತಿ, ಶಾಲೆಯಲ್ಲಿ ಏನು ಕಲಿತೆ ಕಂದ, ನನ್ನ ಪುಟ್ಟ ಬ್ಲಾಗ್, ಕನ್ನಡ ಕನ್ನಡಿಗ ಕರ್ನಾಟಕ ಬ್ಲಾಗ್, ಸಂಸ್ಕೃತಿ ಸಲ್ಲಾಪ ಕನ್ನಡ ಕನ್ನಡದ ಪ್ರಮುಖರ ಬಗೆಗಿನ ಲೇಖನಗಳ ಬ್ಲಾಗ್‌ಗಾಗಿ ಹೀಗೆ ಕನ್ನಡ ಲೇಖನಗಳುಳ್ಳ ಬ್ಲಾಗುಗಳು ಇವೆ. ಈ ಬ್ಲಾಗ್‌ಗಳ ಮೂಲಕ ಕನ್ನಡ ಸಾಹಿತ್ಯದ ಕುರಿತಾದ ಬರಹಗಳು ಇರುತ್ತವೆ. ಇದರಿಂದ ಸಾಹಿತ್ಯದ ಕುರಿತಾದ ಸಾಕಷ್ಟು ಮಾಹಿತಿಯನ್ನು ಬೇರೆಯವರು ಕೂಡ ಪಡೆಯಬಹುದು. ಮಂಜುನಾಥ ಕೆ.ಎಂ. ಅವರು 'ಕನ್ನಡ ಸಾಹಿತ್ಯ ಚರಿತ್ರೆ' ಎಂಬ ಶೀರ್ಷಿಕೆಯಿಂದ ಕನನ್ಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ದೀರ್ಘವಾದ ಲೇಖನವನ್ನು ಬ್ಲಾಗಿನ ಮೂಲಕ ನಿರೂಪಿಸಿದ್ದಾರೆ. ಹಾಗೆಯೇ ಕನ್ನಡ ಸಾಹಿತ್ಯ ಪ್ರಾಚೀನತೆ ಭಾಗ-೨ ನನ್ನ ಬರಹಗಳು: ಕನ್ನಡ ಕಾವ್ಯ ನಡೆದು ಹಾದಿ ಎಂಬ ಲೇಖನದಲ್ಲಿ

ಮಂಜುನಾಥರವರು ಕವಿರಾಜಮಾರ್ಗ ಕೃತಿಯಿಂದ ಹಿಡಿದು ಆಧುನಿಕ ಕಾವ್ಯದ ವರೆವಿಗೂ ಕಾವ್ಯದ ಕುರಿತ ವಿಷಯವನ್ನು ಈ ಪ್ರಸ್ತುತ ಶೀರ್ಷಿಕೆಯಡಿ ನಿರೂಪಿಸಿದ್ದಾರೆ. ಮಂಜುನಾಥ ಹಾಗೂ ಸತೀಶ್‌ಕುಮಾರ್‌ರಂತಹ ನೂರಾರು ಜನ ಸಾಹಿತ್ಯ ಪ್ರೇಮಿಗಳು ತಮಗೆ ಆಸಕ್ತಿ ಇರುವಂತಹ ಸಾಹಿತ್ಯ ಕ್ಷೇತ್ರದ ವಿಷಯಗಳನ್ನು ಬ್ಲಾಗ್‌ಗಳ ಮೂಲಕ ಹಂಚಿಕೊಳ್ಳುತ್ತಾರೆ. ಹಾಗೆಯೇ ಈ ಬ್ಲಾಗ್ ತಾಣಗಳಲ್ಲಿ ತಾವು ಬರೆಯುವುದಲ್ಲದೆ ಬೇರೆಯವರು ಬರೆದುದನ್ನು ಕಥೆ, ಕವನ, ಕಾದಂಬರಿ ಮುಂತಾದ ಸಾಹಿತ್ಯ ಪ್ರಕಾರಗಳನ್ನು ಆಸಕ್ತಿಯಿಂದ ಓದುತ್ತಾರೆ. ಈ ರೀತಿಯ ಮುಖಾಮುಖಿ ಸಾಹಿತ್ಯ ಬೆಳವಣಿಗೆಗೆ ಮತ್ತಷ್ಟು ಕಾರಣವಾಗುತ್ತದೆ. ಈ ರೀತಿಯ ಸಾಹಿತ್ಯ ಕುರಿತ ಚಟುವಟಿಕೆಗಳು ಸಾಮಾಜಿಕ ಜಾಲತಾಣಗಳ ಮೂಲಕ ನಡೆಯಲು ಹೊಸ ತಾಂತ್ರಿಕ ಅಂಶಗಳ ಆವಿಷ್ಕಾರವೇ ಕಾರಣವಾಗಿದೆ.[೪]

### ೬.೪. ವೆಬಿನಾರ್ ಸಂಸ್ಕೃತಿ

ಕನ್ನಡ ಸಾಹಿತ್ಯವು ಸಾಮಾಜಿಕ ಜಾಲತಾಣಗಳಾದ ಫೇಸ್‌ಬುಕ್, ವಾಟ್ಸಪ್, ಬ್ಲಾಗ್‌ಗಳ ಮುಖಾಂತರ ಸಮುದಾಯಕ್ಕೆ ತಲುಪಿಸುತ್ತಿರುವ ಹೊತ್ತಿನಲ್ಲೇ ಸಾಹಿತ್ಯದ ತಾಂತ್ರಿಕ ವ್ಯವಸ್ಥೆ ರೂಪುಗೊಂಡಿದೆ. ಅದೇ ವೆಬಿನಾರ್ ಸಂಸ್ಕೃತಿ. ಇತ್ತೀಚೆಗೆ ವೆಬಿನಾರ್ ವ್ಯವಸ್ಥೆ ಹೆಚ್ಚು ಪ್ರಚಲಿತವಾಗುತ್ತಿದೆ. ತಂತ್ರಜ್ಞಾನ ಬಹಳಷ್ಟು ಮುಂದುವರೆಯುತ್ತಿದೆ ಎನ್ನುವುದಕ್ಕೆ ಈ ವೆಬಿನಾರ್ ವ್ಯವಸ್ಥೆಯು ಉತ್ತಮ ಉದಾಹರಣೆಯಾಗಿದೆ. ವೆಬಿನಾರ್ ವ್ಯವಸ್ಥೆ ಹೆಚ್ಚು ಪ್ರಚಲಿತಗೊಳ್ಳುವುದಕ್ಕೆ ಒಂದು ಕಾರಣವು ಕೂಡ ಇದೆ ಎನ್ನಬಹುದು. ೨೦೨೦ ಮಾರ್ಚ್ ತಿಂಗಳಲ್ಲಿ ದೇಶದಾದ್ಯಂತ ಹಬ್ಬಿಕೊಂಡ 'ಕೊರೋನಾ' ಎಂಬ ಮಾರಣಾಂತಿಕ ರೋಗ ಪ್ರಸರಿಸಿದ್ದು ಇದರಿಂದ ಜನರು ಮುಖಾಮುಖಿಯಾಗಿ ಮಾತನಾಡುವ, ಚರ್ಚಿಸುವ ಸಂದರ್ಭ ಲಾಕ್‌ಡೌನ್‌ನಿಂದಾಗಿ ನಿಂತುಹೋಯಿತು. ಆಗ ದೇಶದ ಶೈಕ್ಷಣಿಕ ಕ್ಷೇತ್ರ ಒಳಗೊಂಡಂತೆ ಎಲ್ಲಾ ಕ್ಷೇತ್ರಗಳಲ್ಲೂ ಪರಿಣಾಮ ಬೀರಿತು. ಇದರಿಂದ ಸಾಹಿತ್ಯಿಕ ಹಾಗೂ ಸಾಮಾಜಿಕ ವಿಷಯಗಳು ಪತ್ರಿಕೆಯಲ್ಲಿ ಹಾಗೂ ಟಿ.ವಿ. ಇತರ ಸಮೂಹ ಮಾಧ್ಯಮಗಳಲ್ಲಿ ಚರ್ಚಿತವಾಗುವಂತಹ ಸಂದರ್ಭ ಬಂತು. ಇದು ಕೆಲವರಿಗೆ ಮುಖಾಮುಖಿಯಾಗುವಂತಹ ಅವಕಾಶವಾಯಿತು. ಆದುದರಿಂದ ವಿಚಾರಗಳನ್ನು ಮುಖಾಮುಖಿಯಾಗಿ ಚರ್ಚಿಸುವಂತಹ ಅವಕಾಶ ಈ ವೆಬಿನಾರ್‌ಗಳ ಮೂಲಕ ಸಾಧ್ಯವಾಯಿತು. ಸಾಹಿತ್ಯಿಕ ವಲಯಕ್ಕಂತೂ ತುಂಬಾ ಅನುಕೂಲವಾಯಿತು. ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರು, ಸಂಶೋಧಕರು ಹಾಗೂ ಇತರ ಸಂಪನ್ಮೂಲ ವ್ಯಕ್ತಿಗಳು ಸಾಹಿತ್ಯ ಕುರಿತಾದ ಚರ್ಚೆಗಳು ನಡೆಯುವಂತಹ ಅವಕಾಶ ವೆಬಿನಾರ್‌ಗಳ ಮೂಲಕ ನಡೆಯತೊಡಗಿತು. ಈ ಒಂದು ವ್ಯವಸ್ಥೆಯಲ್ಲಿ ಆಸಕ್ತಿಯುಳ್ಳುವ ಯಾರಾದರೂ ಕೂಡ ಪಾಲ್ಗೊಂಡು ಇದರ ಪ್ರಯೋಜನ ಪಡೆಯಬಹುದು. ಈ ವೆಬಿನಾರ್‌ಗಳನ್ನು ವಿಶ್ವವಿದ್ಯಾಲಯಗಳೇ ಏರ್ಪಡಿಸಬೇಕೆಂದಿಲ್ಲ. ಸಾಹಿತ್ಯ ವಿಚಾರವನ್ನು ಹಂಚಿಕೊಳ್ಳುವಂತಹ ಯಾವುದೇ ಒಂದು ನಿರ್ದಿಷ್ಟ ಸಮೂಹಗಳು ಏರ್ಪಡಿಸಬಹುದು. ಸರಕಾರಿ ಸಂಸ್ಥೆಗಳು ಹಾಗೂ ಖಾಸಗಿ ಸಂಸ್ಥೆಗಳು ಇತ್ಯಾದಿ. ಇಲ್ಲಿ

ಹೇಳುವ ಹಾಗೂ ಕೇಳುವಂತದ್ದು ಬಹುಮುಖ್ಯವಾಗಿರುವಂತಹದ್ದು. ವಿಷಯವನ್ನು ಆಲಿಸುವುದರ ಜೊತೆಗೆ ನಮಗೆ ಸಂದೇಶವಾದ ವಿಷಯಗಳ ಬಗ್ಗೆ ಪ್ರಶ್ನೆಗಳನ್ನು ಕೇಳಿ ಸಂದೇಹಗಳನ್ನು ನಿವಾಹಿಸಿಕೊಳ್ಳಬಹುದು.

ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಸಾಹಿತ್ಯದ ಉಗಮ, ಬೆಳವಣಿಗೆ, ಪ್ರಾಚೀನ ಕನ್ನಡ ಸಾಹಿತ್ಯ ಅವುಗಳ ಪ್ರಕಾರಗಳು ಮಧ್ಯಕಾಲೀನ ಕನ್ನಡ ಸಾಹಿತ್ಯ ಪರಂಪರೆ, ಆಧುನಿಕ ಕನ್ನಡ ಸಾಹಿತ್ಯ ಬೆಳವಣಿಗೆ, ಜನಪದ ಸಾಹಿತ್ಯ, ಕವಿಗಳು, ವಿಮರ್ಶಕರು, ಸಂಶೋಧನೆಗಳು, ಭಾಷಾ ವಿಜ್ಞಾನಕ್ಕೆ ಸಂಬಂಧಪಟ್ಟ ವಿಚಾರಗಳು ಹೀಗೆ ಹಲವು ವಿಚಾರಗಳ ಬಗ್ಗೆ ವೆಬಿನಾರ್ ನಡೆಸಲಾಗುತ್ತದೆ.

ವೆಬಿನಾರ್‌ಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯದಲ್ಲಿ ಹಲವಾರು ಕಾರ್ಯಕ್ರಮಗಳು ನಡೆಯುತ್ತಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ಹಸ್ತಪ್ರತಿಶಾಸ್ತ್ರ, ಸಾಹಿತ್ಯ ವಿಭಾಗ, ಭಾಷಾ ಅಧ್ಯಯನ, ಭಾಷಾಂತರ ವಿಭಾಗ, ದ್ರಾವಿಡ ಸಂಸ್ಕೃತಿ ವಿಭಾಗ ಹಾಗೂ ಸಮಾಜ ವಿಜ್ಞಾನಗಳ ನಿಕಾಯದಲ್ಲಿ ಜಾನಪದ ಅಧ್ಯಯನ, ಶಾಸನಶಾಸ್ತ್ರ ವಿಭಾಗ, ಬುಡಕಟ್ಟು ಅಧ್ಯಯನ ವಿಭಾಗಗಳು ಇವೆ. ಈ ಎಲ್ಲಾ ವಿಭಾಗಗಳಲ್ಲಿಯೂ ಆಯಾ ವಿಭಾಗಕ್ಕೆ ಸಂಬಂಧಿಸಿದಂತೆ ಒಂದೊಂದು ವಿಷಯವನ್ನು ಆಯ್ಕೆ ಮಾಡಿಕೊಂಡು ವೆಬಿನಾರ್ ಆಯೋಜನೆ ಮಾಡಲಾಗುತ್ತದೆ. ಇದರಿಂದ ಯಾವುದಾದರೂ ಒಂದು ನಿಗದಿತ ಸ್ಥಳದಲ್ಲಿ ಕೂತು ಸಂಪನ್ಮೂಲ ವ್ಯಕ್ತಿಗಳು ದೂರದಲ್ಲಿರುವಂತಹ ಸಂಶೋಧಕರಿಗೆ, ಪ್ರಾಧ್ಯಾಪಕರಿಗೆ ಅಥವಾ ವಿಷಯ ಆಸಕ್ತಿಯುಳ್ಳವರಿಗೆ ವಿಷಯಗಳನ್ನು ಹಂಚಿಕೊಳ್ಳಬಹುದಾಗಿದೆ. ಈ ಒಂದು ದೆಸೆಯಲ್ಲಿ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ. ವೀರೇಶ ಬಡಿಗೇರರು ವಿಶ್ವವಿದ್ಯಾಲಯದಲ್ಲಿ ಮೊಟ್ಟ ಮೊದಲಿಗೆ ಸಂಶೋಧನಾ ವಿದ್ಯಾರ್ಥಿಗಳಿಗೆ ಆನ್‌ಲೈನ್ ತರಗತಿ ತೆಗೆದುಕೊಂಡಿದ್ದರು. ಹಾಗೆಯೇ ನಾಡಿನ ಇತರ ವಿದ್ವಾಂಸರ ಜೊತೆಗೆ ಸಾಹಿತ್ಯದ ವಿಷಯಗಳನ್ನು ಹಂಚಿಕೊಂಡರು. ಹಾಗೆಯೇ ವಿದ್ವಾಂಸರಿಂದ ತಮ್ಮ ಸಂಶೋಧನಾ ವಿದ್ಯಾರ್ಥಿಗಳಿಗೆ ಸಾಹಿತ್ಯ ಸಂಶೋಧನೆಗೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸಿದರು. ಇದರಿಂದ ಸಂಶೋಧನಾ ವಿದ್ಯಾರ್ಥಿಗಳಿಗೆ ಸಾಕಷ್ಟು ಅನುಕೂಲವಾಯಿತು. ಡಾ. ವೀರೇಶ ಬಡಿಗೇರ ಅವರ ಆನ್‌ಲೈನ್ ತರಗತಿಯಿಂದ ಪ್ರಾರಂಭವಾಗಿ ವಿಶ್ವವಿದ್ಯಾಲಯದಲ್ಲಿ ರಾಜ್ಯಮಟ್ಟದ, ರಾಷ್ಟ್ರಮಟ್ಟದ ವೆಬಿನಾರ್‌ಗಳು ಸಾಹಿತ್ಯಿಕ ವಿಚಾರಗಳನ್ನು ಕುರಿತು ನಡೆದವು. ಅಂತಹ ವೆಬಿನಾರ್‌ಗಳಲ್ಲಿ ಕೆಲವೊಂದನ್ನು ಗುರುತಿಸಲಾಗಿದೆ.

ಭಾಷಾಂತರ ಕೇಂದ್ರ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶ (ಐ.ಕ್ಯೂ.ಎ.ಸಿ.) ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ಇವರ ಸಂಯುಕ್ತಾಶ್ರಯದಲ್ಲಿ ಒಂದು ದಿನದ ರಾಷ್ಟ್ರೀಯ ವೆಬಿನಾರ್ 'ಭಾಷಾಂತರದ ಇತ್ತೀಚಿನ ಪ್ರವೃತ್ತಿಗಳು' ಎಂಬ ವಿಷಯದ ಕುರಿತು ನಡೆಯಿತು. ಈ ವೆಬಿನಾರ್‌ನಲ್ಲಿ ಎಸ್.ಆರ್. ವಿಜಯಶಂಕರ್, ಖ್ಯಾತ ಕನ್ನಡ ಸಾಹಿತ್ಯ

ವಿಮರ್ಶಕರು, ಬೆಂಗಳೂರು, ಸಂಚಾಲಕರಾಗಿ ಡಾ. ಎ. ಮೋಹನ ಕುಂಟಾರ್, ನಿರ್ದೇಶಕರು, ಭಾಷಾಂತರ ಕೇಂದ್ರ ಮತ್ತು ಐಕ್ಯೂಎಸಿ ಕನ್ನಡ ವಿಶ್ವವಿದ್ಯಾಲಯ, ಹಂಪಿ. ದಿನಾಂಕ ೦೮.೦೭.೨೦೨೦ರಂದು ಕನ್ನಡ ವಿಶ್ವವಿದ್ಯಾಲಯ ಹಂಪಿ, ಡಾ. ರಾಮಮನೋಹರ ಲೋಹಿಯಾ ಅಧ್ಯಯನ ಪೀಠ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶ ಸಂಯುಕ್ತಾಶ್ರಯದಲ್ಲಿ 'ಸಮಾಜವಾದ ಮತ್ತು ಲೋಹಿಯಾವಾದ: ಪ್ರಸ್ತುತ ಸಂದರ್ಭ' ಎಂಬ ವಿಷಯದ ಕುರಿತು ಒಂದು ದಿನದ ರಾಷ್ಟ್ರಮಟ್ಟದ ವೆಬಿನಾರ್‌ನ್ನು ಆಯೋಜಿಸಲಾಗಿತ್ತು. ಸಂಪನ್ಮೂಲ ವ್ಯಕ್ತಿಯಾಗಿ ಡಾ. ತಾರಕೇಶ್ವರ್ ವಿ.ಬಿ. ಆಗಿದ್ದರು. ದಿನಾಂಕ ೦೫.೦೮.೨೦೨೦ರಂದು ಭಾಷಾಂತರ ಅಧ್ಯಯನ ವಿಭಾಗ ಮತ್ತು ಆಂತರಿಕ ಗುಣಮಟ್ಟ ಭರವಸೆ ಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಇವರ ಸಂಯುಕ್ತಾಶ್ರಯದಲ್ಲಿ 'ಮೂಲಕ ಭಾಷಾಂತರಗಳು' ಎಂಬ ವಿಷಯದ ಕುರಿತು ಒಂದು ದಿನದ ವೆಬಿನಾರ್‌ನ್ನು ಆಯೋಜಿಸಲಾಗಿತ್ತು. ಇದು ಕೂಡ ರಾಷ್ಟ್ರೀಯ ಮಟ್ಟದ ವೆಬಿನಾರ್ ಆಗಿದ್ದು ಪ್ರೊ.ಓ.ಎಲ್. ನಾಗಭೂಷಣಸ್ವಾಮಿ, ಪ್ರಸಿದ್ಧ ಅನುವಾದಕರು, ಬೆಂಗಳೂರು ಇವರು ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ದಿನಾಂಕ ೧೪.೦೯.೨೦೨೦ರಂದು ನಂದಿನ ಶಿಕ್ಷಣ ಮಹಾವಿದ್ಯಾಲಯ, ರಾಯಚೂರು ಇಲ್ಲಿ ಸಂಶೋಧನೆ: ಇತ್ತೀಚಿನ ಒಲವು ನಿಲುವುಗಳು ಎಂಬ ವಿಷಯದ ಕುರಿತು ರಾಷ್ಟ್ರಮಟ್ಟದ ವೆಬಿನಾರ್ ನಡೆಯಿತು. ಈ ವೆಬಿನಾರ್‌ನಲ್ಲಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ. ಅಮರೇಶ ನುಗಡೋಣಿಯವರು ಸಂಪನ್ಮೂಲ ವ್ಯಕ್ತಿಯಾಗಿದ್ದರು. ಇಂತಹ ಹಲವಾರು ವೆಬಿನಾರ್ ಇಂದು ನಡೆಯುತ್ತಿವೆ. ಇದರಿಂದ ಸಾಹಿತ್ಯ ಕ್ಷೇತ್ರಕ್ಕೆ ಸಾಕಷ್ಟು ಅನುಕೂಲವಿದೆ.

ವೆಬಿನಾರ್ ವ್ಯವಸ್ಥೆಯು ಸಾಹಿತ್ಯಿಕ ವಿಚಾರ ವಿನಿಮಯ ಮಾಡಿದಷ್ಟೇ ಅಲ್ಲಿ ಸಾಮಾಜಿಕ ವಿಷಯಗಳಾದಂತಹ ಬಡತನ, ನಿರುದ್ಯೋಗ, ಸ್ತ್ರೀ ಅಸಮಾನತೆ, ಸ್ತ್ರೀ ಶೋಷಣೆ, ಸ್ತ್ರೀಯರ ಏಳಿಗೆಗೆ ಕಾರಣವಾಗುವಂತಹ ಅಂಶಗಳು, ಅಲಕ್ಷಿತ ಸಮುದಾಯದ ಸಮಸ್ಯೆಗಳು ಇಂತಹ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಒಂದೊಂದು ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರಗತಿಪರ ಚಿಂತನೆ ಅಥವಾ ಕಾರ್ಯದಲ್ಲಿ ತೊಡಗಿರುವಂತಹ ಯಾವುದೇ ವ್ಯಕ್ತಿ, ಸಂಘ-ಸಂಸ್ಥೆಗಳು ಈ ವೆಬಿನಾರ್‌ನ್ನು ಏರ್ಪಡಿಸಬಹುದು. ನಾಡಿನಾದ್ಯಂತ ಈ ರೀತಿಯ ವೆಬನಾರ್‌ಗಳು ಈಗಾಗಲೇ ಸಾಕಷ್ಟು ನಡೆಯುತ್ತಿವೆ.

ಏಕಕಾಲದಲ್ಲಿ ಹಲವಾರು ಜನರಿಗೆ ಒಂದು ನಿದಿಷ್ಟವಾದ ವಿಷಯವನ್ನು ತಲುಪಿಸುವಂತಹ ಕಾರ್ಯವು ಈ ವೆಬಿನಾರ್ ಎಂಬ ತಾಂತ್ರಿಕ ವ್ಯವಸ್ಥೆಯಿಂದ ನಡೆಯುತ್ತಿದೆ. ಇದರಿಂದ ಕೇಳುಗರಿಗೆ ಜ್ಞಾನವನ್ನು ಹೆಚ್ಚಿಸುತ್ತದೆ. ಇಂತಹ ಹಲವಾರು ಅನುಕೂಲಗಳು ಈ ವೆಬಿನಾರ್ ವ್ಯವಸ್ಥೆಯಿಂದ ಸಾಧ್ಯವಾಗುತ್ತಿದೆ.

**ಕೊನೆಟಿಪ್ಪಣಿಗಳು**

೧. ಡಾ. ಎಂ.ವೇದಾಂತ ಏಳಂಜಿ, ಕನ್ನಡ ಸಾಹಿತ್ಯ ಮತ್ತು ಫೇಸ್‌ಬುಕ್, ಪು. ೧೨೧, ೨೦೧೮

೨. ವಿಹಂಗಮ, (ಸಂ) ಡಾ. ಬಿ.ಡೆಂಗನವರ, ಪು. ೧೨೨, ೨೦೧೮

೩. ಅಂತರಜಾಲ ಮಾಹಿತಿ

೪. ಅಂತರಜಾಲ ಮಾಹಿತಿ

## ಅಧ್ಯಾಯ: ಏಳು

# ಸಮಾರೋಪ

ಕನ್ನಡ ಸಾಹಿತ್ಯದ ಓದು, ಬರಹ, ಪ್ರಸರಣ ತನ್ನದೇ ಆದ ವಿವಿಧ ವಿಧಾನಗಳನ್ನು ಆಯಾ ಕಾಲಕ್ಕೆ ಅನುಗುಣವಾಗಿ ರೂಪಿಸಿಕೊಂಡು ಬಂದಿದ್ದನ್ನು ಚರಿತ್ರೆಯಿಂದ ತಿಳಿದಿದ್ದೇವೆ. ಓದು ಬರಹಕ್ಕೆ ಲೌಕಿಕ ಮತ್ತು ಅಲೌಕಿಕ ಎನ್ನುವ ಎರಡು ಆಯಾಮಗಳಿದ್ದವು.

'ಅರವತ್ತು ಮೂವರ ಮಹಿಮೆಗಳನಿಂತು
ಬರೆದೋದಿ ಕೇಳಿ ಪೇಳಿ ಪಾಡಿದವರಿಗೆ
ನಿಜಸುಖಂ ದೊರೆವುದಿಹಪರದೊಳು'

'ಇದನು ಬರೆದೋದಿ ಕೇಳಿದವರರ್ಥಂಗಳಂ
ಮುದದಿಂದೆ ಪೇಳಿದವರು ಮೂವರು ಶಂಭು
ಪದವೆ ತಾನಾಗಿ ಸುಖಮಿರ್ಕುಂ'

ಕನ್ನಡ ಹಸ್ತಪ್ರತಿಗಳಲ್ಲಿ ಕಾಣುವ ಇಂತಹ ಹಲವಾರು ಉಲ್ಲೇಖಗಳು ಕನ್ನಡ ಸಂಸ್ಕೃತಿಯು ಕಂಡುಕೊಂಡಿದ್ದ ಓದಿನ ಬಹು ಬಗೆಗಳನ್ನು ಬರೆಯುವ ಕ್ರಿಯಾಶೀಲತೆಯ ವಿಧಾನಗಳನ್ನು ಓದು ಬರಹದ ಭಿನ್ನ ಪಾತಳಿಯನ್ನು ಗ್ರಹಿಕೆಗೆ ತರುತ್ತವೆ. ಇವು ಅಕ್ಷರ ಮತ್ತು ಶಾಬ್ದಿಕ ಪಠ್ಯಗಳ ಪರಿಕಲ್ಪನೆಗಳನ್ನು ಭಿನ್ನ ಬಗೆಯಲ್ಲಿ ನಿರ್ವಚಿಸುತ್ತವೆ. ಅಕ್ಷರ ಮತ್ತು ಶಾಬ್ದಿಕ ಪಠ್ಯರೂಪಗಳು ಆಧುನಿಕ ತಂತ್ರಜ್ಞಾನದ ಮೂಲಕ ಅಕ್ಷರದ ನಿರ್ದಿಷ್ಟ ಭೌದ್ಧಿಕ ಗುರುತುಗಳನ್ನು ಮೀರಿ ನಿಲ್ಲುವ ಆಯಾಮಗಳನ್ನು ನನ್ನ ಅಧ್ಯಯನದಲ್ಲಿ ಪ್ರಮುಖವಾಗಿ ಗುರುತಿಸಿದ್ದೇನೆ. ತಂತ್ರಜ್ಞಾನವು ಬಂಡವಾಳಶಾಹಿ ಫಲಿತವಾದರೂ ಕನ್ನಡ ಸಾಹಿತ್ಯ ಸಂಸ್ಕೃತಿ ಅದರೊಂದಿಗೆ ಮಾಡಿಕೊಂಡ ಹೊಂದಾಣಿಕೆಯ ಸಾರ್ಥಕ ಮತ್ತು ಸವಾಲಿನ ಸಂಗತಿಗಳನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

ಹಸ್ತಪ್ರತಿಗಳು ಅದರಿಂದ ಮುದ್ರಿತಗೊಂಡ ಪುಸ್ತಕಗಳ ಆಯುಷ್ಯ ಮುಗಿದೇ ಹೋಯಿತು ಎನ್ನುವ ಆತಂಕದಲ್ಲಿರುವ ಹೊತ್ತಿಗೆ ಕಂಪ್ಯೂಟರಿನಿಂದ ತೆರೆದುಕೊಂಡ ಹೊಸ ಸಾಧ್ಯತೆಗಳು ಕನ್ನಡಕ್ಕೆ ಹೊಸ ಜಗತ್ತನ್ನೇ ತೆರೆದಿಟ್ಟವು. ಕಂಡರಣೆ, ಉತ್ತೀರ್ಣ ಕೊರೆಯುವುದು, ಬರೆಯುವುದು, ಮೂಡಿಸುವುದು ಈ ಕ್ರಿಯೆಗಳು ಬರವಣಿಗೆಯ ವಿವಿಧ ಅವಸ್ಥಾಂತರವನ್ನು ಹೇಳುವ

ಪರಿಭಾಷೆಗಳಾಗಿವೆ. ಬರವಣಿಗೆ ಭಾರವಾದ ವಸ್ತುವಿನಿಂದ ಹಗುರವಾದ ವಸ್ತುವಿನ ಕಡೆ ಸಾಗಿದ ಅದೇ ಹೊತ್ತಿಗೆ ಮೂರ್ತವಾಗಿದ್ದ ಬರವಣಿಗೆ ಅಮೂರ್ತ(ಡಿಜಿಟಲೀಕರಣ)ದತ್ತ ವಾಲಿದ ಬಹುದೊಡ್ಡ ಸ್ಥಿತ್ಯಂತರವನ್ನು ಹೇಳುತ್ತವೆ. ಅಕ್ಷರವನ್ನು ಅವಿನಾಶಿ ಎಂದೂ, ಸರಸ್ವತಿ ಎಂದೂ, ಗಣಪತಿ ಎಂದೂ, ತನ್ನ ಕರ್ಮಗಳ ಪರಿಹಾರಕ್ಕೆ ಸಾಧನವೆಂದೂ ತನ್ನ ಉನ್ನತಿಗೆ ಸಾಧನವೆಂದು ನಂಬಿದ ಬರವಣಿಗೆ ಸಾಂಪ್ರದಾಯಿಕ ಮತ್ತು ಆಧುನಿಕ ಮನಸ್ಸುಗಳಲ್ಲಿ ಹುಟ್ಟಿಸಿದ ತಲ್ಲಣ ಮತ್ತು ಕುತೂಹಲಗಳ ಚರಿತ್ರೆಯೇ ಸಾಹಿತ್ಯ ಮತ್ತು ತಂತ್ರಜ್ಞಾನದ ಚರಿತ್ರೆಯಾಗಿದೆ. ತಂತ್ರಜ್ಞಾನವೆಂದರೆ ಆಧುನಿಕ ಯಂತ್ರಜ್ಞಾನವೆಂದು ಭಾವಿಸದೆ ಅದನ್ನೊಂದು ಸಾಂಸ್ಕೃತಿಕ ಪ್ರಕ್ರಿಯೆಯನ್ನಾಗಿ ಇಲ್ಲಿ ಭಾವಿಸಿದ್ದೇನೆ. ಮನಸ್ಸು ಮತ್ತು ಮೆದುಳಿನ ಅನುಸಂಧಾನವನ್ನಾಗಿ ಭಾವಿಸಿದ್ದೇನೆ. ಕಾರಣ ಸಾಹಿತ್ಯ ಮತ್ತು ತಂತ್ರಜ್ಞಾನವನ್ನು ಪರಸ್ಪರ ಎದುರಾಳಿಯಾಗಿಸಿ ನೇತ್ಯಾತ್ಮಕವಾದ ವಿಚಾರಗಳನ್ನೇ ಮುಂದು ಮಾಡದೆ ಅವು ಪರಸ್ಪರ ಬೆರೆತು ಹುಟ್ಟಿಸಿದ ಅರ್ಥಪೂರ್ವ ಬೆರಗನ್ನು ಸಾಹಿತ್ಯದ ಹೊಸ ಮಜಲುಗಳನ್ನು ಅರಿಯುವ ಯತ್ನ ಮಾಡಿದ್ದೇನೆ.

ಚಿತ್ರರೂಪ ಸಂಕೇತ ಮತ್ತು ಮೌಖಿಕ ರೂಪದಲ್ಲಿದ್ದಂತಹ ಸಂಗತಿಗಳು ಮೂರ್ತರೂಪ ಪಡೆದಿದ್ದು ಬರಹರೂಪದಿಂದ. ಇಂತಹ ಬರಹ ಕ್ರಿಯೆಗೆ ನೆರವಾದಂತಹ ಕುಶಲಕರ್ಮಿಗಳ ಜ್ಞಾನ ಮತ್ತು ತಾಂತ್ರಿಕ ಕೌಶಲ್ಯಕ್ರಿಯೆಯನ್ನು ಇಲ್ಲಿ ಪ್ರಮುಖವಾಗಿ ಗುರುತಿಸಲಾಗಿದೆ. ಸಾಹಿತ್ಯವೆನ್ನುವುದು ಕೆಲವರಿಗೆ ಮಾತ್ರ ಎನ್ನುತ್ತಿದ್ದ ಸಂದರ್ಭದಿಂದ ಅದು ಸಮುದಾಯದೆಡೆಗೆ ತಲುಪುವಂತೆ ಮಾಡಿದ ಅಂದಿನ ಅಕ್ಷರ ಶಿಲ್ಪಗಳ ಪಾತ್ರವನ್ನು ಇಲ್ಲಿ ಪ್ರಧಾನವಾಗಿ ಗುರುತಿಸಿದ್ದೇನೆ.

ಸಾಹಿತ್ಯ ರಚನೆಯಾದ ನಂತರ ಅದು ಪೀಳಿಗೆಯಿಂದ ಪೀಳಿಗೆಗೆ ಉಳಿಯ ಬೇಕಾದರೆ ಅವುಗಳ ಸಂರಕ್ಷಣೆ ಮುಖ್ಯ. ಅವುಗಳು ನಾಶವಾಗದಂತೆ ಸುಮಾರು ವರ್ಷ ಬಾಳಿಕೆ ಬರುವಂತೆ ಅಂದಿನ ಸಂದರ್ಭದಲ್ಲಿಯೇ ಇದ್ದ ದೇಶಿ ತಂತ್ರಜ್ಞರಾದ ದೇಸೀ ಕುಶಲಕರ್ಮಿಗಳ ತಾಂತ್ರಿಕ ಜ್ಞಾನದ ನೆಲೆಗಳನ್ನು ಗುರುತಿಸಲಾಗಿದೆ.

### ಅಧ್ಯಯನದ ಫಲಿತಗಳು

ಬಹಳ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಸಾಮುದಾಯಿಕ ಶ್ರೇಣೀಕರಣವಿದ್ದಂತೆ ಭಾಷಾ ಶ್ರೇಣೀಕರಣವೂ ನೆಲೆಯೂರಿತ್ತು. ಅಂದಿನ ಸಂದರ್ಭದಲ್ಲೂ ಕೂಡ ಜಾತಿ, ಲಿಂಗ ಭಾಷಾ ತಾರತಮ್ಯವಿತ್ತು. ಸಂಸ್ಕೃತವು ಭಾರತದಾದ್ಯಂತ 'ದೇವಭಾಷೆ' ಎಂಬ ಬಿರುದಿನಿಂದ ಇತರ ಪ್ರಾದೇಶಿಕ ಭಾಷೆಗಳ ನಾಶಕ್ಕೆ ಅಥವಾ ಕೀಳರಿಮೆಗೆ ಕಾರಣವಾಗಿತ್ತು. ಪ್ರಾಚೀನ ಕಾಲದಲ್ಲಿ ಇಂತಹ ಭಾಷಾ ಪೈಪೋಟಿಯ ಪರಿಸ್ಥಿತಿಯಲ್ಲಿಯೂ ಕನ್ನಡ ಭಾಷೆ ಸಾಹಿತ್ಯಗಳು ಬೆಳವಣಿಗೆಯಾದುದು ಒಂದು ಗಮನಾರ್ಹ ಸಂಗತಿಯೇ ಸರಿ. ಈ ಕನ್ನಡ ಸಾಹಿತ್ಯ ಬೆಳವಣಿಗೆಗೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ತಂತ್ರಜ್ಞಾನವು ಒಂದು ತಂತ್ರಜ್ಞಾನವು ಸಾಹಿತ್ಯ ಬೆಳವಣಿಗೆಗೆ ಪ್ರಮುಖವಾದ ಪಾತ್ರವಹಿಸಿದೆ ಎಂಬುದನ್ನು ಈ ಅಧ್ಯಯನದಿಂದ ತಿಳಿಯುವ ಪ್ರಯತ್ನ ಮಾಡಿದ್ದೇನೆ.

ನಾನು ನನ್ನ ಅಧ್ಯಯನವನ್ನು ಅರ್ಥಮಾಡಿಕೊಳ್ಳಲು ನಾಲ್ಕು ಮಜಲುಗಳಲ್ಲಿ ಅದನ್ನು ವಿಭಾಗೀಕರಿಸಿಕೊಂಡಿದ್ದೇನೆ. ಸಾಹಿತ್ಯ ಮತ್ತು ತಂತ್ರಜ್ಞಾನಗಳಿಗೆ ಅದರದ್ದೇ ಆದ ನಿರ್ದಿಷ್ಟ ಹುಟ್ಟಿನ ಉದ್ದೇಶಗಳಿದ್ದಾಗಲೂ ಅದನ್ನು ಮೀರಿ ಅವೆರಡೂ ಕನ್ನಡದ ಸಾಂಸ್ಕೃತಿಕ ಮನಸ್ಸನ್ನು ರೂಪಿಸುವಲ್ಲಿ ನಡೆದುಕೊಂಡ ರೀತಿಗಳನ್ನು ಬಹುಮುಖ್ಯವಾಗಿ ಗುರುತಿಸಲು ಪ್ರಯತ್ನಿಸಿದ್ದೇನೆ.

ಕಲ್ಲು, ಲೋಹದಂತಹ ಭಾರವಾದ ಮತ್ತು ಸರಿಸಲು ಅಸಾಧ್ಯವಾದ ಮಾಧ್ಯಮಗಳಲ್ಲಿ ಕಂಡರಿಸುವುದರಿಂದ ಹಿಡಿದು (ಶಿಲಾಶಾಸನ, ಕಬ್ಬಿಣ ಇತ್ಯಾದಿ) ಭಾರವಲ್ಲದ ಮತ್ತು ಸಾಗಿಸಬಹುದಾದ ಲೇಖನ ಸಾಮಗ್ರಿಗಳಿಂದ ತಾಳೆಗರಿ, ಭೂರ್ಜ್ವಪತ್ರ, ಬಟ್ಟೆ, ಚರ್ಮ, ತಾಮ್ರಪಟ, ಕಡತ, ಕಾಗದ ಮುಂತಾದ ಉತ್ಕೀರ್ಣಿಸುವ, ಕೊರೆಯುವ, ಗೀರುವ, ಬರೆಯಬಹುದಾದ ಮಾಧ್ಯಮಗಳ ಬಳಕೆಯವರೆಗಿನ ಹಂತ ದೇಸೀ ತಾಂತ್ರಿಕತೆಯ ಹಂತವಾಗಿದೆ. ಲೇಖನ ಸಾಮಗ್ರಿಗಳನ್ನು ತಾವೇ ತಯಾರಿಸಿ, ಬರೆಯುವ, ಬರೆಯಿಸುವ ಈ ತಾಂತ್ರಿಕತೆ ಶ್ರಮ ಸಮುದಾಯಗಳ ಉಸಿರಿನಿಂದ ಹುಟ್ಟಿರುವಂಥದ್ದು. ಬರಹಪೂರ್ವ ಮತ್ತು ಬರಹ ಹಾಗೂ ಬರಹದ ನಂತರ ಭಾಗವಹಿಸುತ್ತಿದ್ದ ಸಮುದಾಯಗಳ ಜ್ಞಾನ ಬಹಳಷ್ಟು ಚರ್ಚೆಯಾಗಿಲ್ಲ. ಜಾತಿಯವರು ಬಡಿಗ, ಕಮ್ಮಾರ, ಅಕ್ಕಸಾಲಿ, ವಸ್ತ್ರದ, ಚಿತ್ರಗಾರ, ಅಳಕದವ ಇಂತಹ ನೆಲಮೂಲ ಸಮುದಾಯಗಳ ತಾಂತ್ರಿಕ ಜ್ಞಾನ ಸಂಸ್ಕೃತಿಯನ್ನು ಇಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ. ಇದನ್ನು ಆಧುನಿಕ ಪೂರ್ವ ತಂತ್ರಜ್ಞಾನವೆಂದು ಪರಿಭಾವಿಸಿದ್ದೇನೆ.

ಎರಡನೆಯ ಗ್ರಹಿಕೆ ಎಂದರೆ ಆಧುನಿಕ ಮುದ್ರಣ ತಂತ್ರಜ್ಞಾನ ವಿವಿಧ ರೀತಿಯ ಕಾಗದಗಳು, ಮುದ್ರಣ ಯಂತ್ರಗಳು ಒತ್ತುತ್ತಿದ್ದ ಕ್ರಿಯೆಯಿಂದ (ಪಡಿಯಚ್ಚು) ಅಚ್ಚಿನ ಮೊಳೆಗಳ ಶೋಧ ಎರಕದಿಂದ ತಯಾರಿಸುತ್ತಿದ್ದ ರೀತಿ, ಈ ಪ್ರಕ್ರಿಯೆಯಲ್ಲಿ ಜಗತ್ತಿನಾದ್ಯಂತ ಮುಂಚೂಣಿಯಲ್ಲಿದ್ದ ಕಮ್ಮಾರ, ಅಕ್ಕಸಾಲಿ, ಕಂಚುಗಾರರಂತಹ ಪಾಂಚಾಳ ಸಮುದಾಯಗಳು ಅಚ್ಚು ವೇಳೆ ಜ್ಞಾನದ ಚರ್ಚಿಸಿದ್ದೇನೆ. ಮುದ್ರಣ ತಂತ್ರಜ್ಞಾನ ಎಂದ ಕೂಡಲೇ ಮಿಷಿನರಿಗಳ ಬಗ್ಗೆಯೇ ಊರು ಹೊಡೆದಂತೆ ಮಾತನಾಡುತ್ತ ಬಂದ ಜಗತ್ತು ಅಚ್ಚುಮೊಳೆಗಳಿಲ್ಲದೆ ಒದ್ದಾಡಿದ ಸಂದರ್ಭ. ಅಚ್ಚುಮೊಳೆಗಳನ್ನು ಅನಂತಾಚಾರ್ಯರಂತಹ ಸ್ಥಳೀಯ ಕಂಬಾರನೊಬ್ಬ ತಯಾರಿಸಿಕೊಡುವ ಸಂಗತಿಗಳು ನಮ್ಮ ಅಧ್ಯಯನದ ಭಾಗವಾಗಿಯೇ ಇಲ್ಲ. ದಕ್ಷಿಣ ಮತ್ತು ಪಶ್ಚಿಮ ಭಾರತಗಳ ಅಚ್ಚುಮೊಳೆ ಬೆಳವಣಿಗೆಗೆ ಅನಂತಾಚಾರ್ಯರಂತಹ ಸ್ಥಳೀಯ ಕುಶಲಕರ್ಮಿಗಳು ನೀಡಿದ ತಾಂತ್ರಿಕ ನೈಪುಣ್ಯತೆಯನ್ನು ಶೋಧಿಸಿದ್ದೇನೆ.

* ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿರುವ ಆಧುನಿಕ ತಂತ್ರಜ್ಞಾನ ವೆಂದರೆ ಏನು ಎಂಬುದನ್ನು ವ್ಯಾಖ್ಯಾನಿಸಲಾಗಿದೆ. ಭಾರತೀಯ ಸಂದರ್ಭದಲ್ಲಿದ್ದಂತಹ ಪಾರಂಪರಿಕ ತಾಂತ್ರಿಕತೆ ಅಥವಾ ತಂತ್ರಜ್ಞಾನ ಪ್ರಾಚೀನತೆಯ ಕುರಿತು ವಿಶ್ಲೇಷಿಸಲಾಗಿದೆ. ಶಬ್ದ ಅಥವಾ ಧ್ವನಿ ರೂಪದಲ್ಲಿದ್ದದ್ದು ಬರಹರೂಪವಾಗಿ ಪರಿವರ್ತನೆಗೊಂಡ ತಾಂತ್ರಿಕ ಕ್ರಿಯೆಯ ವಿಧಾನಗಳನ್ನು ಕಂಡುಕೊಳ್ಳಲಾಗಿದೆ.

* ಕನ್ನಡ ಸಾಹಿತ್ಯ ರಚನೆ ಮತ್ತು ಸಂರಕ್ಷಣೆಯನ್ನು ಕೌಶಲ್ಯಯುತವಾಗಿ ಕಾರ್ಯನಿರ್ವಹಿಸಿದ ಪಾಂಚಾಳದಂತಹ ಶ್ರಮ ಸಮುದಾಯಗಳ ವಿವೇಕವನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಆ ಮೂಲಕ ಮುದ್ರಣ ತಂತ್ರಜ್ಞಾನದಿಂದ ಕನ್ನಡ ಸಾಹಿತ್ಯ ಪಡೆದುಕೊಂಡ ತನ್ನತನದ ಆಯಾಮಗಳನ್ನು ಗುರುತಿಸಿದ್ದೇನೆ.

* ಮುದ್ರಣ ತಂತ್ರಜ್ಞಾನದೊಂದಿಗೆ ಬಂದ ದೃಶ್ಯ ಮತ್ತು ಮಾಧ್ಯಮ ತಂತ್ರಜ್ಞಾನವು ಕನ್ನಡ ಸಾಹಿತ್ಯದ (ರೇಡಿಯೋ ಮತ್ತು ಟೆಲಿವಿಷನ್) ಬೆಳವಣಿಗೆಗೆ ನೀಡಿದ ಕೊಡುಗೆಯನ್ನು ಗುರುತಿಸಿದ್ದೇನೆ. ರೇಡಿಯೋ ಮತ್ತು ಟೆಲಿವಿಷನ್ ಆವಿಷ್ಕಾರವು ಕನ್ನಡ ಸಾಹಿತ್ಯ ಮತ್ತು ಸಾಹಿತಿಗಳನ್ನು ಜನಮನಕ್ಕೆ ಪರಿಚಯಿಸಿದ ವಿಧಾನವನ್ನು ಇಲ್ಲಿ ಚರ್ಚಿಸಿದ್ದೇನೆ.

* ಲಿಪಿಯಿಂದ ಮುದ್ರಣಕ್ಕೆ ಅಥವಾ ದೃಷ್ಯಕ್ಕೆ ಅಥವಾ ಶ್ರವ್ಯ ಪಾತಳಿಗೆ ಪಲ್ಲಟವಾಗುವ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕ ಅನುಭವಿಸಿ ಆತಂಕ ಮತ್ತೆ ಬೆರಗನ್ನು ಗುರುತಿಸಿದ್ದೇನೆ. ಅಲ್ಲದೆ ಕೇಳುವವ ಮತ್ತು ಹೇಳುವವ ಎನ್ನುವ ಭೌತಿಕ ಚಹರೆಗಳು ದೃಶ್ಯ ಮತ್ತು ಶ್ರವ್ಯ ಮಾಧ್ಯಮಗಳಿಂದ ಪಡೆದುಕೊಂಡ ಹೊಸ ವ್ಯಾಖ್ಯಾನವನ್ನು ಗ್ರಹಿಸಿದ್ದೇನೆ.

* ನನ್ನ ಮೂರನೆಯ ಪ್ರಮುಖ ಗ್ರಹಿಕೆ ಎಂದರೆ ಕಂಪ್ಯೂಟರ್ ತಂತ್ರಜ್ಞಾನದಿಂದಾದ ಸಾಹಿತ್ಯ, ಸೃಷ್ಟಿ, ದಾಖಲಾತಿ, ಪ್ರಸರಣ ಕಾರ್ಯವನ್ನು ಗುರುತಿಸಲಾಗಿದೆ. ಕನ್ನಡದ ಹಸ್ತಪ್ರತಿಗಳಂತಹ ಆಕರಗಳ ರಕ್ಷಣೆಗೆ ಡಿಜಿಟಲೀಕರಣ ಕ್ರಿಯೆಯಿಂದ ಆಗಿರುವ ಅನುಕೂಲವನ್ನು ಗುರುತಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತಹ ಸಾವಿರಾರು ಹಸ್ತಪ್ರತಿಗಳ ಸಂಗ್ರಹ ಮತ್ತು ಅವುಗಳ ಸಂರಕ್ಷಣೆ ಸಂಬಂದಪಟ್ಟಂತೆ ನಡೆದಿರುವ ಡಿಜಿಟಲೀಕರಣ ಪ್ರಕ್ರಿಯೆಗಳನ್ನು ನಿದರ್ಶನವಾಗಿ ನೀಡಿದ್ದೇನೆ. ಹಸ್ತಪ್ರತಿಗಳನ್ನು ಕಂಪ್ಯೂಟರೀಕರಣ ಮತ್ತು ಡಿಜಟಲೀಕರಣ ಮಾಡುವ ಮೂಲಕ ರಾಷ್ಟ್ರಮಟ್ಟದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೊಂದು ಹೆಸರು ತಂದುಕೊಟ್ಟಿರುವಂತಹ ಪ್ರಾಧ್ಯಾಪಕರಾದ ಡಾ.ವೀರೇಶ ಬಡಿಗೇರ ಅವರ ತಾಂತ್ರಿಕ ಕಾರ್ಯವನ್ನು ವಿಶೇಷವಾಗಿ ಗುರುತಿಸಿದ್ದೇನೆ.

* ಸಾಹಿತ್ಯ ಮತ್ತು ತಂತ್ರಜ್ಞಾನಗಳು ಎರಡೂ ಮನುಷ್ಯನ ಸೃಜನಶೀಲ ಆವಿಷ್ಕಾರಗಳು, ಸಾಹಿತ್ಯದ ಸಂವೇದನಶೀಲವಾದದ್ದು, ಯಂತ್ರ ಕೌಶಲ್ಯತೆ ಮತ್ತು ವೇಗದ ಸ್ವರೂಪದ್ದು. ಕವಿಕೇಂದ್ರಿತ ಸಾಹಿತ್ಯದ ಗ್ರಹಿಕೆಗಳು ಯಂತ್ರಕೇಂದ್ರಿತ ಏಕಮೂಲ ಚಿಂತನೆಗಳು ಹುಟ್ಟಿಸಿದ್ದ ಪರಸ್ಪರ ಎದುರಾಳಿತನದ ಪ್ರಶ್ನೆಗಳನ್ನು ನನ್ನ ಅಧ್ಯಯನದಲ್ಲಿ ಬರಹ ಮತ್ತು ತಂತ್ರಜ್ಞಾನವನ್ನು ನಾನು ಬೆವರು ಬರದವರ ಅಭಿವ್ಯಕ್ತಿಯಾಗಿ ನೋಡದೆ ಬೆವರು ಬಸಿಯುವವರ ವಿವೇಕವನ್ನಾಗಿ ನೋಡಿದ್ದೇನೆ. ಆ ಮೂಲಕ ಸಾಹಿತ್ಯ ಮತ್ತು ತಾಂತ್ರಿಕತೆಗಿದ್ದ ಸಮುದಾಯದ ಅಗತ್ಯವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಿದ್ದೇನೆ.

ಒಟ್ಟಿನಲ್ಲಿ ತಂತ್ರಜ್ಞಾನವೆಂಬುದು ಆಯಾ ಕಾಲದ ಶೋಧರೂಪ. ಸಾಹಿತ್ಯ ಮತ್ತು ತಂತ್ರಜ್ಞಾನಗಳು ಭಿನ್ನ ಸ್ವರೂಪದವು. ಒಂದು ಭಾವನೆ ಹೊಂದಿದ್ದರೆ ಮತ್ತೊಂದು ಭಾವನೆ ಇಲ್ಲದ್ದು. ಇವೆರಡರನ್ನು ಕನ್ನಡ ಜಗತ್ತು ಅನುಸಂಧಾನ ಮಾಡಿಕೊಂಡ ಬಗೆಗಳು ವಿಸ್ಮಯಕರವಾದಂಥವು. ಭಾವನಾತ್ಮಕತೆ ಹಾಗೂ ಸೌಂದರ್ಯದಿಂದ ಕೂಡಿದ ಕನ್ನಡ ಸಾಹಿತ್ಯವನ್ನು ಓದುಗರತ್ತ ಸೆಳೆಯುವಲ್ಲಿ ಕನ್ನಡ 'ತಂತ್ರಜ್ಞಾನ'ವು ಕಾರ್ಯನಿರ್ವಹಿಸಿದ ಬಗೆಗಳನ್ನು ನನ್ನ ಅಧ್ಯಯನದಲ್ಲಿ ಗುರುತಿಸಿದ್ದೇನೆ.

## ಅನುಬಂಧ

## ಪರಾಮರ್ಶನ ಗ್ರಂಥಗಳು

೧. ಅನಸೂಯ ವಿ. ಪರಗಿ, ೨೦೧೧; ಮಾತೃಭಾಷೆ ಕನ್ನಡ, ವಿವೇಕ ಪ್ರಕಾಶನ, ಚಿಕ್ಕಬಳ್ಳಾಪುರ

೨. ಅಮರೇಶ ನುಗಡೋಣಿ, ೨೦೧೪; ತತ್ವಪದ ಸಾಹಿತ್ಯ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಅಂಗಡಿ ಎಸ್.ಎಸ್., ೨೦೦೬; ಕನ್ನಡ ಹಸ್ತಪ್ರತಿ ರಚನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಓಬಳೇಶ್‌ಗಟ್ಟಿ ಆರ್., ೨೦೧೦; ಭಾಷೆ ಮತ್ತು ಭಾಷಾ ಕೌಶಲ್ಯಗಳು, ಶಿವಗಂಗಾ ಪ್ರಕಾಶನ, ತುಮಕೂರು

೫. ಕರ್ಕಿ ಡಿ.ಎಸ್., ೨೦೧೬; ಕನ್ನಡ ಛಂದೋವಿಕಾಸ, ಭಾರತ ಪ್ರಕಾಶನ, ಧಾರವಾಡ

೬. ಕಲಬುರ್ಗಿ ಎಂ.ಎಂ., ೨೦೦೭; ಮಹಾಲಿಂಗಸ್ವಾಮಿ ವಿರಚಿತ ಬಾಲರಾಮನ ಸಾಂಗತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಕಲಬುರ್ಗಿ ಎಂ.ಎಂ., ೨೦೧೦; ಮಾರ್ಗ- ೧, ೨, ೩, ೪, ಸ್ವಪ್ನ ಬುಕ್‌ಹೌಸ್, ಬೆಂಗಳೂರು

೮. ಕಲಬುರ್ಗಿ ಎಂ.ಎಂ. ೨೦೧೫, ಕನ್ನಡ ಹಸ್ತಪ್ರತಿಶಾಸ್ತ್ರ, ಸಪ್ನಬುಕ್ ಹೌಸ್, ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು

೯. ಕಾಳೇಗೌಡ ನಾಗವಾರ, ೨೦೧೯; ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೧೦. ಕೇಶವಮೂರ್ತಿ ಕೆ.ಆರ್., ೨೦೧೦; ಹಸ್ತಪ್ರತಿ ಸಂರಕ್ಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಕೈದಾಳ ರಾಮಸ್ವಾಮಿ (ಸಂ) ಗಣೇಶ, ೨೦೦೮, ಶಾಸನ ಸರಸ್ವತಿ ಗೌರವ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ

೧೨. ಕೆಂಪೇಗೌಡ ಕೆ., ೧೯೯೬; ಸಾಮಾನ್ಯ ಭಾಷಾ ವಿಜ್ಞಾನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೩. ಕೃಷ್ಣ ಪರಮೇಶ್ವರಭಟ್ಟ, ೨೦೧೩; ಭಾಷೆ ಮತ್ತು ಸಾಮಾಜಿಕ ಸಂದರ್ಭ, ಅಭಿನವ ಪ್ರಕಾಶನ, ಬೆಂಗಳೂರು

೧೪. ಗಿರಡ್ಡಿ ಗೋವಿಂದರಾಜು, ೨೦೧೪; ಸಾಹಿತ್ಯ ಮತ್ತು ಪರಂಪರೆ, ಹೇಮಂತ ಸಾಹಿತ್ಯ ಪ್ರಕಾಶನ, ಬೆಂಗಳೂರು

೧೫. ಚಂದ್ರಶೇಖರ ಕಂಬಾರ, ೨೦೦೪; ದೇಶೀಯ ಚಿಂತನ, ಅಂಕಿತ ಪುಸ್ತಕ, ಬೆಂಗಳೂರು

೧೬. ಚಂದ್ರಶೇಖರ ಕಂಬಾರ, ೨೦೧೦; ತುದಿಯಿರದ ಹಾದಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಚಿದಾನಂದಮೂರ್ತಿ ಎಂ., ೧೯೭೭, ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೮. ಚಿದಾನಂದಮೂರ್ತಿ ಎಂ., ೧೯೮೬; ಭಾಷಾ ವಿಜ್ಞಾನದ ಮೂಲತತ್ವಗಳು (ತೃಮು), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೧೯. ಚಿದಾನಂದಮೂರ್ತಿ ಎಂ., ೧೯೯೩; ಹೊಸತು ಹೊಸತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಚಿದಾನಂದಮೂರ್ತಿ ಎಂ., ೨೦೧೯, ವಚನ ಸಾಹಿತ್ಯ, ಸಾಮಾನ್ಯನಿಗೆ ಚರಿತ್ರೆ ಸಂಪುಟಗಳು, ಸಪ್ನಬುಕ್‌ಹೌಸ್, ಗಾಂಧಿನಗರ, ಬೆಂಗಳೂರು

೨೧. ಚಿದಾನಂದಮೂರ್ತಿ ಎಂ., ೨೦೦೦; ವಚನ ಸಾಹಿತ್ಯ (ದ್ವಿಮು) (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆಮಾಲೆ, ಸಂಪುಟ-೫), ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೨೨. ತಿಪ್ಪೇಸ್ವಾಮಿ ಜಿ.ಆರ್., ೨೦೦೫; ಮೌಖಿಕ ಕಥನ, ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು

೨೩. ತಿರುಮಲೇಶ ಕೆ.ವಿ., ೨೦೧೧; ಇನ್ನಷ್ಟು ಕನ್ನಡ, ಅಭಿನವ ಪ್ರಕಾಶನ, ಬೆಂಗಳೂರು

೨೪. ದೇ. ಜವರೇಗೌಡ., ೨೦೦೯; ಪೂರ್ವಕವಿಗಳಿಗೆ ನಮನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೫. ದೇವೀರಪ್ಪ ಎಚ್., ೧೯೭೭; ಹಸ್ತಪ್ರತಿಗಳ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೬. ದೇವೇಂದ್ರಕುಮಾರ ಹಕಾರಿ., ೧೯೮೫; ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೭. ನಟರಾಜ ಬೂದಾಳು, ೨೦೦೯; ನಾಗಾರ್ಜುನನ ಮೂಲಮಾಧ್ಯಮ ಕಕಾರಿಕಾ, ಅಭಿನವ ಪ್ರಕಾಶನ, ಬೆಂಗಳೂರು

೨೮. ನಟರಾಜ ಬೂದಾಳು, ೨೦೧೦; ನಾಗಾರ್ಜುನ ಅಲ್ಲಮ ಪ್ರಭು: ಒಂದು ತೌಲನಿಕ ಅಧ್ಯಯನ, ಗೋಧೂಳಿ ಪ್ರಕಾಶನ, ಬೆಂಗಳೂರು

೨೯. ನರಸಿಂಹಾಚಾರ್ ಡಿ.ಎಲ್., ೨೦೧೫; ಕನ್ನಡ ಗ್ರಂಥಸಂಪಾದನೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೩೦. ನರಸಿಂಹಮೂರ್ತಿ ಎ.ವಿ., ೨೦೦೬; ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೩೧. ನಾವಡ ಎ.ವಿ., ಬಿ.ವಿ. ಮಹಿದಾಸ, ೨೦೧೮; ಎ. ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ನಾರಾಯಣ ಕೆ.ವಿ., ೨೦೦೫; ನಮ್ಮೊಡನೆ ನಮ್ಮನುಡಿ, ಲೋಹಿಯಾ ಪ್ರಕಾಶನ, ಕ್ಷಿತಿಜ ಕಪ್ಪಗಲ್ ರೋಡ್, ಗಾಂಧಿನಗರ ಬಳ್ಳಾರಿ

೩೩. ನಾರಾಯಣ ಕೆ.ವಿ., ೨೦೦೧; ಮತ್ತೆ ಭಾಷೆಯ ಸುತ್ತಮುತ್ತ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೩೪. ನಾರಾಯಣ ಕೆ.ವಿ. (ಸಂ) ೨೦೦೯; ಭಾಷೆ (ತೃಮು) (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೫. ನಾರಾಯಣ ಕೆ.ವಿ., ೨೦೧೮; ಕನ್ನಡ ಜಗತ್ತು ಅರ್ಧ ಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ನಿರ್ಮಲ ಜಿ.ವಿ. ಎಸ್. ಕ್ಷಮಾ, ೨೦೧೦; ಗಣಕ ಲೋಕದೊಳಗೆ ಒಂದು ಪಯಣ, ಕನ್ನಡ ಗಣಕ ಪರಿಷತ್ತು, ಬೆಂಗಳೂರು

೩೭. ನಿಂಗಣ್ಣ ಚಿ.ಸಿ. (ಸಂ), ೨೦೧೨, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮು, ಗುಲ್ಬರ್ಗಾ

೩೮. ಪಾಟೀಲ್ ಮೈ.ಸಿ., ೨೦೦೯; ಇ-ಮಾಧ್ಯಮ ಮತ್ತು ಕನ್ನಡ ಸಾಹಿತ್ಯ, ಕಾರ್ತಿಕ ಪ್ರಕಾಶನ, ಬೆಂಗಳೂರು

೩೯. ಪುಟ್ಟಸ್ವಾಮಿ ಬಿ.ಎಸ್., ೨೦೦೭; ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ

೪೦. ಪುರುಷೋತ್ತಮ ಬಿಳಿಮಲೆ., ೨೦೧೩; ಬಹುರೂಪ, ಯಾಜಿ ಪ್ರಕಾಶನ, ಹೊಸಪೇಟೆ

೪೧. ಬರಗೂರು ರಾಮಚಂದ್ರಪ್ಪ, ೨೦೦೭; ಕನ್ನಡ ಪ್ರಜ್ಞೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೨. ಬಸವರಾಜ (ಸಂ), ೧೯೯೭; ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೪೩. ಬಂಡ್ಲಳ್ಳಿ ವಿಜಯಕುಮಾರ (ಸಂ), ೨೦೧೪, ಗ್ರಾಮ ನಿನಾದ (ಸ್ಮರಣ ಸಂಚಿಕೆ) ಮೇವಿ ಪಬ್ಲಿಷರ್ಸ್, ಬೆಂಗಳೂರು

೪೪. ಭಗವತಿ ಎಸ್.ಎಸ್., ಎಚ್.ಎಸ್. ಮೇಲಿನಮನಿ, ೨೦೦೪; ಕನ್ನಡ ಶಾಸನಗಳ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಸ್ಟೇಶನ್ ರೋಡ್, ಮಹೇಂದ್ರಕರ ಸರ್ಕಲ್ ಹತ್ತಿರ, ಗದಗ

೪೫. ಭವಾನಿ ಶಂಕರ್ ಎನ್., ೨೦೧೦; ಕನ್ನಡದ ಇ-ಲೋಕ, ವಿ ಶಾರದಾ ಪುಸ್ತಕ ಪ್ರಕಾಶನ, ಶಿವ, ಉಡುಪಿ ಜಿಲ್ಲೆ

೪೬. ಮಂಜುನಾಥ ಬೇವಿನಕಟ್ಟಿ, ೨೦೦೮; ಮೌಖಿಕ ಕಥನ, ಹೆಚ್.ವಿ.ಎಸ್. ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

೪೭. ಮಲ್ಲೇಪುರಂ ಜಿ. ವೆಂಕಟೇಶ (ಸಂ), ೨೦೧೦; ತೌಲನಿಕ ಕಾವ್ಯ ಚಿಂತನ, ತತ್ತ್ವ-ವ್ಯಾಪ್ತಿ-ಜಿಜ್ಞಾಸೆ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೪೮. ಮರಳುಸಿದ್ದಪ್ಪ ಕೆ., ೨೦೧೯; ಷಟ್ಪದಿ ಸಾಹಿತ್ಯ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೪೯. ಮುಖ್ಯಮಂತ್ರಿ ಚಂದ್ರು, ಎ. ಮುರಿಗೆಪ್ಪ (ಪ್ರಸಂ), ೨೦೧೦; ಆಡಳಿತ ಕನ್ನಡ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

೫೦. ಮಾಧವ ಪೆರಾಜೆ, ೨೦೦೩; ಡೆರಿಡಾ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೫೧. ಮಿರ್ಜಿ ಡಿ.ಆರ್ (ಅನು), ೨೦೧೨; ಪ್ರಾಚೀನ ಭಾರತವೆಂಬ ಅದ್ಭುತ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೫೨. ಮೊಗಳ್ಳಿ ಗಣೇಶ, ೨೦೦೯; ಮೌಖಿಕ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೩. ಮೋಹನ ಕುಂಟಾರ್ ಎ., ೨೦೧೫; ಭಾಷಾಂತರ ಪ್ರಕ್ರಿಯೆ, ಪ್ರೇರಣೆ ಪ್ರಭಾವ, ಯಾಜಿ ಪ್ರಕಾಶನ, ಭೂಮಿ, ಎಂ.ಪಿ. ಪ್ರಕಾಶನಗರ, ಹೊಸಪೇಟೆ

೫೪. ಮೋಹನ ಕುಂಟಾರ್ ಎ., ೨೦೧೬, ಮಾಧ್ಯಮಗಳು ಮತ್ತು ಭಾಷಾಂತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೫. ರವೀಂದ್ರನಾಥ ಕೆ., ೨೦೧೪; ಹಸ್ತಪ್ರತಿಗಳು ಕನ್ನಡಿಗರ ಬದುಕು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೬. ರವೀಂದ್ರನಾಥ ಕೆ., ೨೦೧೪; ಕನ್ನಡ ದಾಖಲು ಸಾಹಿತ್ಯ, ಮಂಗಳಾ ಪ್ರಕಾಶನ, ಶಿಕ್ಷಕರ ಬಡಾವಣೆ, ಅಭ್ಯುದಯ, ಎಂ.ಪಿ. ಪ್ರಕಾಶ ನಗರ, ಹೊಸಪೇಟೆ

೫೭. ರಹಮತ್ ತರೀಕೆರೆ (ಸಂ), ೨೦೦೪; ಕುಮಾರವ್ಯಾಸ ಭಾರತ; ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೮. ರಹಮತ್ ತರೀಕೆರೆ, ೨೦೦೫; ಇಲ್ಲಿ ಯಾರೂ ಮುಖ್ಯರಲ್ಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೯. ರಂ.ಶ್ರೀ ಮುಗುಳಿ, ೨೦೦೬, ಸಾಹಿತ್ಯೋಪಾಸನೆ, ಕೆ.ಆರ್. ನಿರಂಜನ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೬೦. ರಂ.ಶ್ರೀ. ಮುಗುಳಿ, ೨೦೧೧; ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್‌ಹೌಸ್, ಕೆ.ಆರ್. ಸರ್ಕಲ್, ಮೈಸೂರು

೬೧. ರಂಗರಾಜ ವನದುರ್ಗ (ಸಂ), ೨೦೦೬; ಕನ್ನಡ ಸಾಹಿತ್ಯ ಮತ್ತು ಸಮೂಹ ಮಾಧ್ಯಮ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೬೨. ರಾಜಾ ಚೆಂಡೂರು (ಕನ್ನಡ ಅನುವಾದ ಮೂಲ: ಯಂಡಮೂರಿ ವೀರೇಂದ್ರನಾಥ), ೨೦೧೨; (ದ್ವಿಮು) ಗ್ರಾಫಾಲಜಿ; ಸುಧಾ ಎಂಟರ್‌ಪ್ರೈಸಸ್, ಬೆಂಗಳೂರು

೬೩. ರಾಮಪ್ರಸಾದ ಎನ್.ಎಸ್. (ಸಂ), ೧೯೮೬, ವಿಶ್ವಕನ್ನಡ ಸಂಪುಟ-೦೧, ಕನ್ನಡ ಮತ್ತು ನಿರ್ದೇಶನಾಲಯ, ಬೆಂಗಳೂರು

೬೪. ರಾಘವೇಂದ್ರರಾವ್ ಎಚ್.ಎಸ್., ೨೦೧೪; ಹತ್ತು ದಿಕ್ಕಿನ ಬೆಳಕು (ಅನುವಾದಿತ ಬರಹಗಳು) ಕ್ರೈಸ್ಟ್ ಯೂನಿವರ್ಸಿಟಿ ಕನ್ನಡ ಸಂಘ, ಬೆಂಗಳೂರು

೬೫. ರಾಜೇಂದ್ರ ಚೆನ್ನಿ, ೨೦೧೩; ಸದ್ಯದ ಹಂಗು, ಪಲ್ಲವ ಪ್ರಕಾಶನ, ಚೆನ್ನಪಟ್ಟಣ

೬೬. ರಾಜೇಂದ್ರ ಡಿ.ಕೆ. (ಪ್ರ.ಸಂ), ೨೦೦೨; ಶ್ರೀ ಸಾಹಿತ್ಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೬೭. ರಾಧಾಕೃಷ್ಣ ಕೆ. ಉಳಿಯತ್ತಡ್ಕ (ಸಂ), ೨೦೧೧; ಕಯ್ಯಾರರ ಗದ್ಯ ಸೌರಭ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೬೮. ರಾಮಕೃಷ್ಣ ಜಿ., ೨೦೧೫; ಭಾರತೀಯ ವಿಜ್ಞಾನದ ಹಾದಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೯. ರಾಮಚಂದ್ರನ್ ಸಿ.ಎನ್., ೧೯೯೮; ತೌಲನಿಕ ಸಾಹಿತ್ಯ ಮತ್ತು ಇತರ ಲೇಖನಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೭೦. ರಾಮಚಂದ್ರನ್ ಸಿ.ಎನ್., ೨೦೧೦; ಹೊಸ ಮಡಿಯ ಮೇಲೆ ಚದುರಂಗ (ಮ.ಮು), ಸಪ್ನ ಬುಕ್ ಹೌಸ್, ಬೆಂಗಳೂರು

೭೧. ರಾಮಚಂದ್ರನ್ ಸಿ.ಎನ್., ೨೦೧೧; ಅಖ್ಯಾನ-ವ್ಯಾಖ್ಯಾನ, ಸಪ್ನ ಬುಕ್‌ಹೌಸ್, ಬೆಂಗಳೂರು

೭೨. ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್., ೨೦೧೯; ಕನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ೫೩, ಶ್ಯಾಮಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು

೭೩. ವಸು, ೨೦೦೪; ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು

೭೪. ವಸಂತಕುಮಾರ್. ೨೦೦೭; ಕನ್ನಡ ಭಾಷಾಲೋಕ, ಸುಮುಖ ಪ್ರಕಾಶನ, ಮಾಗಡಿ ರಸ್ತೆ, ಬೆಂಗಳೂರು

೭೫. ವೀರಣ್ಣ ಸಿ., ೨೦೧೯; ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ., ಎಂ.ಜಿಸಿ ಸೆಂಟರ್, ಕ್ರೆಸೆಂಟ್ ರೋಡ್, ಬೆಂಗಳೂರು

೭೬. ವೀರೇಶ ಬಡಿಗೇರ, ೨೦೦೦, ಕನ್ನಡ ಹಸ್ತಪ್ರತಿಗಳು ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೭. ವೀರೇಶ ಬಡಿಗೇರ, ಎಸ್.ಆರ್. ಚನ್ನವೀರಪ್ಪ (ಸಂ), ೨೦೦೨; ವಿಷ್ಣುಶರ್ಮನ ಪಂಚತಂತ್ರ ಕಥೆಗಳ ಕನ್ನಡ ಸಾರಸಂಗ್ರಹ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೮. ವೀರೇಶ ಬಡಿಗೇರ, ಎಸ್.ಆರ್. ಚನ್ನವೀರಪ್ಪ (ಸಂ), ೨೦೦೨, ಹಸ್ತಪ್ರತಿ ವ್ಯಾಸಂಗ (೩), ಕಂಪ್ಯೂಟರ್ ಮತ್ತು ಕನ್ನಡ ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೯. ವೀರೇಶ ಬಡಿಗೇರ(ಸಂ), ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟ-೨-೪-೫, ೨೦೦೦, ೨೦೦೬, ೨೦೧೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೦. ವೀರೇಶ ಬಡಿಗೇರ, ೨೦೦೫; ಹಲಗೆ ಬಳಪ, ಮಯ ಪ್ರಕಾಶನ, ಕಮಲಾಪುರ

೮೧. ವೀರೇಶ ಬಡಿಗೇರ, ೨೦೦೬; ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೨. ವೀರೇಶ ಬಡಿಗೇರ, ೨೦೧೨; ಕನ್ನಡ ಸಾಹಿತ್ಯ ಪರಂಪರೆ ಮತ್ತು ಕಂಬಾರರು, ಅಂಕಿತ ಪುಸ್ತಕ, ಬೆಂಗಳೂರು

೮೩. ವೀರೇಶ ಬಡಿಗೇರ (ಸಂ), ೨೦೧೪; ಹಸ್ತಪ್ರತಿ ವ್ಯಾಸಂಗ-೧೩ ಮತ್ತು ೧೪ (೨೦೧೫), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೪. ವೀರೇಶ ಬಡಿಗೇರ, ೨೦೧೫; ಹಸ್ತಪ್ರತಿ ಸಂಕಥನ, ಮಯ ಪ್ರಕಾಶನ, ಕಮಲಾಪುರ

೮೫. ವೀರೇಶ ಬಡಿಗೇರ, ೨೦೧೭, ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೬. ವೆಂಕಟಾಚಲಶಾಸ್ತ್ರೀ ಟಿ.ವಿ., ೨೦೧೧; ಕನ್ನಡ ಛಂದಸ್ಸು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು

೮೭. ವೆಂಕಟೇಶಮೂರ್ತಿ ಎಚ್.ಎಸ್., ೨೦೧೯; ಕೀರ್ತನಕಾರರು, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೮೮. ವೇಣುಗೋಪಾಲ ಟಿ.ಎಸ್., ೨೦೦೯; ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೮೯. ವೇಣುಗೋಪಾಲ ಟಿ.ಎಸ್. ಮತ್ತು ಶೈಲಜಾ (ಅನು), ೨೦೧೧; (ಮೂಲ ಡಿ.ಡಿ. ಕೊಸಾಂಬಿ) ಪ್ರಾಚೀನ ಭಾರತದಲ್ಲಿ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ, ಚಿಂತನ ಪುಸ್ತಕ, ಬೆಂಗಳೂರು

೯೦. ಶಂಕರಭಟ್ ಡಿ.ಎನ್., ೨೦೧೧; ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಭಾಷಾ ಪ್ರಕಾಶನ, ತೀರ್ಥಹಳ್ಳಿ

೯೧. ಶಂಕರಭಟ್ ಡಿ.ಎನ್., ೨೦೧೯; ಕನ್ನಡ ಬರಹದ ಸೊಲ್ಲರಿಮೆ, ಮಂಚಾಲೆ, ಸಾಗರ

೯೨. ಶಾರದಾ ಎಸ್. ಭಟ್, ಎಂ. ಜಯಕರ ಭಂಡಾರಿ, ೨೦೧೧; ಕಂಪ್ಯೂಟರ್ ಅನ್ವಯಗಳು, ಎಸ್.ಎಂ.ವಿ. ಪ್ರಕಾಶನ, ಕೋಲಾರ

೯೩. ಶಿವರುದ್ರಪ್ಪ ಜಿ.ಎಸ್., ೨೦೧೦; ಕನ್ನಡ ಸಾಹಿತ್ಯ ಸಮೀಕ್ಷೆ (ಎಂಟನೇ ಮುದ್ರಣ), ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು

೯೪. ಶಿವರುದ್ರಪ್ಪ ಜಿ.ಎಸ್., ೨೦೧೯; ಕನ್ನಡ ಸಾಹಿತ್ಯ ಸಮೀಕ್ಷೆ, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೯೫. ಶಿವಾರೆಡ್ಡಿ ಕೆ.ಸಿ., ಎಸ್.ಬಿ. ಲಕ್ಷ್ಮೀಕಾಂತ (ಸಂ), ೨೦೧೭; ಈಶ್ವರ್ ಕು. ಮಿರ್ಜಿ ರಿಜಿಸ್ಟ್ರಾರ್, ಕುವೆಂಪು ಭಾಷಾ ಪ್ರಾಧಿಕಾರ, ಕಲಾಗ್ರಾಮ ಜ್ಞಾನಭಾರತಿ, ಮಲ್ಲತ್ತಹಳ್ಳಿ ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು

೯೬. ಶ್ರೀಕಂಠ ಕೂಡಿಗೆ, ೧೯೯೪; ಕನ್ನಡ ಲಾವಣಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೯೭. ಶ್ರೀಧರ ಎಸ್.ಎನ್., ೧೯೯೫; ಇಂದಿನ ಕನ್ನಡ ರಚನೆ ಮತ್ತು ಬಳಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯೮. ಶೆಟ್ಟರ್ ಎಸ್. (ಸಂ), ೨೦೧೭, ಹಳಗನ್ನಡ ಭಾಷೆ, ಭಾಷಾ ವಿಕಾಸ, ಭಾಷಾ ಬಾಂಧವ್ಯ, ಅಭಿನವ ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು

೧೦೦. ಶೆಟ್ಟರ್ ಎಸ್., ೨೦೧೭; ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ, ಅಭಿನವ ೧೭//೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು

೧೦೧. ಶೇಷಗಿರಿ ರಾವ್ ಎಲ್.ಎಸ್., ೨೦೧೧; ಇಂಗ್ಲಿಷ ಭಾಷೆಯಲ್ಲಿ ಆಧುನಿಕ ಸಾಹಿತ್ಯ ವಿಮರ್ಶೆ (ಮೂ.ಮು), ಹೇಮಂತ ಪ್ರಕಾಶನ, ಬೆಂಗಳೂರು

೧೦೨. ಶೇಷಗಿರಿರಾವ್ ಎಲ್.ಎಸ್., ೨೦೧೯; ಹೊಸಗನ್ನಡ ಸಾಹಿತ್ಯ ಚರಿತ್ರೆ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೧೦೩. ಶ್ರೀನಿವಾಸ ಹಾವನೂರು, ೨೦೦೨; ಕನ್ನಡ ವ್ಯಾಸಾಂಗಕ್ಕೆ ಕಂಪ್ಯೂಟರ್ ಸಹಾಯ, ಪ್ರೊ.ಎ.ಸಿ. ದೇವೇಗೌಡ ಮತ್ತು ಶ್ರೀಮತಿ ಜಯಮ್ಮ ಶೈಕ್ಷಣಿಕ ಟ್ರಸ್ಟ್, ರಾ.ವಿ. ಅಧ್ಯಾಪಕರ ಕಾಲೇಜು, ಬೆಂಗಳೂರು

೧೦೪. ಶ್ರೀನಿವಾಸ ಹಾವನೂರ, ೧೯೭೪, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

೧೦೫. ಶ್ರೀನಿವಾಸಮೂರ್ತಿ ಕಾ.ವೆಂ. (ಸಂ), ೧೯೯೮; ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು

೧೦೬.ಶ್ರೀನಿವಾಸಯ್ಯ ಹೊ., ೨೦೧೨; ತಂತ್ರಜ್ಞಾನದ ಜನಕರು, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು

೧೦೭.ಸಣ್ಣಯ್ಯ ಬಿ.ಎಸ್., ೧೯೭೧; ಗ್ರಂಥ ಸಂರಕ್ಷಣೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೦೮.ಸಬಿಹಾ ಭೂಮಿಗೌಡ (ಸಂ), ೨೦೦೭; ಕನ್ನಡ ಸಾಹಿತ್ಯ ಮೀಮಾಂಸೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೦೯.ಸಾಂಬಮೂರ್ತಿ (ಸಂ), ೨೦೦೯, ಭಾಷೆ ಮತ್ತು ತಂತ್ರಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧೦.ಸೀತಾರಾಮಯ್ಯ ಎಂ.ವಿ. (ಸಂ), ೨೦೧೫; ಕವಿರಾಜಮಾರ್ಗಂ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

೧೧೧.ಸೀತಾರಾಮಯ್ಯ ಎಂ.ವಿ., ೨೦೧೯; ಶಾಸ್ತ್ರ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೧೧೨.ಸೂರ್ಯನಾರಾಯಣಸ್ವಾಮಿ ಎ.ವಿ., ೨೦೧೦; ಕನ್ನಡ ಕಾವ್ಯಗಳ ಗೆಜ್ಜೆನಾದ, ಹನ್ಯಾಳು ಪ್ರಕಾಶನ, ಮೈಸೂರು

೧೧೩.ಹರೀಶ ಜಿ.ಬಿ. (ಅನು), ೨೦೧೩; ತಂತ್ರಶಾಸ್ತ್ರ ಪ್ರವೇಶ, (ಮೂಲ: ಸರ್ ಜಾನ್ ವುಡ್ರೋಸ್), ಅಂಕಿತ ಪುಸ್ತಕ, ಬೆಂಗಳೂರು

೧೧೪.ಹಿರೇಮಠ ಎಸ್.ಎಸ್., ೨೦೦೫; ಸಮಾಜ ಸಂಸ್ಕೃತಿ ಸಂಘರ್ಷ, ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು

೧೧೫.ಹಿರೇಮಠ ಬಿ.ಕೆ., ೧೯೯೨; ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ, ಕಸಬಾ ಜಂಬಗಿ, ವಿಜಾಪುರ ಜಿಲ್ಲೆ

೧೧೬.ಹು.ಕಾ. ಜಯದೇವ್, ೨೦೧೯; ಶಾಸನ ಮತ್ತು ಗದ್ಯ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೧೧೭.ಹಂಪ ನಾಗರಾಜಯ್ಯ, ೨೦೧೯; ಸಾಂಗತ್ಯ ಕವಿಗಳು, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಸಂಪುಟಗಳು, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೧೧೮.ಹೊನಗುಡಿ ಎಸ್.ಬಿ., ೨೦೧೪; ಗಣಕಯಂತ್ರ ಶಿಕ್ಷಣ, ಜ್ಞಾನಧಾರೆ ಪ್ರಕಾಶನ, ಗದಗ

**ಪಿಎಚ್.ಡಿ. ಮಹಾಪ್ರಬಂಧಗಳು**

೧. ಉಮೇಶ ಎಂ. ಹಡಗಲಿ, ೨೦೧೩; ಕನ್ನಡ ಸಂಸ್ಕೃತಿ ಮತ್ತು ಗ್ರಂಥ ಸಂರಕ್ಷಣಾ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಕಂಬಾರ ರಾಜು ನಾಗಪ್ಪ, ೨೦೧೮; ಕುಶಲಕರ್ಮಿಗಳು ಮತ್ತು ಶಿರಸಂಗಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಬಸವರಾಜ ಡಿ., ೨೦೧೬; ಶ್ರೀನಿವಾಸ ಅವರ ಸಮಗ್ರ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಬಾಣದ ಮಂಜುನಾಥ, ೨೦೧೭; ಹಸ್ತಪ್ರತಿ ಭಂಡಾರಗಳು: ಪರಂಪರೆ ವರ್ತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಪೂರ್ಣಿಮಾ ಟಿ.ಸಿ., ೨೦೦೧; ಸಮೂಹ ಮಾಧ್ಯಮ ಮತ್ತು ಕನ್ನಡ ಅಭಿವೃದ್ಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ವಾಸುದೇವಶೆಟ್ಟಿ, ೨೦೦೨; ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಲೇಖನಗಳು**

೧. ಕೆಂಪೇಗೌಡ ಟಿ.ಕೆ., ೨೦೧೨, ಭಾಷಾ ತಂತ್ರಜ್ಞಾನ ಮತ್ತು ಜಾಗತೀಕರಣ ಹಾಗೂ ಭಾಷಾ ತಂತ್ರಜ್ಞಾನದ ಸಾಧ್ಯತೆಗಳು, ಆ ಮುಖ ಈ ಮುಖ, ಕಣ್ವ ಪ್ರಕಾಶನ, ಬೆಂಗಳೂರು

೨. ಗಂಗಾಧರ ಟಿ.ಕೆ., ಅಕ್ಟೋಬರ್ ೨೦೧೭, ಎಫ್.ಎಂ. ರೇಡಿಯೋ ತಂತ್ರಜ್ಞಾನದ ಜನಕ ಇ.ಎಚ್. ಆರ್ಮ್‌ಸ್ಟ್ರಾಂಗ್, ವಿಜ್ಞಾನ ಸಂಗಾತಿ ಮಾಸ ಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಚಿದಾನಂದ ಕೆ., ೧೯೮೫; ಕನ್ನಡ ಮತ್ತು ಕಂಪ್ಯೂಟರ್ ಕೃತಿ ವಿಶ್ವಕನ್ನಡ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೪. ನರಸಿಂಹಮೂರ್ತಿ ಜಿ.ಎನ್., ೨೦೧೨, ಕನ್ನಡ ತಂತ್ರಾಂಶಗಳು ಒಂದು ನೋಟ, ಸಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು

೫. ನಾರಾಯಣ ಕೆ.ವಿ., ೨೦೦೯; ಕನ್ನಡ ಮತ್ತು ತಂತ್ರಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ಭಾರತಿ ಎಸ್. ಗದ್ದಿ, ೨೦೧೮; ಕನ್ನಡ ಭಾಷೆ ಮತ್ತು ತಂತ್ರಜ್ಞಾನ, ವಿಹಂಗಮ ಪುಸ್ತಕ, ಸೌಮ್ಯ ಪ್ರಕಾಶನ, ವಿಜಯಪುರ

೭. ರಾಜಶೇಖರ ಬಿರಾದಾರ, ೨೦೧೮, ಕನ್ನಡ ಸಾಹಿತ್ಯ ಮತ್ತು ಅಂತರಜಾಲ, ವಿಹಂಗಮ ಪುಸ್ತಕ ಪ್ರಕಾಶನ, ವಿಜಯಪುರ

೮. ವಿಜಯ ಎಂ.ಎಸ್., ಅಕ್ಟೋಬರ್ ೨೦೧೭, ಆಕಾಶವಾಣಿ–ಭಾರತದ ತಂತ್ರಜ್ಞಾನಕ್ಕೆ ಮೈಸೂರಿನ ಕೊಡುಗೆ, ವಿಜ್ಞಾನ ಸಂಗಾತಿ ಮಾಸಪತ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ವೇದಾಂತ ಎಂ. ಏಳಂಜಿ, ೨೦೧೮; ಕನ್ನಡ ಸಾಹಿತ್ಯ ಮತ್ತು ಫೇಸ್‌ಬುಕ್, ವಿಹಂಗಮ ಪುಸ್ತಕ ಪ್ರಕಾಶನ, ವಿಜಯಪುರ

೧೦. ಶೃತಿ ಚಿನಗುಂಡಿ, ೨೦೧೮; ಕನ್ನಡ ಸಾಹಿತ್ಯ ಮತ್ತು ಅಂತರಜಾಲ, ವಿಹಂಗಮ ಪುಸ್ತಕ ಪ್ರಕಾಶನ, ವಿಜಯಪುರ

೧೧. ಸಂತೋಷಕುಮಾರ ಗುಲ್ವಾಡಿ, ೧೯೮೬, ಸಾಹಿತ್ಯ ಓದುಗನನ್ನು ತಲುಪುವ ಬಗೆ, ವಿಶ್ವಕನ್ನಡ ಸಂಪುಟ–೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

**ಪತ್ರಿಕಾ ಪ್ರಕಟಣೆಗಳು**

೧. ಗಟ್ಟಿ ಕೆ.ಟಿ., ೧೯.೧೨.೨೦೧೮, ಭಾಷೆ ಬೆಳೆಯುವ ಬಗೆ, ಪ್ರಜಾವಾಣಿ ಪು. ೬

೨ ಗೀತಾವಸಂತ್ ಇಜಿಮಾನ್, ೧೨.೦೯.೨೦೧೯, ಸಮೂಹ ಮಾಧ್ಯಮ: ಬದಲಾದ ವ್ಯಾಖ್ಯಾನ, ಪ್ರಜಾವಾಣಿ ಪುರವಣಿ, ಪು. ೬

೩. ಗುರುಬಸವರಾಜ ಆರ್.ಬಿ., ೨೬.೦೯.೨೦೧೯, ಸಾಹಿತ್ಯದ ರುಚಿ ಉಣಿಸುವ ನೆಲ್ಲಿಕಾಯಿ, ಪ್ರಜಾವಾಣಿ ಯುವ, ಪು. ೧

೪. ಚಿದಾನಂದ ಸಾಲಿ, ೨೨.೦೯.೨೦೧೯, ಭಿನ್ನ ಭಾಷೆಯಲಿ, ಭಾವ ದೀಪ್ತಿಯಲಿ, ಪ್ರಜಾವಾಣಿ, ಭಾನುವಾರದ ಪುರವಣಿ, ಪು. ೧

೫. ದೀಪಕ ಕರಾಡೆ, ೦೮.೧೧.೨೦೧೮, ಕನ್ನಡ ಇರಲಿ ತಂತ್ರಜ್ಞಾನದ ಸಂಗಡ, ಪ್ರಜಾವಾಣಿ ಯುವ, ಪು. ೧

೬. ದೇವಿ ಜಿ.ಎನ್., ೨೧.೦೪.೨೦೧೯, ಉಪಭಾಷೆಗಳು ಕನ್ನಡದ ಹೆಮ್ಮೆ, ಪ್ರಜಾವಾಣಿ ಪುರವಣಿ, ಪು. ೧

೭. ಪರಮೇಶ್ವರಯ್ಯ ಸೊಪ್ಪಿಮಠ, ೩೧.೧೦.೨೦೧೯, ಭಾಷೆಯ ಬೆಳವಣಿಗೆಗೆ ಕಾವ್ಯ ಕಲಿಕೆ, ಪ್ರಜಾವಾಣಿ ಶಿಕ್ಷಣ, ಪು. ೯

೮. ಬಳಕೂರು ವಿ. ಎಸ್. ನಾಯಕ, ೩೦.೧೦.೨೦೧೯, ಭಾಷಾ ವಿಷಯ ಕಡೆಗಣಿಸದಿರಿ, ಪ್ರಜಾವಾಣಿ ಶಿಕ್ಷಣ, ಪು. ೧

೯. ಬಾಲಾಜಿ ಟಿ.ಆರ್. ೨೪.೦೭.೨೦೧೯, ಇ-ಗ್ರಂಥಾಲಯ ವಿದ್ಯಾರ್ಥಿಗಳ ವಿಸ್ಮಯ ಲೋಕ, ಪ್ರಜಾವಾಣಿ ಶಿಕ್ಷಣ, ಪು. ೨

೧೦. ಭಾಗ್ಯಲಕ್ಷ್ಮಿ ಪದಕಿ, ೧೭.೧೧.೨೦೧೯, ಆನ್‌ಲೈನ್‌ನಲ್ಲಿ ಇಗೋ ಕನ್ನಡ, ಪ್ರಜಾವಾಣಿ, ಭಾನುವಾರದ ಪುರವಣಿ, ಪು. ೪

೧೧. ಬೇಂದ್ರೆ ಮಂಜುನಾಥ, ೨೮.೦೮.೨೦೧೯, ಕನ್ನಡದಲ್ಲಿ ತಂತ್ರಜ್ಞಾನ ಮಾಹಿತಿಗೆ ಟಿಕ್ ಕನ್ನಡ ಇನ್, ಪ್ರಜಾವಾಣಿ ಶಿಕ್ಷಣ, ಪು. ೧

೧೨. ಬೇಳೂರು ಸುದರ್ಶನ, ೧೬.೦೭.೨೦೧೭, ಕನ್ನಡದ ಉಳಿವಿಗೆ ಒಂದೇ ಹಾದಿ ಮುಕ್ತಜ್ಞಾನ, ಮುಕ್ತ ತಂತ್ರಜ್ಞಾನ, ಪ್ರಜಾವಾಣಿ ಮುಕ್ತಛಂದ, ಪು. ೬

೧೩. ಮಂಜುಶ್ರೀ ಎಂ. ಕಡಕೋಳ, ೧೩.೦೨.೨೦೧೯, ಯೂಟ್ಯೂಬ್‌ನಲ್ಲಿ ಕವಿ ಸಮಯ! ಡಿಜಿಟಲ್‌ಗೆ ಪಿಯು ಸಾಹಿತ್ಯ ಪಠ್ಯ, ಪ್ರಜಾವಾಣಿ ಶಿಕ್ಷಣ, ಪು. ೧

೧೪. ರಶ್ಮಿ ಕೆ., ೩೧.೧೦.೨೦೧೯, ಹಳೆಯ ಕೃತಿಗಳ ಡಿಜಿಟಲೀಕರಣ, ಪ್ರಜಾವಾಣಿ ಯುವ, ಪು. ೧

೧೫. ವಸಂತಶೆಟ್ಟಿ, ೦೧.೧೧.೨೦೧೯, ಕನ್ನಡವನ್ನು ಜುಟ್ಟಿನ ಮಲ್ಲಿಗೆಗೆ ಕಟ್ಟಿ ಹಾಕದೆ ಉಳಿದರೆ ಸಾಕೇ? ಬೆಳೆಯ ಬೇಡವೇ?, ಪ್ರಜಾವಾಣಿ, ಪು. ೬

೧೬. ವಿಶ್ವನಾಥ ಎಸ್., ೩೧.೧೦.೨೦೧೯, ಮಾತೃಭಾಷೆಗೆ ತಂತ್ರಾಂಶದ ಧ್ವನಿ, ಪ್ರಜಾವಾಣಿ ಯುವ, ಪು. ೧

೧೭. ಸಬಿತಾ ಬನ್ನಾಡಿ, ೩೦.೧೦.೨೦೧೯, ಸಾಹಿತ್ಯವೆಂಬ ನಿತ್ಯ ಸಚಿವ ಮಂಡಲ, ಪ್ರಜಾವಾಣಿ ಪುರವಣಿ, ಪು. ೬

೧೮. ಸೂರ್ಯನಾರಾಯಣ ವಿ., ೦೯.೦೮.೨೦೧೭, ಮಾತು ಅಕ್ಷರ ರೂಪಕ್ಕೆ ಇಳಿಸುವ 'ಲಿಪಿಕಾರ', ಪ್ರಜಾವಾಣಿ ವಾಣಿಜ್ಯ, ಪು. ೨

## ಕೋಶಗಳು


೧. ಸಂಕ್ಷಿಪ್ತ ಕನ್ನಡ ನಿಘಂಟು, ೧೯೮೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ಸಂಕ್ಷಿಪ್ತ ಕನ್ನಡ ನಿಘಂಟು ಪರಿಷ್ಕೃತ, ೨೦೦೧, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

೩. ಸಂಕ್ಷಿಪ್ತ ಕನ್ನಡ–ಇಂಗ್ಲಿಷ್ ನಿಘಂಟು, ೨೦೧೭, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು

೪. ಶೇಷಗಿರಿರಾವ್ ಎಲ್.ಎಸ್., ೨೦೦೮, ಇಂಗ್ಲಿಷ್–ಇಂಗ್ಲಿಷ್ ಕನ್ನಡ ನಿಘಂಟು, ಸುಭಾಷ್ ಸ್ಟೋರ್ಸ್ ಬುಕ್ ಕಾರ್ನರ್, ಬೆಂಗಳೂರು

೫. ಗುರುನಾಥ ಜೋಶಿ, ೨೦೧೧, ಕನ್ನಡ ಕನ್ನಡ ಶಬ್ದಕೋಶ, ಸಂಕೇಶ್ವರ ಪ್ರಿಂಟರ್ಸ್ ಪ್ರೈ.ಲಿ. ಗದಗ

೬. ಭಾರದ್ವಜ ಡಿ.ಕೆ., ೨೦೧೫, ಸ್ಟಾಂಡರ್ಡ್, ಡಿಕ್ಶನರಿ, ಇಂಗ್ಲಿಷ್–ಇಂಗ್ಲಿಷ್ ಕನ್ನಡ, ಸಂಕೇಶ್ವರ ಪ್ರಿಂಟರ್ಸ್, ಗದಗ

